ಹರಿಶ್ಚಂದ್ರೋ ರಂತಿದೇವ ಉಂಛವೃತ್ತಿಃ ಶಿಬಿರ್ಬಲಿಃ ।
ವ್ಯಾಧಃ ಕಪೋತೋ ಬಹವೋ ಹ್ಯಧ್ರುವೇಣ ಧ್ರುವಂ ಗತಾಃ
॥ ೨೦ ॥

ಶ್ರೀಶುಕ ಉವಾಚ

ಸ್ವರೈರಾಕೃತಿಭಿಸ್ತಾಂಸ್ತು ಪ್ರಕೋಷ್ಠೈರ್ಜ್ಯಾಹತೈರಪಿ ।
ರಾಜನ್ಯಬಂಧೂನ್ ವಿಜ್ಞಾಯ ದೃಷ್ಟಪೂರ್ವಾನಚಿಂತಯತ್
॥ ೨೧ ॥

ರಾಜನ್ಯಬಂಧವೋ ಹ್ಯೇತೇ ಬ್ರಹ್ಮಲಿಂಗಾನಿ ಬಿಭ್ರತಿ ।
ದದಾಮಿ ಭಿಕ್ಷಿತಂ ತೇಭ್ಯ ಆತ್ಮಾನಮಪಿ ದುಸ್ತ್ಯಜಮ್
॥ ೨೨ ॥

ಬಲೇರ್ನು ಶ್ರೂಯತೇ ಕೀರ್ತಿರ್ವಿತತಾ ದಿಕ್ಷ್ವಕಲ್ಮಷಾ ।
ಐಶ್ವರ್ಯಾದ್ಭ್ರಂಶಿತಸ್ಯಾಪಿ ವಿಪ್ರವ್ಯಾಜೇನ ವಿಷ್ಣುನಾ
॥ ೨೩ ॥

ಶ್ರಿಯಂ ಜಿಹೀರ್ಷತೇಂದ್ರಸ್ಯ ವಿಷ್ಣವೇ ದ್ವಿಜರೂಪಿಣೇ ।
ಜಾನನ್ನಪಿ ಮಹೀಂ ಪ್ರಾದಾದ್ವಾರ್ಯಮಾಣೋಽಪಿ ದೈತ್ಯರಾಟ್
॥ ೨೪ ॥

ಜೀವತಾ ಬ್ರಾಹ್ಮಣಾರ್ಥಾಯ ಕೋ ನ್ವರ್ಥಃ ಕ್ಷತ್ರಬಂಧುನಾ ।
ದೇಹೇನ ಪತಮಾನೇನ ನೇಹತಾ ವಿಪುಲಂ ಯಶಃ
॥ ೨೫ ॥

ಇತ್ಯುದಾರಮತಿಃ ಪ್ರಾಹ ಕೃಷ್ಣಾರ್ಜುನವೃಕೋದರಾನ್ ।
ಹೇ ವಿಪ್ರಾ ವ್ರಿಯತಾಂ ಕಾಮೋ ದದಾಮ್ಯಾತ್ಮಶಿರೋಽಪಿ ವಃ
॥ ೨೬ ॥

ಶ್ರೀಭಗವಾನುವಾಚ

ಯುದ್ಧಂ ನೋ ದೇಹಿ ರಾಜೇಂದ್ರ ದ್ವಂದ್ವಶೋ ಯದಿ ಮನ್ಯಸೇ ।
ಯುದ್ಧಾರ್ಥಿನೋ ವಯಂ ಪ್ರಾಪ್ತಾ ರಾಜನ್ಯಾ ನಾನ್ನಕಾಂಕ್ಷಿಣಃ
॥ ೨೭ ॥

ಅಸೌ ವೃಕೋದರಃ ಪಾರ್ಥ-
ಸ್ತಸ್ಯ ಭ್ರಾತಾರ್ಜುನೋ ಹ್ಯಯಮ್ ।
ಅನಯೋರ್ಮಾತುಲೇಯಂ ಮಾಂ
ಕೃಷ್ಣಂ ಜಾನೀಹಿ ತೇ ರಿಪುಮ್ ॥ ೨೮ ॥

ಜರಾಸಂಧನೇ! ನಿನಗೆ ತಿಳಿದಿರುವಂತೆ ಹರಿಶ್ಚಂದ್ರ, ರಂತಿದೇವ, ಉಂಛವೃತ್ತಿಯಿಂದ ಜೀವಿಸುತ್ತಿದ್ದ ಮುದ್ಗಲ, ಶಿಬಿ, ಬಲಿ, ವ್ಯಾಧ ಮತ್ತು ಕಪೋತ ಮುಂತಾದ ಬಹಳಷ್ಟು ಜನರು ಅತಿಥಿಗಳಿಗೆ ತಮ್ಮ ಸರ್ವಸ್ವವನ್ನು ಕೊಟ್ಟು ಈ ನಾಶಯುಕ್ತವಾದ ಶರೀರದ ಮೂಲಕ ಅವಿನಾಶೀ ಪದವನ್ನು ಪಡೆದುಕೊಂಡಿರುವರು. ಆದಕ್ಕಾಗಿ ನೀನೂ ನಮ್ಮನ್ನು ನಿರಾಶೆಗೊಳಿಸಬೇಡ. ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಜರಾಸಂಧನು ಅವರ ಮಾತಿನ ಧ್ವನಿಯನ್ನೂ, ದೇಹದ ಆಕೃತಿಯನ್ನೂ, ಬಿಲ್ಲಿನ ಹೆದೆಯನ್ನು ಬಾರಿ-ಬಾರಿಗೂ ಸೆಳೆದು ಜಡ್ಡು ಕಟ್ಟಿರುವ ಅಂಗೈಯನ್ನು ನೋಡಿ ಇವರು ಬ್ರಾಹ್ಮಣರಾಗಿರದೆ ಕ್ಷತ್ರಿಯರೇ ಆಗಿದ್ದಾರೆಂದೂ ನಿಶ್ಚಯಿಸಿಕೊಂಡನು. ಅವನು ಇವರನ್ನು ಎಲ್ಲಿಯೋ ನೋಡಿರುವುದಾಗಿ ಅಂದು ಕೊಂಡನು. ॥ ೨೧ ॥ ಇವರು ಕ್ಷತ್ರಿಯರೇ ಆಗಿದ್ದರೂ ನನ್ನ ಭಯದಿಂದ ಬ್ರಾಹ್ಮಣ ವೇಷವನ್ನು ಧರಿಸಿ ಬಂದಿರುವರು. ಆದ್ದರಿಂದ ಇವರು ಏನನ್ನು ಯಾಚಿಸಿದರೂ ನಾನು ಕೊಟ್ಟುಬಿಡುತ್ತೇನೆ. ಅತ್ಯಂತ ಪ್ರಿಯವಾದ ಮತ್ತು ತ್ಯಜಿಸಲು ದುಸ್ತರವಾದ ಈ ಶರೀರವನ್ನೇ ಕೇಳಿದರೂ ಕೊಟ್ಟುಬಿಡುವೆನು ಎಂದು ಮನಸ್ಸಿನಲ್ಲೇ ಯೋಚಿಸಿದನು. ॥ ೨೨ ॥ ಭಗವಂತನಾದ ವಿಷ್ಣುವು ಬ್ರಾಹ್ಮಣನ ವೇಷವನ್ನು ಧರಿಸಿ ಬಲಿಚಕ್ರವರ್ತಿಯ ರಾಜ್ಯೈಶ್ವರ್ಯಗಳೆಲ್ಲವನ್ನೂ ಅಪಹರಿಸಿಬಿಟ್ಟಿದ್ದನು. ಆದರೆ ಬಲಿಯ ಧವಳ ಕೀರ್ತಿಯು ಈಗಲೂ ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡಿದೆ. ಇಂದು ಕೂಡ ಜನರು ಆದರದಿಂದ ಅದನ್ನು ಕೊಂಡಾಡುತ್ತಾ ಇದ್ದಾರಲ್ಲ! ॥ ೨೩ ॥ ಭಗವಾನ್ ವಿಷ್ಣುವು ದೇವೇಂದ್ರನ ರಾಜ್ಯಲಕ್ಷ್ಮಿಯನ್ನು ಬಲಿಯಿಂದ ಕಸಿದುಕೊಂಡು ಅವನಿಗೆ ಕೊಡಲೆಂದೇ ಬ್ರಾಹ್ಮಣ ವೇಷವನ್ನು ಧರಿಸಿದ್ದನೆಂಬುದರಲ್ಲಿ ಸಂದೇಹವಿಲ್ಲ. ದೈತ್ಯರಾಜ ಬಲಿಗೂ ಇದು ತಿಳಿದಿತ್ತು. ಗುರುಗಳಾದ ಶುಕ್ರಾಚಾರ್ಯರೂ ಅವನನ್ನು ತಡೆದಿದ್ದರೂ ಅವನು ಭೂ ದಾನವನ್ನು ಮಾಡಿಯೇ ಬಿಟ್ಟನು. ॥ ೨೪ ॥ ಈ ಶರೀರವು ನಾಶವುಳ್ಳದ್ದು, ಈ ಶರೀರದಿಂದ ಯಾರು ವಿಪುಲವಾದ ಯಶಸ್ಸನ್ನು ಗಳಿಸುವುದಿಲ್ಲವೋ ಮತ್ತು ಯಾವ ಕ್ಷತ್ರಿಯನು ಬ್ರಾಹ್ಮಣರಿಗಾಗಿಯೇ ಜೀವಿಸುವುದಿಲ್ಲವೋ ಅವನು ಬದುಕಿರುವುದು ವ್ಯರ್ಥವಾದುದೆಂದೇ ನನ್ನ ನಿಶ್ಚಯವು. ॥ ೨೫ ॥ ಪರೀಕ್ಷಿತನೇ! ನಿಜವಾಗಿಯೂ ಜರಾಸಂಧನ ಬುದ್ಧಿಯು ಉದಾರವಾಗಿತ್ತು. ಮೇಲಿನಂತೆ ವಿಚಾರಮಾಡಿ ಅವನು ಬ್ರಾಹ್ಮಣ ವೇಷಧಾರಿ ಶ್ರೀಕೃಷ್ಣ ಅರ್ಜುನ ಮತ್ತು ಭೀಮಸೇನರಲ್ಲಿ ಹೇಳಿದನು - ಎಲೈ ಬ್ರಾಹ್ಮಣರೇ! ನಿಮಗೆ ಬೇಕಾದ್ದನ್ನು ಕೇಳಿರಿ. ನನ್ನ ತಲೆಯನ್ನೇ ಬಯಸಿದರೂ ನಿಮಗೆ ಕೊಟ್ಟು ಬಿಡುತ್ತೇನೆ. ॥ ೨೬ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ರಾಜೇಂದ್ರನೇ! ನಾವು ಅನ್ನಾಪೇಕ್ಷಿಗಳಾದ ಬ್ರಾಹ್ಮಣರಲ್ಲ, ನಾವು ನಿನ್ನೊಡನೆ ಯುದ್ಧವನ್ನು ಅಪೇಕ್ಷಿಸಿ ಬಂದಿರುವ ಕ್ಷತ್ರಿಯರು. ನಿನಗೆ ಉಚಿತವೆನಿಸಿದರೆ ದ್ವಂದ್ವ ಯುದ್ಧದ ಭಿಕ್ಷೆಯನ್ನು ಕೊಡು. ॥ ೨೭ ॥ ನೋಡು, ಇವನು ಪಾಂಡುಪುತ್ರನಾದ ಭೀಮಸೇನನು ಮತ್ತು ಇವನು ಅವನ ತಮ್ಮ ಅರ್ಜುನನು ಮತ್ತು ನಾನು ಇವರಿಬ್ಬರ ಸೋದರ ಮಾವನ ಮಗನಾದ ನಿನ್ನ ಹಳೆಯ ಶತ್ರುವಾದ ಕೃಷ್ಣನೆಂದೇ ತಿಳಿ. ॥ ೨೮ ॥

ಏವಮಾವೇದಿತೋ ರಾಜಾ ಜಹಾಸೋಚ್ಚೈಃ ಸ್ಮ ಮಾಗಧಃ ।
ಆಹ ಚಾಮರ್ಷಿತೋ ಮಂದಾ ಯುದ್ಧಂ ತರ್ಹಿ ದದಾಮಿ ವಃ ॥ ೩೦ ॥

ನ ತ್ವಯಾ ಭೀರುಣಾ ಯೋತ್ಸ್ಯೇ ಯುಧಿ ವಿಕ್ಲವಚೇತಸಾ ।
ಮಥುರಾಂ ಸ್ವಪುರೀಂ ತ್ಯಕ್ತ್ವಾ ಸಮುದ್ರಂ ಶರಣಂ ಗತಃ ॥ ೩೧ ॥

ಅಯಂ ತು ವಯಸಾತುಲ್ಯೋ ನಾತಿಸತ್ತ್ವೋ ನ ಮೇ ಸಮಃ ।
ಅರ್ಜುನೋ ನ ಭವೇದ್ಯೋದ್ಧಾ ಭೀಮಸ್ತುಲ್ಯಬಲೋ ಮಮ ॥ ೩೨ ॥

ಇತ್ಯುಕ್ತ್ವಾ ಭೀಮಸೇನಾಯ ಪ್ರಾದಾಯ ಮಹತೀಂ ಗದಾಮ್ ।
ದ್ವಿತೀಯಾಂ ಸ್ವಯಮಾದಾಯ ನಿರ್ಜಗಾಮ ಪುರಾದ್ಬಹಿಃ ॥ ೩೩ ॥

ತತಃ ಸಮೇ ಖಲೇ ವೀರೌ ಸಂಯುಕ್ತಾವಿತರೇತರೌ ।
ಜಘ್ನತುರ್ವಜ್ರಕಲ್ಪಾಭ್ಯಾಂ ಗದಾಭ್ಯಾಂ ರಣದುರ್ಮದೌ ॥ ೩೪ ॥

ಮಂಡಲಾನಿ ವಿಚಿತ್ರಾಣಿ ಸವ್ಯಂ ದಕ್ಷಿಣಮೇವ ಚ ।
ಚರತೋಃ ಶುಶುಭೇ ಯುದ್ಧಂ ನಟಯೋರಿವ ರಂಗಿಣೋಃ ॥ ೩೫ ॥

ತತಶ್ಚಟಚಟಾಶಬ್ದೋ ವಜ್ರನಿಷ್ಪೇಷಸನ್ನಿಭಃ ।
ಗದಯೋಃ ಕ್ಷಿಪ್ತಯೋ ರಾಜನ್ ದಂತಯೋರಿವ ದಂತಿನೋಃ ॥ ೩೬ ॥

ತೇ ವೈ ಗದೇ ಭುಜಜವೇನ ನಿಪಾತ್ಯ ಮಾನೇ
ಅನ್ಯೋನ್ಯತೋಽಂಸಕಟಿಪಾದಕರೋರುಜತ್ರೂನ್ ।
ಚೂರ್ಣೀಬಭೂವತುರುಪೇತ್ಯ ಯಥಾರ್ಕಶಾಖೇ
ಸಂಯುಧ್ಯತೋರ್ದ್ವಿರದಯೋರಿವ ದೀಪ್ತಮನ್ವ್ಯೋಃ ॥ ೩೭ ॥

ಇತ್ಥಂ ತಯೋಃ ಪ್ರಹತಯೋರ್ಗದಯೋರ್ನೃವೀರೌ
ಕ್ರುದ್ಧೌ ಸ್ವಮುಷ್ಟಿಭಿರಯಃಸ್ಪರ್ಶೈರಪಿಷ್ಟಾಮ್ ।
ಶಬ್ದಸ್ತಯೋಃ ಪ್ರಹರತೋರಿಭಯೋರಿವಾಸೀ-
ನ್ನಿರ್ಘಾತವಜ್ರಪರುಷಸ್ತಲತಾಡನೋತ್ಥಃ ॥ ೩೮ ॥

ತಯೋರೇವಂ ಪ್ರಹರತೋಃ ಸಮಶಿಕ್ಷಾಬಲೌಜಸೋಃ ।
ನಿರ್ವಿಶೇಷಮಭೂದ್ಯುದ್ಧಮಕ್ಷೀಣಜವಯೋರ್ನೃಪ ॥ ೩೯ ॥

ಭಗವಾನ್ ಶ್ರೀಕೃಷ್ಣನು ಹೀಗೆ ತನ್ನನ್ನು ಪರಿಚಯಿಸಿದಾಗ ಜರಾಸಂಧನು ಗಹ-ಗಹಿಸಿ ನಗತೊಡಗಿದನು ಮತ್ತು ಕೆರಳಿ ನುಡಿದನು ಎಲೈ ಮೂರ್ಖರೇ! ನಿಮಗೆ ಯುದ್ಧದ ಇಚ್ಛೆಯಿದ್ದರೆ ತಗೊಳ್ಳಿ ಕೊಟ್ಟಿದ್ದೇನೆ, ನಿಮ್ಮ ಪ್ರಾರ್ಥನೆಯನ್ನು ಸ್ವೀಕರಿಸುತ್ತೇನೆ. ॥ ೩೦ ॥ ಆದರೆ ಕೃಷ್ಣ! ಯುದ್ಧವೆಂದರೆ ಭಯಗೊಳ್ಳುವ, ಹೇಡಿಯಾದ ನೀನು, ನಾನು ಯುದ್ಧಕ್ಕೆ ಬಂದಾಗ ಮಥುರೆಯನ್ನೇ ಬಿಟ್ಟು ಓಡಿಹೋಗಿ ಸಮುದ್ರದ ಮಧ್ಯದಲ್ಲಿ ನೆಲೆಸಿರುವೆ. ನಿನ್ನೊಡನೆ ನಾನು ಯುದ್ಧಮಾಡುವುದಿಲ್ಲ. ॥ ೩೧ ॥ ಈ ಅರ್ಜುನನು ಒಬ್ಬ ಯೋಧನೇ ? ಒಂದೋ ವಯಸ್ಸಿನಲ್ಲಿ ನನ್ನಿಂದ ಬಹಳ ಚಿಕ್ಕವನು, ಇನ್ನೊಂದು ವಿಶೇಷ ಬಲವಂತನೂ ಅಲ್ಲ, ಆದ್ದರಿಂದ ಇವನು ನನಗೆ ಸರಿಸಮಾನನಾಗಲಾರನು. ಇವನೊಡನೆ ಯುದ್ಧಮಾಡುವುದಿಲ್ಲ. ಆದರೆ ಈ ಭೀಮಸೇನನು ನನ್ನಂತೆಯೇ ಬಲಿಷ್ಠನಾಗಿದ್ದು ನನಗೆ ಸರಿಸಮಾನನಾಗಿದ್ದಾನೆ. ॥ ೩೨ ॥ ಜರಾಸಂಧನು ಹೀಗೆ ಹೇಳಿ ಭೀಮಸೇನನಿಗೆ ದೊಡ್ಡದಾದ ಗದೆಯೊಂದನ್ನು ಕೊಟ್ಟನು. ತಾನು ಇನ್ನೊಂದು ಗದೆಯನ್ನು ಎತ್ತಿಕೊಂಡು ದ್ವಂದ್ವಯುದ್ಧಕ್ಕಾಗಿ ನಗರದಿಂದ ಹೊರಗೆ ಬಂದನು. ॥ ೩೩ ॥ ಬಳಿಕ ರಣೋನ್ಮತ್ತರಾದ ಭೀಮ-ಜರಾಸಂಧರು ರಣರಂಗಕ್ಕೆ ಬಂದು ವಜ್ರಕ್ಕೆ ಸಮಾನವಾಗಿದ್ದ ಗದೆಗಳಿಂದ ಪರಸ್ಪರ ಯುದ್ಧಮಾಡಲು ತೊಡಗಿದರು. ॥ ೩೪ ॥ ರಂಗಮಂಟಪದಲ್ಲಿ ಇಬ್ಬರು ನಟರು ಯುದ್ಧದ ಅಭಿನಯವನ್ನು ತೋರಿಸುವಂತೆ ಅವರಿಬ್ಬರೂ ಎಡಕ್ಕೂ, ಬಲಕ್ಕೂ ವಿಚಿತ್ರ ರೀತಿಯಲ್ಲಿ ಮಂಡಲಾಕಾರವಾಗಿ ಸುತ್ತುತ್ತಾ ಗದಾಯುದ್ಧದ ವರಸೆಗಳನ್ನು ತೋರಿಸುತ್ತಾ ರಾರಾಜಿಸಿದರು. ॥ ೩೫ ॥ ಪರೀಕ್ಷಿತನೇ! ಪರಸ್ಪರವಾಗಿ ಪ್ರಹರಿಸಿದ ಗದಾಘಾತದಿಂದ ಉಂಟಾಗುತ್ತಿದ್ದ ಶಬ್ದವು ಸಿಡಿಲು ಬಡಿದಂತೆಯೂ, ಎರಡು ಆನೆಗಳು ಪರಸ್ಪರವಾಗಿ ದಂತಗಳಿಂದ ತಿವಿಯುತ್ತಾ ಕಾದಾಡುವಾಗ ಉಂಟಾಗುವ ಚಟ-ಚಟಾ ಶಬ್ದದಂತೆಯೂ ಕೇಳಿಬರುತ್ತಿತ್ತು. ॥ ೩೬ ॥ ಭೀಮ ಜರಾಸಂಧರು ಭುಜಗಳಿಂದ ಗದೆಗಳನ್ನು ವೇಗವಾಗಿ ಅಪ್ಪಳಿಸಿದಾಗ ಆ ಗದೆಗಳು-ಪರಸ್ಪರವಾಗಿ ಅವರ ಹೆಗಲು, ಸೊಂಟ, ಕೈ-ಕಾಲುಗಳು, ತೊಡೆ, ಕಂಕುಳಗಳಲ್ಲಿ ಬಿದ್ದು ಕೋಪದಿಂದ ಹೋರಾಡುವ ಆನೆಗೆ ಹೊಡೆದ ಎಕ್ಕದ ಕೊಂಬೆಯಂತೆ ನುಚ್ಚು ನೂರಾದವು. ॥ ೩೭ ॥ ಪರೀಕ್ಷಿತನೇ! ಹೀಗೆ ಅವರ ಗದೆಗಳು ಪರಸ್ಪರ ಪ್ರಹಾರಗಳಿಂದ ಪುಡಿ-ಪುಡಿಯಾಗಲು, ಕ್ರುದ್ಧರಾಗಿದ್ದ ಅವರು ಉಕ್ಕಿಗೆ ಸಮಾನವಾದ ತಮ್ಮ ಮುಷ್ಟಿಗಳಿಂದಲೇ ಬಡಿದಾಡತೊಡಗಿದರು. ಮದಿಸಿದ ಎರಡು ಆನೆಗಳು ಕಾದಾಡುವಂತೆ ಮುಷ್ಟಿಯುದ್ಧವನ್ನು ಮಾಡುತ್ತಿದ್ದ ಭೀಮ-ಜರಾಸಂಧರ ಅಂಗೈಗಳ, ಮುಷ್ಟಿಗಳ ಹೊಡೆತದಿಂದ ಉಂಟಾದ ಶಬ್ದವು ಸಿಡಿಲಿನ ಅಬ್ಬರದಂತೆ ಕೇಳಿಬರುತ್ತಿತ್ತು. ॥ ೩೮ ॥ ಪರೀಕ್ಷಿತನೇ! ಜರಾಸಂಧ ಭೀಮಸೇನರಿಬ್ಬರ ದ್ವಂದ್ವಯುದ್ಧದಲ್ಲಿ ಕೌಶಲ್ಯ, ಬಲ ಮತ್ತು ಉತ್ಸಾಹಗಳು ಸಮಾನವಾಗಿದ್ದವು. ಅಷ್ಟು ಕಾಲ ಯುದ್ಧಮಾಡಿದರೂ ಅವರ ಬಲವು ಸ್ವಲ್ಪವಾದರೂ ಕುಂದಲಿಲ್ಲ, ಹೀಗೆ ಅವ್ಯಾಹತವಾಗಿ ಪ್ರಹರಿಸುತ್ತಿದ್ದರೂ ಯಾರಿಗೂ ಸೋಲು-ಗೆಲುವು ಉಂಟಾಗಲಿಲ್ಲ. ॥ ೩೯ ॥

ಏವಂ ತಯೋರ್ಮಹಾರಾಜ ಯುಧ್ಯತೋಃ ಸಪ್ತವಿಂಶತಿಃ ।
ದಿನಾನಿ ನಿರಗಂಸ್ತತ್ರ ಸುಹೃದ್ವನ್ನಿಶಿ ತಿಷ್ಠತೋಃ
॥ ೪೦ ॥

ಏಕದಾ ಮಾತುಲೇಯಂ ವೈ ಪ್ರಾಹ ರಾಜನ್ ವೃಕೋದರಃ ।
ನ ಶಕ್ತೋಽಹಂ ಜರಾಸಂಧಂ ನಿರ್ಜೇತುಂ ಯುಧಿ ಮಾಧವ
॥ ೪೧ ॥

ಶತ್ರೋರ್ಜನ್ಮಮೃತೀ ವಿದ್ವಾನ್ ಜೀವಿತಂ ಚ ಜರಾಕೃತಮ್ ।
ಪಾರ್ಥಮಾಪ್ಯಾಯಯನ್ ಸ್ವೇನ ತೇಜಸಾಚಿಂತಯದ್ಧರಿಃ
॥ ೪೨ ॥

ಸಂಚಿಂತ್ಯಾರಿವಧೋಪಾಯಂ ಭೀಮಸ್ಯಾಮೋಘದರ್ಶನಃ ।
ದರ್ಶಯಾಮಾಸ ವಿಟಪಂ ಪಾಟಯನ್ನಿವ ಸಂಜ್ಞಯಾ
॥ ೪೩ ॥

ತದ್ವಿಜ್ಞಾಯ ಮಹಾಸತ್ತ್ವೋ ಭೀಮಃ ಪ್ರಹರತಾಂ ವರಃ ।
ಗೃಹೀತ್ವಾ ಪಾದಯೋಃ ಶತ್ರುಂ ಪಾತಯಾಮಾಸ ಭೂತಲೇ
॥ ೪೪ ॥

ಏಕಂ ಪಾದಂ ಪದಾಽಽಕ್ರಮ್ಯ ದೋರ್ಭ್ಯಾಮನ್ಯಂ ಪ್ರಗೃಹ್ಯ ಸಃ ।
ಗುದತಃ ಪಾಟಯಾಮಾಸ ಶಾಖಾಮಿವ ಮಹಾಗಜಃ
॥ ೪೫ ॥

ಏಕಪಾದೋರುವೃಷಣಕಟಿಪೃಷ್ಠಸ್ತನಾಂಸಕೇ ।
ಏಕಬಾಹ್ವಕ್ಷಿಭ್ರೂಕರ್ಣೇ ಶಕಲೇ ದದೃಶುಃ ಪ್ರಜಾಃ
॥ ೪೬ ॥

ಹಾಹಾಕಾರೋ ಮಹಾನಾಸೀನ್ನಿಹತೇ ಮಗಧೇಶ್ವರೇ ।
ಪೂಜಯಾಮಾಸತುರ್ಭೀಮಂ ಪರಿರಭ್ಯ ಜಯಾಚ್ಯುತೌ
॥ ೪೭ ॥

ಸಹದೇವಂ ತತ್ತನಯಂ ಭಗವಾನ್ ಭೂತಭಾವನಃ ।
ಅಭ್ಯಷಿಂಚದಮೇಯಾತ್ಮಾ ಮಗಧಾನಾಂ ಪತಿಂ ಪ್ರಭುಃ ।
ಮೋಚಯಾಮಾಸ ರಾಜನ್ಯಾನ್ಸಂರುದ್ಧಾ ಮಾಗಧೇನ ಯೇ
॥ ೪೮ ॥

ಆ ವೀರರಿಬ್ಬರೂ ರಾತ್ರಿಯಲ್ಲಿ ಸುಹೃದರಂತೆ ಇರುತ್ತಿದ್ದರು. ಬೆಳಗಾಗುತ್ತಲೇ ಯುದ್ಧದಲ್ಲಿ ತೊಡಗುತ್ತಿದ್ದರು. ಮಹಾರಾಜನೇ ! ಈ ಪ್ರಕಾರವಾಗಿ ಅವರ ದ್ವಂದ್ವ ಯುದ್ಧವು ಇಪ್ಪತ್ತೇಳು ದಿನಗಳವರೆಗೂ ನಡೆಯಿತು. ॥ ೪೦ ॥ ಪ್ರಿಯ ಪರೀಕ್ಷಿತನೇ ! ಇಪ್ಪತ್ತೆಂಟನೆಯ ದಿನ ಭೀಮಸೇನನು ಸೋದರಮಾವನ ಮಗನಾದ ಶ್ರೀಕೃಷ್ಣನಲ್ಲಿ ಹೇಳಿದನು – ಮಾಧವ ! ಯುದ್ಧದಲ್ಲಿ ಜರಾಸಂಧನನ್ನು ನಾನು ಜಯಿಸಲಾರೆನು. ॥ ೪೧ ॥ ಭಗವಾನ್ ಶ್ರೀಕೃಷ್ಣನು ಜರಾಸಂಧನ ಜನ್ಮ ಮತ್ತು ಮೃತ್ಯುವಿನ ರಹಸ್ಯವನ್ನು ತಿಳಿದಿದ್ದನು. ಜರಾ ಎಂಬ ರಾಕ್ಷಸಿಯು ಎರಡು ಹೋಳುಗಳಾಗಿ ಬಿದ್ದಿದ್ದ ಶರೀರದ ಭಾಗಗಳನ್ನು ಜೋಡಿಸಿ ಜರಾಸಂಧನಿಗೆ ಜೀವದಾನ ಮಾಡಿದ್ದಳೆಂಬುದೂ ಅವನಿಗೆ ತಿಳಿದಿತ್ತು. ಆದಕ್ಕಾಗಿ ಭೀಮಸೇನನ ಶರೀರದಲ್ಲಿ ತನ್ನ ಶಕ್ತಿಯನ್ನು ತುಂಬಿ ಜರಾಸಂಧನ ವಧೆಯ ಉಪಾಯವನ್ನು ಯೋಚಿಸಿದನು. ॥ ೪೨ ॥ ಪರೀಕ್ಷಿತನೇ ! ಬಳಿಕ ಅಮೋಘ ಜ್ಞಾನಶಕ್ತಿಯನ್ನು ಹೊಂದಿದ್ದ ಶ್ರೀಕೃಷ್ಣನು ಜರಾಸಂಧನ ಮೃತ್ಯುವಿನ ಉಪಾಯವನ್ನು ಅರಿತು ಒಂದು ಮರದ ರೆಂಬೆಯನ್ನು ಉದ್ದವಾಗಿ ಸೀಳಿ ಹಾಕಿ ಈ ಸಂಜ್ಞೆಯ ಮೂಲಕ ಭೀಮಸೇನನಿಗೆ ತೋರಿಸಿದನು. ॥ ೪೩ ॥ ವೀರಶಿರೋಮಣಿಯೂ, ಶಕ್ತಿಶಾಲಿಯೂ ಆದ ಭೀಮಸೇನನು ಭಗವಾನ್ ಶ್ರೀಕೃಷ್ಣನ ಅಭಿಪ್ರಾಯವನ್ನು ಗ್ರಹಿಸಿ, ಜರಾಸಂಧನ ಕಾಲನ್ನು ಹಿಡಿದು ನೆಲಕ್ಕೆ ಕೆಡವಿದನು. ॥ ೪೪ ॥ ಬಳಿಕ ಜರಾಸಂಧನ ಒಂದು ಕಾಲನ್ನು ತನ್ನ ಕಾಲಿನಿಂದ ಮೆಟ್ಟಿಕೊಂಡು ಮತ್ತೊಂದು ಕಾಲನ್ನು ಎರಡೂ ಕೈಗಳಿಂದ ಹಿಡಿದು, ಸಲಗವು ಮರದ ರೆಂಬೆಯನ್ನು ಸೀಳುವಂತೆ ಗುದದ್ವಾರದ ಕಡೆಯಿಂದ ಅವನನ್ನು ಸೀಳಿಬಿಟ್ಟನು. ॥ ೪೫ ॥ ನೆರೆದಿದ್ದ ಜನರು ಎರಡು ಸೀಳುಗಳಲ್ಲಿಯೂ ಒಂದೊಂದು ಕಾಲು, ತೊಡೆ, ಅಂಡಕೋಶ, ಕಟಿಭಾಗ, ಪೃಷ್ಠ, ಸ್ತನ, ಹೆಗಲು, ತೋಳು, ಕಣ್ಣು, ಹುಬ್ಬು ಮತ್ತು ಕಿವಿಗಳಿರುವುದನ್ನು ನೋಡಿದರು. ॥ ೪೬ ॥ ಮಗಧರಾಜನಾದ ಜರಾಸಂಧನು ಸತ್ತುಹೋದಾಗ ಅವನ ಪ್ರಜೆಗಳು ಗಟ್ಟಿಯಾಗಿ ಅಯ್ಯೋ ! ಅಯ್ಯೋ ! ನಮಗೆ ಇನ್ನಾರುಗತಿ ! ಎಂದು ಗೋಳಾಡಿದರು. ಭಗವಾನ್ ಶ್ರೀಕೃಷ್ಣಾರ್ಜುನರು ಭೀಮಸೇನನನ್ನು ಆಲಿಂಗಿಸಿಕೊಂಡು ಪ್ರಶಂಸಿಸಿದರು. ॥ ೪೭ ॥ ಸಕಲ ಪ್ರಾಣಿಗಳನ್ನು ಪರಿಪಾಲಿಸುವ, ಅಪ್ರಮೇಯಾತ್ಮನಾದ ಶ್ರೀಕೃಷ್ಣನು ಜರಾಸಂಧನ ಮಗನಾದ ಸಹದೇವನನ್ನು ಮಗಧರಾಜ್ಯಕ್ಕೆ ರಾಜನನ್ನಾಗಿಸಿ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದನು. ಜರಾಸಂಧನು ಬಂಧಿಸಿಟ್ಟಿದ್ದ ರಾಜರೆಲ್ಲರನ್ನು ಬಂಧಮುಕ್ತಗೊಳಿಸಿದನು. ॥ ೪೮ ॥

*ಎಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೭೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಜರಾಸಂಧವಧೋ ನಾಮ ದ್ವಿಸಪ್ತತಿತಮೋಽಧ್ಯಾಯಃ ॥ ೭೨ ॥

# ಎಪ್ಪತ್ತಮೂರನೆಯ ಅಧ್ಯಾಯ

## ಜರಾಸಂಧನ ಸೆರೆಮನೆಯಲ್ಲಿದ್ದ ರಾಜರ ಬೀಳ್ಕೊಡಿಗೆ, ಶ್ರೀಕೃಷ್ಣನು ಭೀಮಾರ್ಜುನರೊಡನೆ ಇಂದ್ರಪ್ರಸ್ಥಕ್ಕೆ ಹಿಂದಿರುಗಿದುದು

*ಶ್ರೀಶುಕ ಉವಾಚ*

ಅಯುತೇ ದ್ವೇ ಶತಾನ್ಯಷ್ಟೌ ಲೀಲಯಾ ಯುಧಿ ನಿರ್ಜಿತಾಃ ।
ತೇ ನಿರ್ಗತಾ ಗಿರಿದ್ರೋಣ್ಯಾಂ ಮಲಿನಾ ಮಲವಾಸಸಃ ॥ ೧ ॥

ಕ್ಷುತ್ಕ್ಷಾಮಾಃ ಶುಷ್ಕವದನಾಃ ಸಂರೋಧಪರಿಕರ್ಶಿತಾಃ ।
ದದೃಶುಸ್ತೇ ಘನಶ್ಯಾಮಂ ಪೀತಕೌಶೇಯವಾಸಸಮ್ ॥ ೨ ॥

ಶ್ರೀವತ್ಸಾಂಕಂ ಚತುರ್ಬಾಹುಂ ಪದ್ಮಗರ್ಭಾರುಣೇಕ್ಷಣಮ್ ।
ಚಾರುಪ್ರಸನ್ನವದನಂ ಸ್ಫುರನ್ಮಕರಕುಂಡಲಮ್ ॥ ೩ ॥

ಪದ್ಮಹಸ್ತಂ ಗದಾಶಂಖರಥಾಂಗೈರುಪಲಕ್ಷಿತಮ್ ।
ಕಿರೀಟಹಾರಕಟಕಕಟಿಸೂತ್ರಾಂಗದಾಚಿತಮ್ ॥ ೪ ॥

ಭ್ರಾಜದ್ವರಮಣಿಗ್ರೀವಂ ನಿವೀತಂ ವನಮಾಲಯಾ ।
ಪಿಬಂತ ಇವ ಚಕ್ಷುರ್ಭ್ಯಾಂ ಲಿಹಂತ ಇವ ಜಿಹ್ವಯಾ ॥ ೫ ॥

ಜಿಘ್ರಂತ ಇವ ನಾಸಾಭ್ಯಾಂ ರಂಭಂತ ಇವ ಬಾಹುಭಿಃ ।
ಪ್ರಣೇಮುರ್ಹತಪಾಪ್ಮಾನೋ ಮೂರ್ಧಭಿಃ ಪಾದಯೋರ್ಹರೇಃ ॥ ೬ ॥

ಕೃಷ್ಣಸಂದರ್ಶನಾಹ್ಲಾದಧ್ವಸ್ತಸಂರೋಧನಕ್ಲಮಾಃ ।
ಪ್ರಶಶಂಸುರ್ಹೃಷೀಕೇಶಂ ಗೀರ್ಭಿಃ ಪ್ರಾಂಜಲಯೋ ನೃಪಾಃ ॥ ೭ ॥

*ರಾಜಾನ ಊಚುಃ*

ನಮಸ್ತೇ ದೇವದೇವೇಶ ಪ್ರಪನ್ನಾರ್ತಿಹರಾವ್ಯಯ ।
ಪ್ರಪನ್ನಾನ್ಪಾಹಿ ನಃ ಕೃಷ್ಣ ನಿರ್ವಿಣ್ಣಾನ್ ಘೋರಸಂಸೃತೇಃ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ಜರಾಸಂಧನು ಅನಾಯಾಸವಾಗಿ ಇಪ್ಪತ್ತು ಸಾವಿರದ ಎಂಟು ನೂರು ರಾಜರನ್ನು ಜಯಿಸಿ ಪರ್ವತಗಳ ಮಧ್ಯದಲ್ಲಿದ್ದ ಸೆರೆಮನೆಯಲ್ಲಿಟ್ಟಿದ್ದನು. ಭಗವಾನ್ ಶ್ರೀಕೃಷ್ಣನು ಅವರನ್ನು ಮುಕ್ತಗೊಳಿಸಿದಾಗ ಸೆರೆಮನೆಯಿಂದ ಹೊರಬಂದರು. ಆಗ ಅವರ ಶರೀರಗಳು ಮತ್ತು ವಸ್ತ್ರಗಳು ಅತ್ಯಂತ ಮಲಿನವಾಗಿದ್ದವು. ॥ ೧ ॥ ಹಸಿವಿನಿಂದ ಕಂಗೆಟ್ಟು ಮುಖಗಳು ಬಾಡಿಹೋಗಿದ್ದವು. ಸೆರೆಮನೆಯ ವಾಸದಿಂದ ಅವರ ಅಂಗಾಂಗಗಳು ಶಿಥಿಲಗೊಂಡಿದ್ದವು. ಅಲ್ಲಿಂದ ಹೊರಬರುತ್ತಲೇ ರಾಜರೆಲ್ಲರೂ ತಮ್ಮ ಮುಂದೆ ನಿಂತಿದ್ದ ಭಗವಾನ್ ಶ್ರೀಕೃಷ್ಣನನ್ನು ನೋಡಿದರು. ಅವನ ಶರೀರವು ಮೇಘಶ್ಯಾಮಲವಾಗಿದ್ದು ರೇಷ್ಮೆಯ ಪೀತಾಂಬರವನ್ನು ಧರಿಸಿದ್ದನು. ॥ ೨ ॥ ಅವನಿಗೆ ನಾಲ್ಕು ಭುಜಗಳಿದ್ದು ಶಂಖ, ಚಕ್ರ, ಗದಾ, ಪದ್ಮಗಳಿಂದ ಸುಶೋಭಿತವಾಗಿದ್ದವು. ವಕ್ಷಃಸ್ಥಳದಲ್ಲಿ ಶ್ರೀವತ್ಸ ಚಿಹ್ನೆಯು ವಿರಾಜಿಸುತ್ತಿತ್ತು. ಕಮಲದ ಒಳಭಾಗದಂತೆ ಕೋಮಲವಾದ ನಸುಗೆಂಪು ಕಣ್ಣುಗಳು, ಸುಂದರವಾದ ವದನವು ಪ್ರಸನ್ನತೆಯ ಸದನದಂತಿದೆ. ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳು, ಸುಂದರವಾದ ಕಿರೀಟ, ಮುತ್ತಿನಹಾರಗಳು, ಕಡಗ-ಕಂಕಣ ಮತ್ತು ತೊಳ್ಬಂದಿಗಳು ಆಯಾಯ ಸ್ಥಾನಗಳಲ್ಲಿ ಶೋಭಿಸುತ್ತಿದ್ದವು. ॥ ೩-೪ ॥ ಕೊರಳಲ್ಲಿ ಕೌಸ್ತುಭಮಣಿಯು ಹೊಳೆಯುತ್ತಿತ್ತು. ವನಮಾಲೆಯನ್ನು ತೊಟ್ಟುಕೊಂಡಿರುವ ಶ್ರೀಕೃಷ್ಣನನ್ನು ಆ ರಾಜರು ಕಣ್ಣುಗಳನ್ನು ಅರಳಿಸಿಕೊಂಡು, ತೆರೆದಬಾಯಿಂದ ಎವೆಯಿಕ್ಕದೆ ನೋಡುತ್ತಿರುವುದನ್ನು ನೋಡಿದರೆ ಅವರು ತಮ್ಮ ಕಣ್ಣುಗಳಿಂದಲೇ ಅವನ ರೂಪ ಮಾಧುರ್ಯವನ್ನು ಸವಿಯುತ್ತಿರುವಂತೆಯೂ, ನಾಲಿಗೆಯಿಂದ ನೆಕ್ಕುತ್ತಿರುವಂತೆಯೂ, ಮೂಗಿನಿಂದ ಆಘ್ರಾಣಿಸುವಂತೆಯೂ, ಬಾಹುಗಳಿಂದ ಆಲಿಂಗಿಸಿಕೊಳ್ಳುತ್ತಿರುವಂತೆಯೂ ಅನಿಸುತ್ತಿತ್ತು. ಆತನ ದರ್ಶನ ಮಾತ್ರದಿಂದಲೇ ಸಮಸ್ತ ಪಾಪಗಳನ್ನು ಕಳೆದುಕೊಂಡ ಆ ರಾಜರು ಭಗವಂತನ ಚರಣಗಳಲ್ಲಿ ಶಿರಸ್ಸನ್ನಿಟ್ಟು ನಮಸ್ಕರಿಸಿದರು. ॥ ೫-೬ ॥ ಭಗವಾನ್ ಶ್ರೀಕೃಷ್ಣನ ದರ್ಶನದಿಂದಾದ ಆನಂದದಲ್ಲಿ ಸೆರೆಮನೆಯ ಕಷ್ಟಗಳೆಲ್ಲ ಮರೆತುಹೋದುವು. ಅವರೆಲ್ಲರೂ ಕೈಜೋಡಿಸಿಕೊಂಡು ವಿನಮ್ರ ವಾಣಿಯಿಂದ ಶ್ರೀಕೃಷ್ಣನನ್ನು ಸ್ತುತಿಸತೊಡಗಿದರು. ॥ ೭ ॥

**ರಾಜರುಗಳೆಂದರು** – ಶರಣಾಗತರ ಸಮಸ್ತ ದುಃಖಗಳನ್ನೂ, ಭಯವನ್ನು ಹೋಗಲಾಡಿಸುವವನೇ ! ದೇವದೇವೇಶ್ವರನೇ ! ಸಚ್ಚಿದಾನಂದ ಸ್ವರೂಪನೇ ! ಅವಿನಾಶಿಯೇ ! ಶ್ರೀಕೃಷ್ಣನೇ ! ನಾವೆಲ್ಲರೂ ನಿನಗೆ ನಮಸ್ಕರಿಸುತ್ತೇವೆ. ಜರಾಸಂಧನ ಕಾರಾಗೃಹದಿಂದೇನೋ ನಮ್ಮನ್ನು ಬಿಡುಗಡೆ ಮಾಡಿದೆ. ಈಗ ಈ ಜನ್ಮ-ಮರಣ ರೂಪವಾದ ಘೋರವಾದ ಸಂಸಾರ ಚಕ್ರದಿಂದಲೂ ಬಿಡುಗಡೆಮಾಡು. ಸಂಸಾರದ ಕಟುವಾದ ದುಃಖವನ್ನು ಅನುಭವಿಸಿ ಬೇಸತ್ತಿದ್ದೇವೆ. ಶರಣಾಗತರಾಗಿರುವ ನಮ್ಮನ್ನು ಸಂರಕ್ಷಿಸು. ॥ ೮ ॥

ನೈನಂ ನಾಥಾನ್ವಸೂಯಾಮೋ ಮಾಗಧಂ ಮಧುಸೂದನ ।
ಅನುಗ್ರಹೋ ಯದ್ಭವತೋ ರಾಜ್ಞಾಂ ರಾಜ್ಯಚ್ಯುತಿರ್ವಿಭೋ
॥ ೯ ॥

ರಾಜ್ಯೈಶ್ವರ್ಯಮದೋನ್ನದ್ಧೋ ನ ಶ್ರೇಯೋ ವಿಂದತೇ ನೃಪಃ ।
ತ್ವನ್ಮಾಯಾಮೋಹಿತೋಽನಿತ್ಯಾ ಮನ್ಯತೇ ಸಂಪದೋಽಚಲಾಃ
॥ ೧೦ ॥

ಮೃಗತೃಷ್ಣಾಂ ಯಥಾ ಬಾಲಾ ಮನ್ಯಂತ ಉದಕಾಶಯಮ್ ।
ಏವಂ ವೈಕಾರಿಕೀಂ ಮಾಯಾಮಯುಕ್ತಾ ವಸ್ತು ಚಕ್ಷತೇ
॥ ೧೧ ॥

ವಯಂ ಪುರಾ ಶ್ರೀಮದನಷ್ಟದೃಷ್ಟಯೋ
ಜಿಗೀಷಯಾಸ್ಯಾ ಇತರೇತರಸ್ಪೃಧಃ ।
ಘ್ನಂತಃ ಪ್ರಜಾಃ ಸ್ವಾ ಅತಿನಿರ್ಘೃಣಾಃ ಪ್ರಭೋ
ಮೃತ್ಯುಂ ಪುರಸ್ತ್ವಾವಿಗಣಯ್ಯ ದುರ್ಮದಾಃ ॥ ೧೨ ॥

ತ ಏವ ಕೃಷ್ಣಾದ್ಯ ಗಭೀರರಂಹಸಾ
ದುರಂತವೀರ್ಯೇಣ ವಿಚಾಲಿತಾಃ ಶ್ರಿಯಃ ।
ಕಾಲೇನ ತನ್ವಾ ಭವತೋಽನುಕಂಪಯಾ
ವಿನಷ್ಟದರ್ಪಾಶ್ಚರಣೌ ಸ್ಮರಾಮ ತೇ ॥ ೧೩ ॥

ಅಥೋ ನ ರಾಜ್ಯಂ ಮೃಗತೃಷ್ಣಿರೂಪಿತಂ
ದೇಹೇನ ಶಶ್ವತ್ ಪತತಾ ರುಜಾಂ ಭುವಾ ।
ಉಪಾಸಿತವ್ಯಂ ಸ್ಪೃಹಯಾಮಹೇ ವಿಭೋ
ಕ್ರಿಯಾಫಲಂ ಪ್ರೇತ್ಯ ಚ ಕರ್ಣರೋಚನಮ್ ॥ ೧೪ ॥

ತಂ ನಃ ಸಮಾದಿಶೋಪಾಯಂ ಯೇನ ತೇ ಚರಣಾಬ್ಜಯೋಃ ।
ಸ್ಮೃತಿರ್ಯಥಾ ನ ವಿರಮೇದಪಿ ಸಂಸರತಾಮಿಹ
॥ ೧೫ ॥

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ ।
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ
॥ ೧೬ ॥

*ಶ್ರೀಶುಕ ಉವಾಚ*

ಸಂಸ್ತೂಯಮಾನೋ ಭಗವಾನ್ ರಾಜಭಿರ್ಮುಕ್ತಬಂಧನೈಃ ।
ತಾನಾಹ ಕರುಣಸ್ತಾತ ಶರಣ್ಯಃ ಶ್ಲಕ್ಷ್ಣಯಾ ಗಿರಾ
॥ ೧೭ ॥

ನಮ್ಮ ಸ್ವಾಮಿಯಾದ ಮಧುಸೂದನನೇ! ರಾಜ್ಯಚ್ಯುತರಾದ ಬಗ್ಗೆ ಜರಾಸಂಧನಲ್ಲಿ ನಾವು ದೋಷವೆಣಿಸುವುದಿಲ್ಲ, ಭಗವಂತಾ! ಇದಾದರೋ ನಿನ್ನ ಅನುಗ್ರಹವನ್ನು ಪಡೆಯಲು ಕಾರಣ ವಾಯಿತು. ॥ ೯ ॥ ರಾಜ್ಯ ಐಶ್ವರ್ಯದ ಮದದಿಂದ ಉನ್ಮತ್ತರಾದ ರಾಜರಿಗೆ ನಿಜಸುಖದ - ಶ್ರೇಯಸ್ಸಿನ ಪ್ರಾಪ್ತಿಯು ಎಂದಿಗೂ ಆಗುವುದಿಲ್ಲ. ಅವರು ನಿನ್ನ ಮಾಯೆಯಿಂದ ಮೋಹಿತರಾಗಿ ಅನಿತ್ಯವಾದ ಸಂಪತ್ತುಗಳನ್ನು ಅಚಲವೆಂದು ತಿಳಿದಿರುತ್ತಾರೆ. ॥ ೧೦ ॥ ಮೂರ್ಖರಾದವರು ಬಿಸಿಲ್ಗುದುರೆಯನ್ನು ಜಲಾಶಯವೆಂದು ಭಾವಿಸುವಂತೆಯೇ ಇಂದ್ರಿಯ ಲೋಲುಪರಾದ ಅಜ್ಞಾನಿಗಳು ಈ ಪರಿವರ್ತನ ಶೀಲವಾದ ಮಾಯೆಯನ್ನು ಸತ್ಯವಾದದ್ದೆಂದು ತಿಳಿಯುತ್ತಾರೆ. ॥ ೧೧ ॥ ಭಗವಂತಾ! ಮೊದಲು ನಾವುಗಳು ಧನ-ಸಂಪತ್ತಿನ ಅಮಲಿನಿಂದ ಕುರುಡರಾಗಿದ್ದೆವು. ಈ ಪೃಥಿವಿಯನ್ನು ಗೆಲ್ಲಲು ಪರಸ್ಪರ ಸ್ಪರ್ಧಿಸುತ್ತಿದ್ದೆವು ಹಾಗೂ ನಮ್ಮ ಪ್ರಜೆಗಳನ್ನೇ ಪೀಡಿಸುತ್ತಿದ್ದೆವು. ನಿಜವಾಗಿಯೂ ನಮ್ಮ ಜೀವನವು ಅತ್ಯಂತ ಕ್ರೂರತೆಯಿಂದ ಕೂಡಿತ್ತು. ನೀನೇ ಮೃತ್ಯುರೂಪದಿಂದ ನಮ್ಮ ಮುಂದೆ ನಿಂತಿರುವೆ ಎಂಬುದನ್ನು ಲೆಕ್ಕಿಸದಷ್ಟು ನಾವು ಗರ್ವಿಷ್ಠರಾಗಿದ್ದೆವು. ॥ ೧೨ ॥ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ಕಾಲದ ಗತಿಯು ಅತ್ಯಂತ ಗಹನವಾಗಿದೆ. ಯಾರಿಂದಲೂ ನಿವಾರಿಸಲಾರದಷ್ಟು ಬಲವತ್ತರವಾಗಿದೆ. ಏನಾದರೂ ಅದು ನಿನ್ನ ಸ್ವರೂಪವೇ ಅಲ್ಲವೇ! ಈಗ ಅದು ನಮ್ಮನ್ನು ಶ್ರೀಹೀನರನ್ನಾಗಿಯೂ, ರಾಜ್ಯಹೀನರನ್ನಾಗಿಯೂ ಮಾಡಿಬಿಟ್ಟಿದೆ. ನಿನ್ನ ಅಹೈತುಕವಾದ ಅನುಕಂಪದಿಂದಾಗಿ ನಮ್ಮ ಮದವು ನುಚ್ಚು-ನೂರಾಯಿತು. ಈಗ ನಾವು ನಿನ್ನ ಚರಣಗಳನ್ನು ಸ್ಮರಿಸುತ್ತೇವೆ. ॥ ೧೩ ॥ ಪ್ರಭೋ! ಈ ಶರೀರವು ದಿನ-ದಿನಕ್ಕೆ ಕ್ಷೀಣಿಸುತ್ತಾ ಹೋಗುತ್ತದೆ. ರೋಗಗಳ ಜನ್ಮಭೂಮಿಯೇ ಆಗಿದೆ. ಆದುದರಿಂದ ಮರೀಚಿಕೆಯಂತೆ ಸುಖಮಯವಾಗಿ ಕಾಣುವ ಈ ರಾಜ್ಯಭೋಗವೂ ಮರಣಾಂತರದಲ್ಲಿ ಕರ್ಮಗಳ ಫಲವಾಗಿ ನಮಗೆ ಸಿಗುವ ಸ್ವರ್ಗಾದಿಗಳೂ ಬೇಡ. ಏಕೆಂದರೆ, ಅವು ನಿಸ್ಸಾರವಾದವುಗಳು ಎಂದೂ, ಕೇವಲ ಕೇಳಲು ಮಾತ್ರ ಆಕರ್ಷಕವಾಗಿವೆ ಎಂಬುದೂ ನಾವು ತಿಳಿದಿದ್ದೇವೆ. ॥ ೧೪ ॥ ನಿನ್ನ ಚರಣಾರವಿಂದಗಳ ಸ್ಮೃತಿಯು ಎಂದೂ ಮರೆಯದೆ ಅದು ಸದಾ ಸ್ಮೃತಿ ಪಥದಲ್ಲಿ ನಿರಂತರವಾಗುವಂತಹ ಯಾವುದಾದರೂ ಉಪಾಯವನ್ನು ಹೇಳು. ನಾವು ಪ್ರಪಂಚದ ಯಾವುದೇ ಯೋನಿಯಲ್ಲಿಯೂ ಪುನಃ ಹುಟ್ಟಿದರೂ ನಿನ್ನ ಸ್ಮೃತಿಯು ಸದಾಕಾಲ ಇರುವಂತೆ ಮಾಡು. ॥ ೧೫ ॥ ನಮಿಸಿದವರ ಕ್ಲೇಶಗಳನ್ನು ಹೋಗಲಾಡಿಸುವ ಶ್ರೀಕೃಷ್ಣನಿಗೆ, ವಾಸುದೇವನಿಗೆ, ಶ್ರೀಹರಿಯೇ! ಪರಮಾತ್ಮನೇ! ಗೋವಿಂದನೇ! ನಿನಗೆ ಪುನಃ ಪುನಃ ನಮಸ್ಕರಿಸುತ್ತೇವೆ. ॥ ೧೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಕಾರಾಗೃಹದಿಂದ ಮುಕ್ತರಾದ ರಾಜರು ಕರುಣಾ ಸಮುದ್ರನಾದ ಭಗವಾನ್ ಶ್ರೀಕೃಷ್ಣನನ್ನು ಹೀಗೆ ಸ್ತೋತ್ರಮಾಡಲು, ಶರಣಾಗತ ರಕ್ಷಕನಾದ ಪ್ರಭುವು ಮಧುರವಾದ ಮಾತಿನಿಂದ ಅವರಲ್ಲಿ ಇಂತೆಂದನು. ॥ ೧೭ ॥

ಶ್ರೀಭಗವಾನುವಾಚ

ಅದ್ಯಪ್ರಭೃತಿ ವೋ ಭೂಪಾ ಮಯ್ಯಾತ್ಮನ್ಯಖಿಲೇಶ್ವರೇ ।
ಸುದೃಢಾ ಜಾಯತೇ ಭಕ್ತಿರ್ಬಾಢಮಾಶಂಸಿತಂ ತಥಾ ॥ ೧೮ ॥

ದಿಷ್ಟ್ಯಾ ವ್ಯವಸಿತಂ ಭೂಪಾ ಭವಂತ ಋತಭಾಷಿಣಃ ।
ಶ್ರಿಯೈಶ್ವರ್ಯಮದೋನ್ನಾಹಂ ಪಶ್ಯ ಉನ್ಮಾದಕಂ ನೃಣಾಮ್ ॥ ೧೯ ॥

ಹೈಹಯೋ ನಹುಷೋ ವೇನೋ ರಾವಣೋ ನರಕೋಽಪರೇ ।
ಶ್ರೀಮದಾದ್ಭ್ರಂಶಿತಾಃ ಸ್ಥಾನಾದ್ದೇವದೈತ್ಯನರೇಶ್ವರಾಃ ॥ ೨೦ ॥

ಭವಂತ ಏತದ್ವಿಜ್ಞಾಯ ದೇಹಾದ್ಯುತ್ಪಾದ್ಯಮಂತವತ್ ।
ಮಾಂ ಯಜಂತೋಽಧ್ವರೈರ್ಯುಕ್ತಾಃ ಪ್ರಜಾ ಧರ್ಮೇಣ ರಕ್ಷಥ ॥ ೨೧ ॥

ಸಂತನ್ವಂತಃ ಪ್ರಜಾತಂತೂನ್ ಸುಖಂ ದುಃಖಂ ಭವಾಭವೌ ।
ಪ್ರಾಪ್ತಂ ಪ್ರಾಪ್ತಂ ಚ ಸೇವಂತೋ ಮಚ್ಚಿತ್ತಾ ವಿಚರಿಷ್ಯಥ ॥ ೨೨ ॥

ಉದಾಸೀನಾಶ್ಚ ದೇಹಾದಾವಾತ್ಮಾರಾಮಾ ಧೃತವ್ರತಾಃ ।
ಮಯ್ಯಾವೇಶ್ಯ ಮನಃ ಸಮ್ಯಙ್ಮಾಮಂತೇ ಬ್ರಹ್ಮ ಯಾಸ್ಯಥ ॥ ೨೩ ॥

ಶ್ರೀಶುಕ ಉವಾಚ

ಇತ್ಯಾದಿಶ್ಯ ನೃಪಾನ್ ಕೃಷ್ಣೋ ಭಗವಾನ್ ಭುವನೇಶ್ವರಃ ।
ತೇಷಾಂ ನ್ಯಯುಂಕ್ತ ಪುರುಷಾನ್ ಸ್ತ್ರಿಯೋ ಮಜ್ಜನಕರ್ಮಣಿ ॥ ೨೪ ॥

ಸಪರ್ಯಾಂ ಕಾರಯಾಮಾಸ ಸಹದೇವೇನ ಭಾರತ ।
ನರದೇವೋಚಿತೈರ್ವಸ್ತ್ರೈರ್ಭೂಷಣೈಃ ಸ್ರಗ್ವಿಲೇಪನೈಃ ॥ ೨೫ ॥

ಭೋಜಯಿತ್ವಾವರಾನ್ನೇನ ಸುಸ್ನಾತಾನ್ ಸಮಲಂಕೃತಾನ್ ।
ಭೋಗೈಶ್ಚ ವಿವಿಧೈರ್ಯುಕ್ತಾಂಸ್ತಾಂಬೂಲಾದ್ಯೈರ್ನೃಪೋಚಿತೈಃ ॥ ೨೬ ॥

ತೇ ಪೂಜಿತಾ ಮುಕುಂದೇನ ರಾಜಾನೋ ಮೃಷ್ಟಕುಂಡಲಾಃ ।
ವಿರೇಜುರ್ಮೋಚಿತಾಃ ಕ್ಲೇಶಾತ್ಪ್ರಾವೃಡಂತೇ ಯಥಾ ಗ್ರಹಾಃ ॥ ೨೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ನರಪತಿಗಳೇ! ನಿಮ್ಮ ಅಪೇಕ್ಷೆಯಂತೆ ಇಂದಿನಿಂದ ನಿಮಗೆ ಆತ್ಮಸ್ವರೂಪನಾದ ಮತ್ತು ಅಖಿಲೇಶ್ವರನಾದ ನನ್ನಲ್ಲಿ ಭಕ್ತಿಯು ಉಂಟಾಗುತ್ತದೆ. ॥ ೧೮ ॥ ರಾಜರುಗಳೇ! ನನ್ನನ್ನು ಯಾವಾಗಲೂ ಸ್ಮರಿಸುತ್ತಿರಬೇಕೆಂದು ನೀವು ನಿಶ್ಚಯವನ್ನು ಮಾಡಿರುವಿರಿ. ನೀವೆಲ್ಲರೂ ಸತ್ಯಭಾಷಿಗಳೇ ಆಗಿರುವಿರಿ. ಐಶ್ವರ್ಯಮದ ಮತ್ತು ಪ್ರಭುತ್ವಮದದಿಂದ ಉಂಟಾಗುವ ಗರ್ವಾತಿರೇಕವು ಜನರಿಗೆ ಹುಚ್ಚು ಹಿಡಿಸುವುದೆಂಬುದನ್ನು ನಾನು ನೋಡಿದ್ದೇನೆ. ॥ ೧೯ ॥ ಹೈಹಯ, ನಹುಷ, ವೇನ, ರಾವಣ, ನರಕಾಸುರ ಮೊದಲಾದ ಅನೇಕ ದೇವ ದೈತ್ಯ–ನರಪತಿಗಳು ಶ್ರೀಮದದ ಮತ್ತು ಅಧಿಕಾರ ಮದದಿಂದ ತಮ್ಮ ಸ್ಥಾನದಿಂದ ಚ್ಯುತರಾದರು. ॥ ೨೦ ॥ ಶರೀರ ಮತ್ತು ಅದರ ಸಂಬಂಧಿಗಳು ಹುಟ್ಟುತ್ತಾರೆ ಅದಕ್ಕಾಗಿ ಅವರ ನಾಶವೂ ಅವಶ್ಯವಾಗಿ ಆಗುತ್ತದೆ ಇದನ್ನು ನೆನಪಿನಲ್ಲಿಟ್ಟುಕೊಳ್ಳಿ. ಆದ್ದರಿಂದ ಅದರಲ್ಲಿ ಆಸಕ್ತರಾಗಬೇಡಿರಿ. ಮನಸ್ಸನ್ನು, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ಯಜ್ಞಗಳ ಮೂಲಕ ನನ್ನನ್ನು ಆರಾಧಿಸಿ, ಧರ್ಮದಿಂದ ಪ್ರಜೆಗಳನ್ನು ರಕ್ಷಿಸಿರಿ. ॥ ೨೧ ॥ ನೀವು ಪುತ್ರರನ್ನು ಪಡೆದು ವಂಶಪರಂಪರೆಯನ್ನು ರಕ್ಷಿಸಿರಿ. ಪ್ರಾರಬ್ಧದ ಅನುಸಾರವಾಗಿ ಪ್ರಾಪ್ತವಾಗುವ ಸುಖ-ದುಃಖಗಳನ್ನು, ಹುಟ್ಟು-ಸಾವುಗಳನ್ನು, ಲಾಭ-ನಷ್ಟಗಳನ್ನು ಸಮಭಾವದಿಂದ ಕಾಣುತ್ತಾ ನನ್ನ ಪ್ರಸಾದವೆಂದು ಭಾವಿಸಿ ಅನುಭವಿಸಿರಿ. ಯಾವಾಗಲೂ ನಿಮ್ಮ ಮನಸ್ಸನ್ನು ನನ್ನಲ್ಲಿಯೇ ನೆಲೆಗೊಳಿಸಿ ಜೀವನವನ್ನು ಸಾಗಿಸಿರಿ. ॥ ೨೨ ॥ ದೇಹ ಮತ್ತು ದೇಹ ಸಂಬಂಧಿಗಳಲ್ಲಿ ಯಾವುದೇ ಆಸಕ್ತಿಯನ್ನಿಡದೇ ಉದಾಸೀನರಾಗಿರಿ. ದೃಢವ್ರತರಾಗಿ, ನಿಮ್ಮ-ನಿಮ್ಮ ಆತ್ಮಗಳಲ್ಲೇ ರಮಿಸುತ್ತ ಇರಿ. ನಿಮ್ಮ ಮನಸ್ಸನ್ನು ನನ್ನಲ್ಲಿಯೇ ಚೆನ್ನಾಗಿ ನೆಲೆಗೊಳಿಸಿ, ನೀವು ಕಡೆಯಲ್ಲಿ ಬ್ರಹ್ಮಸ್ವರೂಪನಾದ ನನ್ನನ್ನೇ ಹೊಂದುವಿರಿ. ॥ ೨೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭುವನೇಶ್ವರನಾದ ಭಗವಾನ್ ಶ್ರೀಕೃಷ್ಣನು ರಾಜರುಗಳಿಗೆ ಹೀಗೆ ಉಪದೇಶಮಾಡಿ ಅವರಿಗೆ ಸ್ನಾನಾದಿಗಳನ್ನು ಮಾಡಿಸಲು ಅನೇಕ ಸ್ತ್ರೀ-ಪುರುಷರನ್ನು ನೇಮಿಸಿದನು. ॥ ೨೪ ॥ ಪರೀಕ್ಷಿದ್ರಾಜನೇ! ಜರಾಸಂಧನ ಪುತ್ರನಾದ ಸಹದೇವನಿಂದ ಅವರಿಗೆಲ್ಲ ರಾಜೋಚಿತವಾದ ವಸ್ತ್ರಾಭೂಷಣಗಳನ್ನು, ಮಾಲೆ – ಚಂದನಾದಿಗಳನ್ನು ಕೊಡಿಸಿ ಬಹಳವಾಗಿ ಸನ್ಮಾನಿಸಿದನು. ॥ ೨೫॥ ರಾಜರೆಲ್ಲರೂ ಸ್ನಾನ ಮಾಡಿ ವಸ್ತ್ರಾಭರಣಗಳಿಂದ ಅಲಂಕೃತರಾದಾಗ ಅವರಿಗೆ ನಾನಾ ವಿಧವಾದ ಮೃಷ್ಟಾನ್ನದ ಭೋಜನವನ್ನು ಮಾಡಿಸಿ, ರಾಜೋಚಿತವಾದ ಫಲ-ಪುಷ್ಪ-ತಾಂಬೂಲಗಳನ್ನು ಸಹದೇವನಿಂದ ಶ್ರೀಕೃಷ್ಣನು ಕೊಡಿಸಿದನು. ॥ ೨೬ ॥ ಭಗವಾನ್ ಶ್ರೀಕೃಷ್ಣನು ಹೀಗೆ ಸೆರೆಯಿಂದ ಮುಕ್ತರಾದ ರಾಜರನ್ನು ಸಮ್ಮಾನಿಸಿದನು. ಈಗ ಅವರು ಸಮಸ್ತ ಕ್ಲೇಶಗಳಿಂದ ಬಿಡುಗಡೆಹೊಂದಿ, ದಿವ್ಯವಾದ ಕುಂಡಲಗಳಿಂದ ಸಮಲಂಕೃತರಾಗಿ ವರ್ಷಾಕಾಲವು ಕಳೆದನಂತರ ಮೋಡಗಳಿಲ್ಲದ ಆಕಾಶದಲ್ಲಿ ತಾರೆಗಳು ಬೆಳಗುವಂತೆ ರಾರಾಜಿಸಿದರು. ॥ ೨೭ ॥

ರಥಾನ್ಸದಶ್ವಾನಾರೋಪ್ಯ ಮಣಿಕಾಂಚನಭೂಷಿತಾನ್ ।
ಪ್ರೀಣಯ್ಯ ಸೂನೃತೈರ್ವಾಕ್ಯೈಃ ಸ್ವದೇಶಾನ್ಪ್ರತ್ಯಯಾಪಯತ್
॥ ೨೮ ॥

ಮತ್ತೆ ಭಗವಾನ್ ಶ್ರೀಕೃಷ್ಣನು ಮಣಿಕಾಂಚನಗಳಿಂದ ಭೂಷಿತವಾದ, ಶ್ರೇಷ್ಠವಾದ ಕುದುರೆಗಳಿಂದ ಕೂಡಿದ ರಥಗಳಲ್ಲಿ ಆ ರಾಜರನ್ನು ಕುಳ್ಳಿರಿಸಿ, ಸುಮಧುರವಾದ ಮಾತುಗಳಿಂದ ಅವರನ್ನು ತೃಪ್ತಿಪಡಿಸಿ ಅವರವರ ದೇಶಗಳಿಗೆ ಕಳಿಸಿಕೊಟ್ಟನು. ॥ ೨೮ ॥ ಹೀಗೆ ಉದಾರಶಿರೋಮಣಿಯಾದ ಭಗವಾನ್ ಶ್ರೀಕೃಷ್ಣನು ಎಲ್ಲ ರಾಜರನ್ನು ಕಷ್ಟದಿಂದ ಪಾರುಮಾಡಿದನು. ಆ ರಾಜರೆಲ್ಲರೂ ಜಗತ್ಪತಿಯಾದ ಶ್ರೀಕೃಷ್ಣನ ರೂಪ, ಗುಣ ಮತ್ತು ಲೀಲೆಗಳನ್ನು ಚಿಂತಿಸುತ್ತಾ ತಮ್ಮ-ತಮ್ಮ ರಾಜಧಾನಿಗಳಿಗೆ ಪ್ರಯಾಣ ಮಾಡಿದರು. ॥ ೨೯ ॥ ತಮ್ಮ ರಾಜಧಾನಿಗೆ ತೆರಳಿದ ಬಳಿಕ ಆ ರಾಜರೆಲ್ಲರೂ ಮಹಾಪುರುಷನಾದ ಶ್ರೀಕೃಷ್ಣನು ತಮಗೆ ಮಾಡಿದ ಉಪಕಾರವನ್ನೂ, ಅವನ ಇತರ ಅದ್ಭುತವಾದ ಲೀಲಾ ಪ್ರಸಂಗಗಳನ್ನು ಪ್ರಜೆಗಳಲ್ಲಿ ಪ್ರಚುರಪಡಿಸಿದರು. ಮತ್ತೆ ಎಚ್ಚರಿಕೆಯಿಂದ ಭಗವಂತನ ಆಜ್ಞಾನುಸಾರವಾಗಿ ತಮ್ಮ ಜೀವನವನ್ನು ನಿರ್ವಹಿಸುತ್ತಿದ್ದರು. ॥ ೩೦ ॥

ತ ಏವಂ ಮೋಚಿತಾಃ ಕೃಚ್ಛ್ರಾತ್ ಕೃಷ್ಣೇನ ಸುಮಹಾತ್ಮನಾ ।
ಯಯುಸ್ತಮೇವ ಧ್ಯಾಯಂತಃ ಕೃತಾನಿ ಚ ಜಗತ್ಪತೇಃ
॥ ೨೯ ॥

ಜಗದುಃ ಪ್ರಕೃತಿಭ್ಯಸ್ತೇ ಮಹಾಪುರುಷಚೇಷ್ಟಿತಮ್ ।
ಯಥಾನ್ವಶಾಸದ್ಭಗವಾಂಸ್ತಥಾ ಚಕ್ರುರತಂದ್ರಿತಾಃ
॥ ೩೦ ॥

ಜರಾಸಂಧಂ ಘಾತಯಿತ್ವಾ ಭೀಮಸೇನೇನ ಕೇಶವಃ ।
ಪಾರ್ಥಾಭ್ಯಾಂ ಸಂಯುತಃ ಪ್ರಾಯಾತ್ಸಹದೇವೇನ ಪೂಜಿತಃ
॥ ೩೧ ॥

ಗತ್ವಾ ತೇ ಖಾಂಡವಪ್ರಸ್ಥಂ ಶಂಖಾನ್ ದಧ್ಮುರ್ಜಿತಾರಯಃ ।
ಹರ್ಷಯಂತಃ ಸ್ವಸುಹೃದೋ ದುರ್ಹೃದಾಂ ಚಾಸುಖಾವಹಾಃ
॥ ೩೨ ॥

ಪರೀಕ್ಷಿತನೇ ! ಈ ಪ್ರಕಾರವಾಗಿ ಭಗವಾನ್ ಶ್ರೀಕೃಷ್ಣನು ಭೀಮಸೇನನಿಂದ ಜರಾಸಂಧನ ವಧೆಯನ್ನು ಮಾಡಿಸಿ, ಭೀಮಸೇನ ಮತ್ತು ಅರ್ಜುನರೊಂದಿಗೆ ಜರಾಸಂಧನ ಮಗನಾದ ಸಹದೇವನಿಂದ ಸತ್ಕೃತರಾಗಿ ಇಂದ್ರಪ್ರಸ್ಥಕ್ಕೆ ಪ್ರಯಾಣ ಮಾಡಿದರು. ವಿಜಯಿಗಳಾಗಿ ಬಂದಿರುವ ಕೃಷ್ಣಾರ್ಜುನ ಭೀಮಸೇನರು ಇಂದ್ರಪ್ರಸ್ಥದ ಸಮೀಪಕ್ಕೆ ಬಂದು ತಮ್ಮ-ತಮ್ಮ ಶಂಖಗಳನ್ನು ಊದಿದರು. ಇದರಿಂದ ಅವರ ಇಷ್ಟ ಮಿತ್ರರಿಗೆ ಬಹಳ ಸುಖವಾದರೆ ಶತ್ರುಗಳಿಗೆ ತುಂಬಾ ದುಃಖವಾಯಿತು. ॥ ೩೧-೩೨ ॥ ಆ ಶಂಖಧ್ವನಿಯನ್ನು ಕೇಳಿ ಇಂದ್ರಪ್ರಸ್ಥದ ನಿವಾಸಿಗಳ ಮನಸ್ಸು ಪ್ರಫುಲ್ಲಿತವಾಯಿತು. ಜರಾಸಂಧನು ಮೃತನಾದನೆಂದೇ ಅವರು ತಿಳಿದುಕೊಂಡರು. ಇನ್ನು ಯುಧಿಷ್ಠಿರ ಮಹಾರಾಜರ ರಾಜಸೂಯಯಜ್ಞದ ಸಂಕಲ್ಪವು ಈಡೇರಿದಂತೆಯೇ ಸರಿ ಎಂದು ಆನಂದಿಸಿದರು. ॥ ೩೩ ॥ ಭೀಮಾರ್ಜುನ ಶ್ರೀಕೃಷ್ಣರು ಅರಮನೆಗೆ ಬಂದು ಯುಧಿಷ್ಠಿರನನ್ನು ವಂದಿಸಿ, ಜರಾಸಂಧನ ವಧೆಗಾಗಿ ತಾವು ಮಾಡಿದ ಎಲ್ಲ ಕಾರ್ಯಗಳನ್ನು ವಿವರಿಸಿ ಹೇಳಿದರು. ॥ ೩೪ ॥ ಭಗವಾನ್ ಶ್ರೀಕೃಷ್ಣನ ಪರಮಾನುಗ್ರಹದ ಮಾತನ್ನು ಕೇಳಿದ ಯುಧಿಷ್ಠಿರನು ಆನಂದಭರಿತನಾದನು. ಆನಂದಾಶ್ರುಗಳು ಕಣ್ಣುಗಳಿಂದ ಹರಿಯತೊಡಗಿದವು. ಇದರಿಂದ ಅವನಿಗೆ ಏನನ್ನೂ ಮಾತನಾಡಲು ಸಾಧ್ಯವಾಗದೇ ಹೋಯಿತು. ॥ ೩೫ ॥

ತಚ್ಛ್ರುತ್ವಾ ಪ್ರೀತಮನಸ ಇಂದ್ರಪ್ರಸ್ಥನಿವಾಸಿನಃ ।
ಮೇನಿರೇ ಮಾಗಧಂ ಶಾಂತಂ ರಾಜಾ ಚಾಪ್ತಮನೋರಥಃ
॥ ೩೩ ॥

ಅಭಿವಂದ್ಯಾಥ ರಾಜಾನಂ ಭೀಮಾರ್ಜುನಜನಾರ್ದನಾಃ ।
ಸರ್ವಮಾಶ್ರಾವಯಾಂಚಕ್ರುರಾತ್ಮನಾ ಯದನುಷ್ಠಿತಮ್
॥ ೩೪ ॥

ನಿಶಮ್ಯ ಧರ್ಮರಾಜಸ್ತತ್ ಕೇಶವೇನಾನುಕಂಪಿತಮ್ ।
ಆನಂದಾಶ್ರುಕಲಾಂ ಮುಂಚನ್ಪ್ರೇಮ್ಣಾ ನೋವಾಚ ಕಿಂಚನ
॥ ೩೫ ॥

*ಎಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೭೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಕೃಷ್ಣಾದ್ಯಾಗಮನಂ ನಾಮ ತ್ರಿಸಪ್ತತಿತಮೋಽಧ್ಯಾಯಃ ॥ ೭೩ ॥

# ಎಪ್ಪತ್ತನಾಲ್ಕನೆಯ ಅಧ್ಯಾಯ

## ಭಗವಂತನ ಅಗ್ರಪೂಜೆ - ಶಿಶುಪಾಲವಧೆ

*ಶ್ರೀಶುಕ ಉವಾಚ*

ಏವಂ ಯುಧಿಷ್ಠಿರೋ ರಾಜಾ ಜರಾಸಂಧವಧಂ ವಿಭೋಃ ।
ಕೃಷ್ಣಸ್ಯ ಚಾನುಭಾವಂ ತಂ ಶ್ರುತ್ವಾ ಪ್ರೀತಸ್ತಮಬ್ರವೀತ್ ॥ ೧ ॥

*ಯುಧಿಷ್ಠಿರ ಉವಾಚ*

ಯೇ ಸ್ಯುಸ್ತ್ರೈಲೋಕ್ಯಗುರವಃ ಸರ್ವೇ ಲೋಕಮಹೇಶ್ವರಾಃ ।
ವಹಂತಿ ದುರ್ಲಭಂ ಲಬ್ಧ್ವಾ ಶಿರಸೈವಾನುಶಾಸನಮ್ ॥ ೨ ॥

ಸ ಭವಾನರವಿಂದಾಕ್ಷೋ ದೀನಾನಾಮೀಶಮಾನಿನಾಮ್ ।
ಧತ್ತೇಽನುಶಾಸನಂ ಭೂಮಂಸ್ತದತ್ಯಂತವಿಡಂಬನಮ್ ॥ ೩ ॥

ನ ಹ್ಯೇಕಸ್ಯಾದ್ವಿತೀಯಸ್ಯ ಬ್ರಹ್ಮಣಃ ಪರಮಾತ್ಮನಃ ।
ಕರ್ಮಭಿರ್ವರ್ಧತೇ ತೇಜೋ ಹ್ರಸತೇ ಚ ಯಥಾ ರವೇಃ ॥ ೪ ॥

ನ ವೈ ತೇಽಜಿತ ಭಕ್ತಾನಾಂ ಮಮಾಹಮಿತಿ ಮಾಧವ ।
ತ್ವಂ ತವೇತಿ ಚ ನಾನಾಧೀಃ ಪಶೂನಾಮಿವ ವೈಕೃತಾ ॥ ೫ ॥

*ಶ್ರೀಶುಕ ಉವಾಚ*

ಇತ್ಯುಕ್ತ್ವಾ ಯಜ್ಞಿಯೇ ಕಾಲೇ ವವ್ರೇ ಯುಕ್ತಾನ್ಸ ಋತ್ವಿಜಃ ।
ಕೃಷ್ಣಾನುಮೋದಿತಃ ಪಾರ್ಥೋ ಬ್ರಾಹ್ಮಣಾನ್ಬ್ರಹ್ಮವಾದಿನಃ ॥ ೬ ॥

ದ್ವೈಪಾಯನೋ ಭರದ್ವಾಜಃ ಸುಮಂತುರ್ಗೌತಮೋಽಸಿತಃ ।
ವಸಿಷ್ಠಶ್ಚ್ಯವನಃ ಕಣ್ವೋ ಮೈತ್ರೇಯಃ ಕವಷಸ್ತ್ರಿತಃ ॥ ೭ ॥

ವಿಶ್ವಾಮಿತ್ರೋ ವಾಮದೇವಃ ಸುಮತಿರ್ಜೈಮಿನಿಃ ಕ್ರತುಃ ।
ಪೈಲಃ ಪರಾಶರೋ ಗರ್ಗೋ ವೈಶಂಪಾಯನ ಏವ ಚ ॥ ೮ ॥

ಅಥರ್ವಾ ಕಶ್ಯಪೋ ಧೌಮ್ಯೋ ರಾಮೋ ಭಾರ್ಗವ ಆಸುರಿಃ ।
ವೀತಿಹೋತ್ರೋ ಮಧುಚ್ಛಂದಾ ವೀರಸೇನೋಽಕೃತವ್ರಣಃ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ! ಯುಧಿಷ್ಠಿರ ಮಹಾರಾಜನು ಜರಾಸಂಧನ ವಧೆ ಮತ್ತು ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನ ಅದ್ಭುತ ಮಹಿಮೆಯನ್ನು ಕೇಳಿ ಸುಪ್ರೀತನಾಗಿ ಇಂತೆಂದನು - ॥ ೧ ॥

**ಯುಧಿಷ್ಠಿರನು ಹೇಳಿದನು** - ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣ! ಮೂರು ಲೋಕಗಳಿಗೂ ಸ್ವಾಮಿಗಳಾದ ಬ್ರಹ್ಮಾ-ಶಂಕರರು ಮತ್ತು ಇಂದ್ರನೇ ಮೊದಲಾದ ಲೋಕಪಾಲರು ನಿನ್ನ ಆಜ್ಞೆಯನ್ನು ಪಡೆಯಲು ತವಕಿಸುತ್ತಿರುವರು. ಅದು ದೊರಕಿದರೆ ಬಹಳ ಶ್ರದ್ಧೆಯಿಂದ ಶಿರಸಾವಹಿಸಿ ಪಾಲಿಸುತ್ತಾರೆ. ॥ ೨ ॥ ಅನಂತನೇ! ನಾವಾದರೋ ಅತ್ಯಂತ ದೀನರಾಗಿದ್ದರೂ ಭೂಪತಿ, ನರಪತಿಗಳೆಂದು ಭಾವಿಸಿಕೊಂಡಿದ್ದೇವೆ. ಇಂತಹ ಸ್ಥಿತಿಯಲ್ಲಿ ನಾವು ದಂಡನೆಗೆ ಅರ್ಹರಾಗಿದ್ದರೂ ನೀನು ನಮ್ಮ ಆಜ್ಞೆಯನ್ನು ಸ್ವೀಕರಿಸಿ ಅದನ್ನು ಪಾಲಿಸುತ್ತಿರುವೆ. ಸರ್ವಶಕ್ತನಾದ, ಕಮಲಾಕ್ಷನಾದ ಭಗವಂತನಿಗೆ ಇದು ಮನುಷ್ಯಲೀಲೆಯ ಅಭಿನಯ ಮಾತ್ರವಾಗಿದೆ. ॥ ೩ ॥ ಉದಯಾಸ್ತಮಾನಗಳಿಗೆ ಕಾರಣನಾದ ಸೂರ್ಯನ ತೇಜಸ್ಸು ಹೆಚ್ಚು-ಕಡಿಮೆಯಾಗದಿರುವಂತೆಯೇ, ಯಾವುದೇ ಪ್ರಕಾರದ ಕರ್ಮಗಳಿಂದ ನಿನ್ನಲ್ಲಿ ಉಲ್ಲಾಸವಾಗಲೀ, ಹ್ರಾಸವಾಗಲಿ ಆಗುವುದಿಲ್ಲ. ಏಕೆಂದರೆ, ನೀನ ಸಜಾತಿಯ, ವಿಜಾತೀಯ ಮತ್ತು ಸ್ವಗತಭೇದದಿಂದ ರಹಿತನಾದ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನಾಗಿರುವೆ. ॥ ೪ ॥ ಯಾರಿಂದಲೂ ಜಯಿಸಲ್ಪಡದ ಮಾಧವನೇ! 'ಇದು ನಾನು-ನನ್ನದು, ಇದು ನೀನು-ನಿನ್ನದು' ಇಂತಹ ವಿಕಾರ ಯುಕ್ತ ಭೇದ ಬುದ್ಧಿಯು ಪಶುಗಳಲ್ಲಿರುತ್ತದೆ. ಆದರೆ ನಿನ್ನ ಅನನ್ಯ ಭಕ್ತರಾದವರ ಚಿತ್ತದಲ್ಲಿ ಇಂತಹ ಹುಚ್ಚುತನದ ವಿಚಾರವೇ ಬರುವುದಿಲ್ಲ. ಹೀಗಿರುವಾಗ ನಿನ್ನಲ್ಲಿ ಹೇಗಿದ್ದೀತು? ನೀನು ಮಾಡುವುದೆಲ್ಲವೂ ಲೀಲೆಯೇ ಆಗಿದೆ. ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಹೇಳಿ ಯುಧಿಷ್ಠಿರನು ಭಗವಾನ್ ಶ್ರೀಕೃಷ್ಣನ ಅನುಮತಿಯಂತೆ ಯಜ್ಞದ ಕಾಲವು ಸನ್ನಿಹಿತವಾಗಲು ಯಜ್ಞಕರ್ಮಗಳಲ್ಲಿ ನಿಪುಣರಾದ ವೇದವಾದಿಗಳಾದ ಬ್ರಾಹ್ಮಣರನ್ನು ಋತ್ವಿಕ್-ಆಚಾರ್ಯರನ್ನು ವರಣಮಾಡಿಕೊಂಡನು. ॥ ೬ ॥ ಅವರ ಹೆಸರು ಇಂತಿತ್ತು - ಶ್ರೀಕೃಷ್ಣ ದ್ವೈಪಾಯನ ವ್ಯಾಸರು, ಭರದ್ವಾಜ, ಸುಮಂತು, ಗೌತಮ, ಅಸಿತ, ವಸಿಷ್ಠ ಚ್ಯವನ, ಕಣ್ವ, ಮೈತ್ರೇಯ, ಕವಷ, ತ್ರಿತ, ವಿಶ್ವಾಮಿತ್ರ, ವಾಮದೇವ, ಸುಮತಿ, ಜೈಮಿನಿ, ಕ್ರತು, ಪೈಲ, ಪರಾಶರ, ಗರ್ಗ, ವೈಶಂಪಾಯನ, ಅಥರ್ವಣ, ಕಶ್ಯಪ, ಧೌಮ್ಯ, ಪರಶುರಾಮ, ಶುಕ್ರಾಚಾರ್ಯ, ಆಸುರಿ, ವೀತಿಹೋತ್ರ, ಮಧುಚ್ಛಂದಸ, ವೀರಸೇನ ಮತ್ತು ಅಕೃತವ್ರಣ. ॥ ೭-೯ ॥

ಉಪಹೂತಾಸ್ತಥಾ ಚಾನ್ಯೇ ದ್ರೋಣಭೀಷ್ಮಕೃಪಾದಯಃ ।
ಧೃತರಾಷ್ಟ್ರಃ ಸಹಸುತೋ ವಿದುರಶ್ಚ ಮಹಾಮತಿಃ
॥ ೧೦ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯಜ್ಞದಿದೃಕ್ಷವಃ ।
ತತ್ರೇಯುಃ ಸರ್ವರಾಜಾನೋ ರಾಜ್ಞಾಂ ಪ್ರಕೃತಯೋ ನೃಪ
॥ ೧೧ ॥

ತತಸ್ತೇ ದೇವಯಜನಂ ಬ್ರಾಹ್ಮಣಾಃ ಸ್ವರ್ಣಲಾಂಗಲೈಃ ।
ಕೃಷ್ಟ್ವಾ ತತ್ರ ಯಥಾಮ್ನಾಯಂ ದೀಕ್ಷಯಾಂಚಕ್ರಿರೇ ನೃಪಮ್
॥ ೧೨ ॥

ಹೈಮಾಃ ಕಿಲೋಪಕರಣಾ ವರುಣಸ್ಯ ಯಥಾ ಪುರಾ ।
ಇಂದ್ರಾದಯೋ ಲೋಕಪಾಲಾ ವಿರಿಂಚಭವಸಂಯುತಾಃ
॥ ೧೩ ॥

ಸಗಣಾಃ ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ।
ಮುನಯೋ ಯಕ್ಷರಕ್ಷಾಂಸಿ ಖಗಕಿನ್ನರಚಾರಣಾಃ
॥ ೧೪ ॥

ರಾಜಾನಶ್ಚ ಸಮಾಹೂತಾ ರಾಜಪತ್ನ್ಯಶ್ಚ ಸರ್ವಶಃ ।
ರಾಜಸೂಯಂ ಸಮೀಯುಃ ಸ್ಮ ರಾಜ್ಞಃ ಪಾಂಡುಸುತಸ್ಯ ವೈ
॥ ೧೫ ॥

ಮೇನಿರೇ ಕೃಷ್ಣಭಕ್ತಸ್ಯ ಸೂಪಪನ್ನಮವಿಸ್ಮಿತಾಃ ।
ಅಯಾಜಯನ್ಮಹಾರಾಜಂ ಯಾಜಕಾ ದೇವವರ್ಚಸಃ ।
ರಾಜಸೂಯೇನ ವಿಧಿವತ್ಪ್ರಾಚೇತಸಮಿವಾಮರಾಃ
॥ ೧೬ ॥

ಸೌತ್ಯೇಽಹನ್ಯವನೀಪಾಲೋ ಯಾಜಕಾನ್ ಸದಸಸ್ಪತೀನ್ ।
ಅಪೂಜಯನ್ಮಹಾಭಾಗಾನ್ ಯಥಾವತ್ ಸುಸಮಾಹಿತಃ
॥ ೧೭ ॥

ಸದಸ್ಯಾಗ್ರ್ಯಾರ್ಹಣಾರ್ಹಂ ವೈ ವಿಮೃಶಂತಃ ಸಭಾಸದಃ ।
ನಾಧ್ಯಗಚ್ಛನ್ನನೈಕಾಂತ್ಯಾತ್ ಸಹದೇವಸ್ತದಾಬ್ರವೀತ್
॥ ೧೮ ॥

ಅರ್ಹತಿ ಹ್ಯಚ್ಯುತಃ ಶ್ರೈಷ್ಠ್ಯಂ ಭಗವಾನ್ ಸಾತ್ವತಾಂ ಪತಿಃ ।
ಏಷ ವೈ ದೇವತಾಃ ಸರ್ವಾ ದೇಶಕಾಲಧನಾದಯಃ
॥ ೧೯ ॥

ಯದಾತ್ಮಕಮಿದಂ ವಿಶ್ವಂ ಕ್ರತವಶ್ಚ ಯದಾತ್ಮಕಾಃ ।
ಅಗ್ನಿರಾಹುತಯೋ ಮಂತ್ರಾಃ ಸಾಂಖ್ಯಂ ಯೋಗಶ್ಚ ಯತ್ಪರಃ
॥ ೨೦ ॥

ಇವರಲ್ಲದೇ ದ್ರೋಣಾಚಾರ್ಯ, ಭೀಷ್ಮಪಿತಾಮಹ, ಕೃಪಚಾರ್ಯ, ಧೃತರಾಷ್ಟ್ರ ದುರ್ಯೋಧನನೇ ಮೊದಲಾದ ಅವನ ಮಕ್ಕಳು, ಮಹಾಮತಿ ವಿದುರ ಇವರನ್ನು ಧರ್ಮರಾಯನು ಕರೆಸಿದನು. ॥ ೧೦ ॥ ರಾಜೇಂದ್ರ! ರಾಜಸೂಯ ಯಜ್ಞವನ್ನು ನೋಡಲು ದೇಶ-ದೇಶಗಳ ಎಲ್ಲ ರಾಜರೂ ಅವರ ಮಂತ್ರಿಗಳೂ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೂ, ಸಮಸ್ತ ಪ್ರಜೆಗಳೂ ಇಂದ್ರಪ್ರಸ್ಥಕ್ಕೆ ಆಗಮಿಸಿದರು. ॥ ೧೧ ॥

ಅನಂತರ ಋತ್ವಿಜ ಬ್ರಾಹ್ಮಣರು ಶುಭಮುಹೂರ್ತದಲ್ಲಿ ಚಿನ್ನದ ನೇಗಿಲಿನಿಂದ ಯಾಗಭೂಮಿಯನ್ನು ಉತ್ತು ಯುಧಿಷ್ಠಿರನಿಗೆ ಶಾಸ್ತ್ರವಿಧಿಗನುಸಾರವಾಗಿ ಯಜ್ಞದೀಕ್ಷೆಯನ್ನು ಕೊಟ್ಟರು. ॥ ೧೨ ॥ ಹಿಂದಿನ ಕಾಲದಲ್ಲಿ ವರುಣನ ಯಜ್ಞದಲ್ಲಿ ಯಜ್ಞಪಾತ್ರೆಗಳೆಲ್ಲವೂ ಸ್ವರ್ಣಮಯವಾಗಿದ್ದಂತೆಯೇ ಯುಧಿಷ್ಠಿರನ ಯಜ್ಞದಲ್ಲಿಯೂ ಎಲ್ಲ ಸ್ವರ್ಣಪಾತ್ರೆಗಳೇ ಇದ್ದವು ರಾಜಸೂಯಯಜ್ಞಕ್ಕೆ ಯುಧಿಷ್ಠಿರ ನಿಂದ ಆಹ್ವಾನವನ್ನು ಸ್ವೀಕರಿಸಿದ ಬ್ರಹ್ಮದೇವರು, ರುದ್ರ ದೇವರು, ಇಂದ್ರಾದಿ ಲೋಕಪಾಲರು, ತಮ್ಮ-ತಮ್ಮ ಗಣಗಳೊಂದಿಗೆ ಸಿದ್ಧ ಗಂಧರ್ವರು, ವಿದ್ಯಾಧರರು, ನಾಗರು, ಮುನಿಗಳು, ಯಕ್ಷರು, ರಾಕ್ಷಸರು, ಪಕ್ಷಿಗಳು, ಕಿನ್ನರ-ಚಾರಣರು, ದೊಡ್ಡ-ದೊಡ್ಡ ರಾಜರು, ರಾಜಪತ್ನಿಯರು – ಹೀಗೆ ಇವರೆಲ್ಲರೂ ಆಗಮಿಸಿದರು. ॥ ೧೩-೧೫ ॥ ರಾಜಸೂಯದ ವೈಭವವನ್ನು ಕಂಡು ಯಾರೂ ಅಚ್ಚರಿಗೊಳ್ಳಲಿಲ್ಲ. ಭಗವಾನ್ ಶ್ರೀಕೃಷ್ಣನ ಪರಮ ಭಕ್ತನಾದ ಯುಧಿಷ್ಠಿರನಿಗೆ ಇದು ಅನುರೂಪವಾಗಿರುವುದೆಂದೇ ಎಲ್ಲರೂ ಭಾವಿಸಿದರು. ಹಿಂದೆ ವರುಣನಿಂದ ದೇವತೆಗಳು ರಾಜಸೂಯ ಯಾಗವನ್ನು ಮಾಡಿಸಿದಂತೆಯೇ, ದೇವತೆಗಳಂತೆಯೇ ಮಹಾತೇಜಸ್ವಿಗಳಾದ ಯಾಜಕರು ಯುಧಿಷ್ಠಿರನಿಂದ ವಿಧಿವತ್ತಾಗಿ ರಾಜಸೂಯ ಯಜ್ಞವನ್ನು ಮಾಡಿಸಿದರು. ॥ ೧೬ ॥ ಸೋಮರಸವನ್ನು ಹಿಂಡುವ ದಿವಸ ಧರ್ಮರಾಜನು ತನ್ನ ಪರಮಭಾಗ್ಯಶಾಲಿಗಳಾದ ಯಾಜಕರನ್ನು ಮತ್ತು ಯಜ್ಞದ ನ್ಯೂನಾತಿರೇಕಗಳನ್ನು ನಿರೀಕ್ಷಿಸಲು ನಿಯುಕ್ತರಾಗಿದ್ದ ಸದಸಸ್ಪತಿಗಳನ್ನು ಏಕಾಗ್ರಚಿತ್ತದಿಂದ ಪೂಜಿಸಿ ಸತ್ಕರಿಸಿದನು. ॥ ೧೭ ॥

ಈಗ ಸಭಾಸದಸ್ಯರಲ್ಲಿ ಮೊಟ್ಟಮೊದಲಿಗೆ ಯಾರನ್ನು ಪೂಜಿಸಬೇಕು? ಅಗ್ರಪೂಜೆ ಯಾರಿಗೆ ಎಂಬ ವಿಷಯದಲ್ಲಿ ಅಲ್ಲಿ ನೆರೆದ ಸಭಾಸದರು ಚರ್ಚಿಸತೊಡಗಿದರು. ಎಷ್ಟು ಮತಿಗಳೋ ಅಷ್ಟು ಮತಗಳು. ಆದರಿಂದ ಸರ್ವಸಮ್ಮತವಾದ ನಿರ್ಣಯವು ಆಗದೇ ಹೋಯಿತು. ಇಂತಹ ಸ್ಥಿತಿಯಲ್ಲಿ ಸಹದೇವನು ಹೇಳಿದನು-॥೧೮॥ ಯದುವಂಶಶಿರೋಮಣಿ ಭಕ್ತವತ್ಸಲ ಭಗವಾನ್ ಶ್ರೀಕೃಷ್ಣನೇ ಸರ್ವಸದಸ್ಯರಲ್ಲಿ ಶ್ರೇಷ್ಠನೂ, ಅಗ್ರಪೂಜೆಗೆ ಯೋಗ್ಯನಾಗಿದ್ದಾನೆ. ಏಕೆಂದರೆ, ಇವನೇ ಸಮಸ್ತ ದೇವತೆಗಳ ರೂಪದಲ್ಲಿರುವವನು ಮತ್ತು ದೇಶ, ಕಾಲ, ಧನ ಮುಂತಾದ ಇರುವ ಎಲ್ಲ ವಸ್ತುಗಳ ರೂಪದಲ್ಲಿಯೂ ಅವನೇ ಆಗಿದ್ದಾನೆ. ॥ ೧೯ ॥ ಸಮಸ್ತ ವಿಶ್ವವೂ ಶ್ರೀಕೃಷ್ಣನ ರೂಪವೇ ಆಗಿದೆ. ಭಗವಾನ್ ಶ್ರೀಕೃಷ್ಣನೇ ಅಗ್ನಿ, ಆಹುತಿ ಮತ್ತು ಮಂತ್ರದ ಸ್ವರೂಪನಾಗಿರುವನು. ಜ್ಞಾನಮಾರ್ಗ ಮತ್ತು ಕರ್ಮಮಾರ್ಗ ಇವೆರಡೂ ಅವನನ್ನು ಪಡೆಯುವ ಸಾಧನಗಳಾಗಿವೆ. ॥ ೨೦ ॥

ಏಕ ಏವಾದ್ವಿತೀಯೋಽಸಾವೈತದಾತ್ಮ್ಯಮಿದಂ ಜಗತ್ ।
ಆತ್ಮನಾಽಽತ್ಮಾಶ್ರಯಃ ಸಭ್ಯಾಃ ಸೃಜತ್ಯವತಿ ಹಂತ್ಯಜಃ ॥ ೨೧ ॥

ವಿವಿಧಾನೀಹ ಕರ್ಮಾಣಿ ಜನಯನ್ಯದವೇಕ್ಷಯಾ ।
ಈಹತೇ ಯದಯಂ ಸರ್ವಃ ಶ್ರೇಯೋ ಧರ್ಮಾದಿಲಕ್ಷಣಮ್ ॥ ೨೨ ॥

ತಸ್ಮಾತ್ ಕೃಷ್ಣಾಯ ಮಹತೇ ದೀಯತಾಂ ಪರಮಾರ್ಹಣಮ್ ।
ಏವಂ ಚೇತ್ ಸರ್ವಭೂತಾನಾಮಾತ್ಮನಶ್ಚಾರ್ಹಣಂ ಭವೇತ್ ॥ ೨೩ ॥

ಸರ್ವಭೂತಾತ್ಮಭೂತಾಯ ಕೃಷ್ಣಾಯಾನನ್ಯದರ್ಶಿನೇ ।
ದೇಯಂ ಶಾಂತಾಯ ಪೂರ್ಣಾಯ ದತ್ತಸ್ಯಾನಂತ್ಯಮಿಚ್ಛತಾ ॥ ೨೪ ॥

ಇತ್ಯುಕ್ತ್ವಾ ಸಹದೇವೋಽಭೂತ್ತೂಷ್ಣೀಂ ಕೃಷ್ಣಾನುಭಾವವಿತ್ ।
ತಚ್ಛ್ರುತ್ವಾ ತುಷ್ಟುವುಃ ಸರ್ವೇ ಸಾಧು ಸಾಧ್ವಿತಿ ಸತ್ತಮಾಃ ॥ ೨೫ ॥

ಶ್ರುತ್ವಾ ದ್ವಿಜೇರಿತಂ ರಾಜಾ ಜ್ಞಾತ್ವಾ ಹಾರ್ದಂ ಸಭಾಸದಾಮ್ ।
ಸಮರ್ಹಯದ್ಧೃಷೀಕೇಶಂ ಪ್ರೀತಃ ಪ್ರಣಯವಿಹ್ವಲಃ ॥ ೨೬ ॥

ತತ್ಪಾದಾವವನಿಜ್ಯಾಪಃ ಶಿರಸಾ ಲೋಕಪಾವನೀಃ ।
ಸಭಾರ್ಯಃ ಸಾನುಜಾಮಾತ್ಯಃ ಸಕುಟುಂಬೋಽವಹನ್ಮುದಾ ॥ ೨೭ ॥

ವಾಸೋಭಿಃ ಪೀತಕೌಶೇಯೈರ್ಭೂಷಣೈಶ್ಚ ಮಹಾಧನೈಃ ।
ಅರ್ಹಯಿತ್ವಾಶ್ರುಪೂರ್ಣಾಕ್ಷೋ ನಾಶಕತ್ಸಮವೇಕ್ಷಿತುಮ್ ॥ ೨೮ ॥

ಇತ್ಥಂ ಸಭಾಜಿತಂ ವೀಕ್ಷ್ಯ ಸರ್ವೇ ಪ್ರಾಂಜಲಯೋ ಜನಾಃ ।
ನಮೋ ಜಯೇತಿ ನೇಮುಸ್ತಂ ನಿಪೇತುಃ ಪುಷ್ಪವೃಷ್ಟಯಃ ॥ ೨೯ ॥

ಇತ್ಥಂ ನಿಶಮ್ಯ ದಮಘೋಷಸುತಃ ಸ್ವಪೀಠಾ-
ದುತ್ಥಾಯ ಕೃಷ್ಣಗುಣವರ್ಣನಜಾತಮನ್ಯುಃ ।
ಉತ್ಕ್ಷಿಪ್ಯ ಬಾಹುಮಿದಮಾಹ ಸದಸ್ಯಮರ್ಷೀ
ಸಂಶ್ರಾವಯನ್ ಭಗವತೇ ಪರುಷಾಣ್ಯಭೀತಃ ॥ ೩೦ ॥

ಸಭಾಸದರೇ! ಭಗವಾನ್ ಶ್ರೀಕೃಷ್ಣನು ಏಕಮೇವಾದ್ವಿತೀಯ ಬ್ರಹ್ಮನಾಗಿದ್ದಾನೆ. ಅಖಂಡ ಬ್ರಹ್ಮಾಂಡವೂ ಇವನ ಸ್ವರೂಪವೇ ಆಗಿದೆ. ಅವನು ತಾನೇ-ತನ್ನಲ್ಲಿ ಸ್ಥಿತನಾಗಿದ್ದಾನೆ ಮತ್ತು ಜನ್ಮ, ಅಸ್ತಿತ್ವ, ವೃದ್ಧಿ ಮೊದಲಾದ ಆರು ಭಾವ ವಿಕಾರಗಳಿಂದ ರಹಿತನಾಗಿದ್ದಾನೆ. ಅವನು ತನ್ನ ಆತ್ಮಸ್ವರೂಪ ಸಂಕಲ್ಪದಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. ॥ ೨೧ ॥ ಸಮಸ್ತ ಜಗತ್ತು ಶ್ರೀಕೃಷ್ಣನ ಅನುಗ್ರಹದಿಂದಲೇ ಅನೇಕ ವಿಧದ ಕರ್ಮಾನುಷ್ಠಾನಗಳನ್ನು ಮಾಡುತ್ತಾ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಿಕೊಳ್ಳುತ್ತಾರೆ. ॥ ೨೨ ॥ ಆದಕ್ಕಾಗಿ ಸರ್ವಶ್ರೇಷ್ಠನಾದ ಭಗವಾನ್ ಶ್ರೀಕೃಷ್ಣನದೇ ಅಗ್ರಪೂಜೆಯಾಗಬೇಕು. ಇವನನ್ನು ಪೂಜಿಸುವುದರಿಂದ ಸಮಸ್ತ ಪ್ರಾಣಿಗಳ ಹಾಗೂ ತನ್ನಾತ್ಮದ ಪೂಜೆಯೂ ನಡೆದಂತಾಗುತ್ತದೆ. ॥ ೨೩ ॥ ದಾನಕ್ಕೆ ಅನಂತವಾದ ಫಲವನ್ನು ಅಪೇಕ್ಷಿಸುವವನು ಸಮಸ್ತ ಪ್ರಾಣಿಗಳಿಗೂ ಆತ್ಮಸ್ವರೂಪನಾದ, ಭೇದಭಾವರಹಿತನಾದ, ಪರಮಶಾಂತನಾದ, ಪರಿಪೂರ್ಣನಾದ, ಮಹಾತ್ಮನಾದ ಶ್ರೀಕೃಷ್ಣನಿಗೇ ದಾನಮಾಡಬೇಕು. ॥ ೨೪ ॥ ಪರೀಕ್ಷಿತನೇ! ಭಗವಂತನ ಮಹಿಮೆಯನ್ನೂ, ಅವನ ಪ್ರಭಾವವನ್ನು ಅರಿತಿದ್ದ ಸಹದೇವನು ಹೀಗೆ ಹೇಳಿ ಸುಮ್ಮನಾದನು. ಆ ಸಮಯದಲ್ಲಿ ಧರ್ಮರಾಯನ ಯಜ್ಞಸಭೆಯಲ್ಲಿ ಉಪಸ್ಥಿತರಾಗಿದ್ದ ಸತ್ಪುರುಷರೆಲ್ಲರೂ ಏಕಕಂಠದಿಂದ ಸಾಧು! ಸಾಧು! ಬಹಳ ಚೆನ್ನಾಗಿದೆ ಎಂದು ಹೇಳಿ ಸಹದೇವನ ಮಾತನ್ನು ಸಮರ್ಥಿಸಿದರು. ॥ ೨೫ ॥ ಯುಧಿಷ್ಠಿರನು ಬ್ರಾಹ್ಮಣರ ಈ ಸಾಧುವಾದವನ್ನು ಕೇಳಿ, ಸಭ್ಯರ ಅಭಿಪ್ರಾಯವನ್ನು ತಿಳಿದವನಾಗಿ ಆನಂದದಿಂದಲೂ, ಪ್ರೇಮೋದ್ರೇಕದಿಂದಲೂ ವಿಹ್ವಲನಾಗಿ ಭಗವಾನ್ ಶ್ರೀಕೃಷ್ಣನ ಅಗ್ರಪೂಜೆಯನ್ನು ಮಾಡಿದನು. ॥ ೨೬ ॥ ಯುಧಿಷ್ಠಿರನು ತನ್ನ ಪತ್ನಿಯರು, ತಮ್ಮಂದಿರು, ಮಂತ್ರಿಗಳು ಮತ್ತು ಕುಟುಂಬ ವರ್ಗದವರೊಡನೆ ಅತ್ಯಂತ ಪ್ರೇಮದಿಂದಲೂ, ಆನಂದದಿಂದಲೂ ಭಗವಂತನ ಚರಣಾರವಿಂದಗಳನ್ನು ತೊಳೆದು ಲೋಕಪಾವನವಾದ ಚರಣತೀರ್ಥವನ್ನು ತಲೆಯಲ್ಲಿ ಧರಿಸಿಕೊಂಡನು. ॥ ೨೭ ॥ ಆಗ ಅವನು ಭಗವಂತನಿಗೆ ರೇಷ್ಮೆಯ ಪೀತಾಂಬರವನ್ನು, ಬಹುಮೂಲ್ಯವಾದ ಆಭರಣಗಳನ್ನು ಸಮರ್ಪಿಸಿದನು. ಆ ಸಮಯದಲ್ಲಿ ಅವನ ಕಣ್ಣುಗಳು ಪ್ರೇಮಾನಂದದ ಅಶ್ರುಗಳಿಂದ ತುಂಬಿಹೋಗಿ ಭಗವಂತನನ್ನು ಸರಿಯಾಗಿ ನೋಡಲು ಸಾಧ್ಯವಾಗಲಿಲ್ಲ. ॥ ೨೮ ॥ ಹೀಗೆ ಅಗ್ರಪೂಜೆಯಿಂದ ಸಮ್ಮಾನಿತನಾದ ಶ್ರೀಕೃಷ್ಣನನ್ನು ನೋಡಿ ಆ ಸಭೆಯಲ್ಲಿ ಕುಳಿತಿದ್ದವರೆಲ್ಲರೂ ಕೈಜೋಡಿಸಿಕೊಂಡು ಶ್ರೀಕೃಷ್ಣಾಯ ನಮೋ ನಮಃ, ಶ್ರೀಕೃಷ್ಣನಿಗೆ ಜಯವಾಗಲಿ ಎಂದು ಹೇಳಿಕೊಂಡು ನಮಸ್ಕರಿಸತೊಡಗಿದರು. ಆಗ ಆಕಾಶದಿಂದ ತಾನಾಗಿಯೇ ಪುಷ್ಪವೃಷ್ಟಿಯಾಗತೊಡಗಿತು. ॥ ೨೯ ॥

ಪರೀಕ್ಷಿತನೇ! ತನ್ನ ಆಸನದಲ್ಲಿ ಕುಳಿತಿದ್ದ ಶಿಶುಪಾಲನು ಇದೆಲ್ಲವನ್ನು ನೋಡಿ-ಕೇಳುತ್ತಿದ್ದನು. ಭಗವಾನ್ ಶ್ರೀಕೃಷ್ಣನ ಗುಣಗಾನವನ್ನು ಕೇಳಿ ಕ್ರೋಧಗೊಂಡು ಎದ್ದುನಿಂತು, ತುಂಬಿದ ಸಭೆಯಲ್ಲಿ ಕೈಯನ್ನು ಮೇಲಕ್ಕೆತ್ತಿ ಅಸಹಿಷ್ಣುತೆಯಿಂದ, ನಿರ್ಭಯನಾಗಿ ಭಗವಂತನಿಗೆ ಕೇಳಿಸುವಂತೆ ಅತ್ಯಂತ ಕಠೋರವಾದ ಮಾತುಗಳನ್ನಾಡತೊಡಗಿದನು. ॥ ೩೦ ॥

ಈಶೋ ದುರತ್ಯಯಃ ಕಾಲ ಇತಿ ಸತ್ಯವತೀ ಶ್ರುತಿಃ ।
ವೃದ್ಧಾನಾಮಪಿ ಯದ್ಬುದ್ಧಿರ್ಬಾಲವಾಕ್ಯೈರ್ವಿಭಿದ್ಯತೇ ॥ ೩೧ ॥

ಯೂಯಂ ಪಾತ್ರವಿದಾಂ ಶ್ರೇಷ್ಠಾ ಮಾ ಮನ್ದ್ವಂ ಬಾಲಭಾಷಿತಮ್ ।
ಸದಸಸ್ಪತಯಃ ಸರ್ವೇ ಕೃಷ್ಣೋ ಯತ್ಸಮ್ಮತೋಽರ್ಹಣೇ ॥ ೩೨ ॥

ತಪೋವಿದ್ಯಾವ್ರತಧರಾನ್ ಜ್ಞಾನವಿಧ್ವಸ್ತಕಲ್ಮಷಾನ್ ।
ಪರಮರ್ಷೀನ್ ಬ್ರಹ್ಮನಿಷ್ಠಾನ್ಲೋಕಪಾಲೈಶ್ಚ ಪೂಜಿತಾನ್ ॥ ೩೩ ॥

ಸದಸ್ಪತೀನತಿಕ್ರಮ್ಯ ಗೋಪಾಲಃ ಕುಲಪಾಂಸನಃ ।
ಯಥಾ ಕಾಕಃ ಪುರೋಡಾಶಂ ಸಪರ್ಯಾಂ ಕಥಮರ್ಹತಿ ॥ ೩೪ ॥

ವರ್ಣಾಶ್ರಮಕುಲಾಪೇತಃ ಸರ್ವಧರ್ಮಬಹಿಷ್ಕೃತಃ ।
ಸ್ವೈರವರ್ತೀ ಗುಣೈರ್ಹೀನಃ ಸಪರ್ಯಾಂ ಕಥಮರ್ಹತಿ ॥ ೩೫ ॥

ಯಯಾತಿನೈಷಾಂ ಹಿ ಕುಲಂ ಶಪ್ತಂ ಸದ್ಭಿರ್ಬಹಿಷ್ಕೃತಮ್ ।
ವೃಥಾ ಪಾನರತಂ ಶಶ್ವತ್ಸಪರ್ಯಾಂ ಕಥಮರ್ಹತಿ ॥ ೩೬ ॥

ಬ್ರಹ್ಮರ್ಷಿಸೇವಿತಾನ್ ದೇಶಾನ್ ಹಿತ್ವೈತೇಽಬ್ರಹ್ಮವರ್ಚಸಮ್ ।
ಸಮುದ್ರಂ ದುರ್ಗಮಾಶ್ರಿತ್ಯ ಬಾಧಂತೇ ದಸ್ಯವಃ ಪ್ರಜಾಃ ॥ ೩೭ ॥

ಏವಮಾದೀನ್ಯಭದ್ರಾಣಿ ಬಭಾಷೇ ನಷ್ಟಮಂಗಲಃ ।
ನೋವಾಚ ಕಿಂಚಿದ್ಭಗವಾನ್ ಯಥಾ ಸಿಂಹಃ ಶಿವಾರುತಮ್ ॥ ೩೮ ॥

ಭಗವನ್ನಿಂದನಂ ಶ್ರುತ್ವಾ ದುಃಸಹಂ ತತ್ಸಭಾಸದಃ ।
ಕರ್ಣೌ ಪಿಧಾಯ ನಿರ್ಜಗ್ಮುಃ ಶಪಂತಶ್ಚೇದಿಪಂ ರುಷಾ ॥ ೩೯ ॥

ಸಭ್ಯರೇ! 'ಕಾಲನೇ ಈಶ್ವರನಾಗಿದ್ದಾನೆ' ಎಂದು ಹೇಳಿದ ಶ್ರುತಿಯ ಮಾತು ಅಕ್ಷರಶಃ ಸತ್ಯವಾಗಿದೆ. ಲಕ್ಷ-ಲಕ್ಷ ಪ್ರಯತ್ನ ಮಾಡಿದರೂ ಅದು ತನ್ನ ಕೆಲಸವನ್ನು ಮಾಡಿಯೇ ತೀರುತ್ತದೆ. ಇಲ್ಲಿ ಮಕ್ಕಳ ಮತ್ತು ಮೂರ್ಖರ ಮಾತುಗಳಿಂದ ದೊಡ್ಡ-ದೊಡ್ಡ ವಯೋವೃದ್ಧರ, ಜ್ಞಾನವೃದ್ಧರ ಬುದ್ಧಿಯೂ ಪಲ್ಲಟವಾಗುವುದು. ಇದರ ಪ್ರತ್ಯಕ್ಷಪ್ರಮಾಣವಾಗಿದೆ. ॥ ೩೧ ॥ ನೀವೆಲ್ಲರೂ ಅಗ್ರ ಪೂಜೆಗೆ ಅರ್ಹರಾರೆಂಬುದನ್ನು ನಿರ್ಣಯಿಸುವುದರಲ್ಲಿ ಸಮರ್ಥರಾಗಿರುವಿರಿ ಎಂದು ನಾನು ತಿಳಿದಿದ್ದೇನೆ. ಅದಕ್ಕಾಗಿ ಸದಸಸ್ಪತಿಗಳೇ! ಬಾಲಕನಾದ ಸಹದೇವನು ಹೇಳಿದ – 'ಶ್ರೀಕೃಷ್ಣನೇ ಅಗ್ರಪೂಜೆಗೆ ಅರ್ಹನಾಗಿದ್ದಾನೆ' ಎಂಬ ಮಾತನ್ನು ನೀವು ಅನು ಮೋದಿಸಬೇಡಿರಿ. ॥ ೩೨ ॥ ಇಲ್ಲಿ ದೊಡ್ಡ-ದೊಡ್ಡ ತಪಸ್ವಿಗಳು, ವಿದ್ವಾಂಸರು, ವ್ರತನಿಷ್ಠರು, ಜ್ಞಾನದ ಮೂಲಕ ತಮ್ಮ ಸಮಸ್ತ ಪಾಪ-ತಾಪಗಳನ್ನು ಶಾಂತಗೊಳಿಸಿದವರು, ಪರಮಜ್ಞಾನಿ ಪರಮ ಮರ್ಷಿಗಳಾದ ಬ್ರಹ್ಮನಿಷ್ಠರು ಮುಂತಾದವರು ಉಪಸ್ಥಿತರಾಗಿ ಇದ್ದಾರೆ. ಇಂತಹವರನ್ನು ದೊಡ್ಡ-ದೊಡ್ಡ ಲೋಕಪಾಲರೂ ಪೂಜಿಸುತ್ತಿರುವರು. ॥ ೩೩ ॥ ಯಜ್ಞದ ನ್ಯೂನಾತಿರೇಕವನ್ನು ಹೇಳುವಂತಹ ಆ ಸದಸತ್ಪತಿಗಳನ್ನು ಬಿಟ್ಟು ಈ ಕುಲಕಲಂಕನಾದ ಗೊಲ್ಲನು ಹೇಗೆ ತಾನೆ ಅಗ್ರಪೂಜೆಗೆ ಅಧಿಕಾರಿಯಾಗಬಲ್ಲನು? ಎಂದಾದರೂ ಕಾಗೆಯು ಯಜ್ಞದ ಪುರೋಡಾಶಕ್ಕೆ ಅಧಿಕಾರಿ ಯಾಗಬಲ್ಲುದೇ? ॥ ೩೪ ॥ ಇವನಿಗೆ ಯಾವುದೇ ವರ್ಣ ವಾಗಲೀ, ಆಶ್ರಮವಾಗಲೀ ಇಲ್ಲ. ಕುಲವೂ ಉನ್ನತವಾಗಿಲ್ಲ. ಎಲ್ಲ ಧರ್ಮಗಳಿಂದಲೂ ಹೊರಗಾಗಿರುವನು. ವೇದ ಮತ್ತು ಲೋಕ ಮರ್ಯಾದೆಗಳನ್ನು ಉಲ್ಲಂಘಿಸಿ ಮನಬಂದಂತೆ ವರ್ತಿಸುತ್ತಾನೆ. ಇವನಲ್ಲಿ ಯಾವುದೇ ಗುಣಗಳಿಲ್ಲ. ಇಂತಹ ಸ್ಥಿತಿಯಲ್ಲಿ ಇವನು ಅಗ್ರಪೂಜೆಗೆ ಹೇಗೆ ಅರ್ಹನಾಗಬಲ್ಲನು? ॥ ೩೫ ॥ ಯಯಾತಿ ರಾಜನು ಇವನ ವಂಶಕ್ಕೆ ಶಪಿಸಿದುದು ನೀವೆಲ್ಲರೂ ತಿಳಿದಿರುವಿರಿ. ಆದಕ್ಕಾಗಿ ಸತ್ಪುರುಷರು ಈ ವಂಶವನ್ನು ಬಹಿಷ್ಕರಿಸಿರುವರು. ಇವರೆಲ್ಲರೂ ಸದಾಕಾಲ ಮಧುಪಾನದಲ್ಲೇ ಆಸಕ್ತರಾಗಿರುತ್ತಾರೆ. ಹೀಗಿರುವಾಗ ಇವನು ಅಗ್ರಪೂಜೆಗೆ ಹೇಗೆ ಯೋಗ್ಯನಾಗ ಬಲ್ಲನು? ॥ ೩೬ ॥ ಇವರೆಲ್ಲರೂ ಬ್ರಹ್ಮರ್ಷಿಗಳಿಂದ ಸೇವಿತವಾದ ಮಥುರೆಯನ್ನು ತ್ಯಜಿಸಿ, ಬ್ರಹ್ಮವರ್ಚಸ್ಸಿನ ವಿರೋಧಿಯಾದ (ವೇದ ಚರ್ಚಾರಹಿತ) ಸಮುದ್ರದಲ್ಲಿ ದುರ್ಗವನ್ನು ರಚಿಸಿಕೊಂಡು ಇರುತ್ತಾರೆ. ಅಲ್ಲಿಂದ ಇವರು ಹೊರಗೆ ಬಂದಾಗ ಕಳ್ಳರಂತೆ ಪ್ರಜೆಗಳೆಲ್ಲರನ್ನೂ ತೊಂದರೆಪಡಿಸುತ್ತಾರೆ. ॥ ೩೭ ॥ ಪರೀಕ್ಷಿತನೇ! ನಿರ್ಭಾಗ್ಯನಾದ ಶಿಶುಪಾಲನು ಹೀಗೆ ಅನೇಕ ಕರ್ಣಕಠೋರವಾದ ಮತ್ತು ಅಶುಭವಾದ ಮಾತುಗಳಿಂದ ಶ್ರೀಕೃಷ್ಣನನ್ನು ನಿಂದೆ ಮಾಡುತ್ತಿರಲು – ಸಿಂಹವು ನರಿಯ ಕೂಗನ್ನು ಅಲಕ್ಷಿಸುವಂತೆ ಭಗವಾನ್ ಶ್ರೀಕೃಷ್ಣನು ಅವನೊಡನೆ ಏನನ್ನು ಮಾತನಾಡ ಲಿಲ್ಲ. ॥ ೩೮ ॥ ಆದರೆ ಸಭಾಸರಿಗೆ ಭಗವಂತನ ನಿಂದೆಯನ್ನು ಕೇಳುವುದು ಅಸಹ್ಯವುಂಟಾಗಿ ತಮ್ಮ-ತಮ್ಮ ಕಿವಿಗಳನ್ನು ಮುಚ್ಚಿ ಕೊಂಡು ಸಿಟ್ಟಿನಿಂದ ಶಿಶುಪಾಲನನ್ನು ನಿಂದಿಸುತ್ತಾ ಸಭಾಭವನ ದಿಂದ ಹೊರಟುಹೋದರು. ॥ ೩೯ ॥

ನಿಂದಾಂ ಭಗವತಃ ಶೃಣ್ವಂಸ್ತತ್ಪರಸ್ಯ ಜನಸ್ಯ ವಾ ।
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥ ೪೦ ॥

ತತಃ ಪಾಂಡುಸುತಾಃ ಕ್ರುದ್ಧಾ ಮತ್ಸ್ಯಕೈಕಯಸೃಂಜಯಾಃ ।
ಉದಾಯುಧಾಃ ಸಮುತ್ತಸ್ಥುಃ ಶಿಶುಪಾಲಜಿಘಾಂಸವಃ ॥ ೪೧ ॥

ತತಶ್ಚೈದ್ಯಸ್ತ್ವಸಂಭ್ರಾಂತೋ ಜಗೃಹೇ ಖಡ್ಗ ಚರ್ಮಣೀ ।
ಭರ್ತ್ಸಯನ್ ಕೃಷ್ಣಪಕ್ಷೀಯಾನ್ರಾಜ್ಞಃ ಸದಸಿ ಭಾರತ ॥ ೪೨ ॥

ತಾವದುತ್ಥಾಯ ಭಗವಾನ್ ಸ್ವಾನ್ನಿವಾರ್ಯ ಸ್ವಯಂ ರುಷಾ ।
ಶಿರಃ ಕ್ಷುರಾಂತಚಕ್ರೇಣ ಜಹಾರಾಪತತೋ ರಿಪೋಃ ॥ ೪೩ ॥

ಶಬ್ದಃ ಕೋಲಾಹಲೋಽಪ್ಯಾಸೀತ್ ಶಿಶುಪಾಲೇ ಹತೇ ಮಹಾನ್ ।
ತಸ್ಯಾನುಯಾಯಿನೋ ಭೂಪಾ ದುದ್ರುವುರ್ಜೀವಿತೈಷಿಣಃ ॥ ೪೪ ॥

ಚೈದ್ಯದೇಹೋತ್ಥಿತಂ ಜ್ಯೋತಿರ್ವಾಸುದೇವಮುಪಾವಿಶತ್ ।
ಪಶ್ಯತಾಂ ಸರ್ವಭೂತಾನಾಮುಲ್ಕೇವ ಭುವಿ ಖಾಚ್ಚ್ಯುತಾ ॥ ೪೫ ॥

ಜನ್ಮತ್ರಯಾನುಗುಣಿತವೈರಸಂರಬ್ಧಯಾ ಧಿಯಾ ।
ಧ್ಯಾಯಂಸ್ತನ್ಮಯತಾಂ ಯಾತೋ ಭಾವೋ ಹಿ ಭವಕಾರಣಮ್ ॥ ೪೬ ॥

ಋತ್ವಿಗ್ಭ್ಯಃ ಸಸದಸ್ಯೇಭ್ಯೋ ದಕ್ಷಿಣಾಂ ವಿಪುಲಾಮದಾತ್ ।
ಸರ್ವಾನ್ ಸಂಪೂಜ್ಯ ವಿಧಿವಚ್ಚಕ್ರೇಽವಭೃಥಮೇಕರಾಟ್ ॥ ೪೭ ॥

ಸಾಧಯಿತ್ವಾ ಕ್ರತುಂ ರಾಜ್ಞಃ ಕೃಷ್ಣೋ ಯೋಗೇಶ್ವರೇಶ್ವರಃ ।
ಉವಾಸ ಕತಿಚಿನ್ಮಾಸಾನ್ಸುಹೃದ್ಭಿರಭಿಯಾಚಿತಃ ॥ ೪೮ ॥

ತತೋಽನುಜ್ಞಾಪ್ಯ ರಾಜಾನಮನಿಚ್ಛಂತಮಪೀಶ್ವರಃ ।
ಯಯೌ ಸಭಾರ್ಯಃ ಸಾಮಾತ್ಯಃ ಸ್ವಪುರಂ ದೇವಕೀಸುತಃ ॥ ೪೯ ॥

ವರ್ಣಿತಂ ತದುಪಾಖ್ಯಾನಂ ಮಯಾ ತೇ ಬಹುವಿಸ್ತರಮ್ ।
ವೈಕುಂಠವಾಸಿನೋರ್ಜನ್ಮ ವಿಪ್ರಶಾಪಾತ್ ಪುನಃ ಪುನಃ ॥ ೫೦ ॥

ಪರೀಕ್ಷಿದ್ರಾಜನೇ! ಭಗವಂತನ ಅಥವಾ ಅವನ ಭಕ್ತರ ನಿಂದೆಯನ್ನು ಕೇಳಿ ಅಲ್ಲಿಂದ ಹೊರಟುಹೋಗದವನು ತನ್ನ ಶುಭಕರ್ಮಗಳಿಂದ ಚ್ಯುತನಾಗಿ, ಅವನ ಅಧೋಗತಿಯಾಗುತ್ತದೆ. ॥ ೪೦ ॥ ಪರೀಕ್ಷಿತನೇ! ಶಿಶುಪಾಲನ ಶ್ರೀಕೃಷ್ಣನಿಂದಾವಾಕ್ಯಗಳಿಂದ ಅತಿ ಕ್ರುದ್ಧರಾದ ಪಾಂಡವ, ಮತ್ಸ್ಯ, ಕೇಕಯ ಮತ್ತು ಸೃಂಜಯ ನರಪತಿಗಳು ಶಿಶುಪಾಲನನ್ನು ಕೊಂದುಹಾಕಲೆಂದು ಆಯುಧಗಳನ್ನು ಧರಿಸಿ ಎದ್ದುನಿಂತರು. ॥ ೪೧ ॥ ಆದರೆ ಇದರಿಂದ ಶಿಶುಪಾಲನು ಗಾಬರಿಗೊಳ್ಳಲಿಲ್ಲ. ಅವನು ಹಿಂದೆ-ಮುಂದೆ ಯೋಚಿಸದೆ ತನ್ನ ಕತ್ತಿ ಗುರಾಣಿಗಳನ್ನು ಎತ್ತಿಕೊಂಡು ತುಂಬಿದ ಆ ಸಭೆಯಲ್ಲಿ ಶ್ರೀಕೃಷ್ಣನ ಪಕ್ಷಪಾತಿಗಳಾದ ರಾಜರೆದುರಿಗೆ ಯುದ್ಧಕ್ಕೆ ಸಿದ್ಧನಾದನು. ॥ ೪೨ ॥ ಅಷ್ಟರಲ್ಲಿ ಭಗವಾನ್ ಶ್ರೀಕೃಷ್ಣನು ಆಸನದಿಂದ ಮೇಲೆದ್ದು ತನ್ನ ಕಡೆಯವರೆಲ್ಲರನ್ನು ಹಿಂದಕ್ಕೆ ಸರಿಸಿ, ಪರಮ ಕ್ರುದ್ಧನಾಗಿ ಕತ್ತಿಯಂತೆ ಹರಿತವಾದ ಅಲಗಿನಿಂದ ಕೂಡಿದ್ದ ಚಕ್ರದ ಧಾರೆಯಿಂದ ತನ್ನ ಕಡೆಗೆ ನುಗ್ಗಿಬರುತ್ತಿದ್ದ ಶಿಶುಪಾಲನ ಶಿರಸ್ಸನ್ನು ಕತ್ತರಿಸಿ ಬಿಟ್ಟನು. ॥ ೪೩ ॥ ಶಿಶುಪಾಲನ ಸಂಹಾರವಾದೊಡನೆ ಆ ಸಭೆಯಲ್ಲಿ ದೊಡ್ಡ ಕೋಲಾಹಲವುಂಟಾಯಿತು. ಶಿಶುಪಾಲನ ಅನುಯಾಯಿಗಳಾದ ರಾಜರು ಜೀವಿಸಿರಬೇಕೆಂಬ ಆಸೆಯಿಂದ ಅಲ್ಲಿಂದ ಪಲಾಯನ ಮಾಡಿದರು. ॥ ೪೪ ॥ ಉಲ್ಕೆಯು ಅಂತರಿಕ್ಷದಿಂದ ಭೂಮಿಗೆ ಬೀಳುವಂತೆ ಸಮಸ್ತರು ನೋಡುತ್ತಿರುವಂತೆ ಶಿಶುಪಾಲನ ಶರೀರದಿಂದ ಹೊರಟ ಅವನ ಜೀವಜ್ಯೋತಿಯು ಭಗವಾನ್ ಶ್ರೀಕೃಷ್ಣನಲ್ಲಿ ಸೇರಿಹೋಯಿತು. ॥ ೪೫ ॥ ಪರೀಕ್ಷಿತನೇ! ಶಿಶಿಪಾಲನ ಅಂತಃಕರಣದಲ್ಲಿ ಮೂರು ಜನ್ಮಗಳಿಂದಲೂ ಒಂದೇ ಸಮನೆ ವೈರಭಾವವು ಬೆಳೆಯುತ್ತಲೇ ಇತ್ತು. ಹೀಗೆ ವೈರಭಾವದಿಂದಲೇ ಆಗಲಿ ಅವನು ಶ್ರೀಕೃಷ್ಣನನ್ನು ಸದಾ ಧ್ಯಾನಿಸುತ್ತಲೇ ಇದ್ದನು. ಈ ಕಾರಣದಿಂದಲೇ ಅವನು ವಿಷ್ಣುವಿನ ಪಾರ್ಷದರಲ್ಲಿ ಸೇರಿ ಹೋದನು. ಮರಣಾನಂತರ ದೊರೆಯುವ ಗತಿಗೆ ಭಾವವೇ ಕಾರಣವಾಗುತ್ತದೆ. ॥ ೪೬ ॥ ಶಿಶುಪಾಲನಿಗೆ ಸದ್ಗತಿಯುಂಟಾದ ಬಳಿಕ ಚಕ್ರವರ್ತಿ ಧರ್ಮರಾಜ ಯುಧಿಷ್ಠಿರನು ಆಚಾರ್ಯರಿಗೂ ಮತ್ತು ಋತ್ವಿಜರಿಗೂ ಹೇರಳವಾದ ದಕ್ಷಿಣೆಯನ್ನು ಕೊಟ್ಟು ಸತ್ಕರಿಸಿ ವಿಧಿಪೂರ್ವಕವಾಗಿ ಯಜ್ಞಾಂತ್ಯದ ಅವಭೃತಸ್ನಾನ ಮಾಡಿದನು. ॥ ೪೭ ॥

ಪರೀಕ್ಷಿತನೇ! ಈ ಪ್ರಕಾರವಾಗಿ ಯೋಗೇಶ್ವರ ಭಗವಾನ್ ಶ್ರೀಕೃಷ್ಣನು ಯುಧಿಷ್ಠಿರನ ರಾಜಸೂಯ ಯಜ್ಞವನ್ನು ಪೂರ್ಣಗೊಳಿಸಿಕೊಟ್ಟು ತನ್ನ ನೆಂಟರಿಷ್ಟರ ಮತ್ತು ಸುಹೃದರ ಆಗ್ರಹದಿಂದ ಕೆಲವು ತಿಂಗಳುಗಳವರೆಗೆ ಅಲ್ಲೇ ಇದ್ದನು. ॥ ೪೮ ॥ ಅನಂತರ ಯುಧಿಷ್ಠಿರನಿಗೆ ಕಳಿಸಿಕೊಡಲು ಇಷ್ಟವಿಲ್ಲದಿದ್ದರೂ ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನು ಅವನಿಂದ ಬೀಳ್ಕೊಂಡು ತನ್ನ ರಾಣಿಯರೊಂದಿಗೆ, ಮಂತ್ರಿಗಳೊಡನೆ ಇಂದ್ರಪ್ರಸ್ಥದಿಂದ ದ್ವಾರಕೆಗೆ ಪ್ರಯಾಣ ಬೆಳೆಸಿದನು. ॥ ೪೯ ॥ ಪರೀಕ್ಷಿತನೇ! ವೈಕುಂಠವಾಸಿಗಳಾದ ಜಯ-ವಿಜಯರು ಸನಕಾದಿಗಳ ಶಾಪದಿಂದ ಪುನಃ ಪುನಃ ಹುಟ್ಟಬೇಕಾಗಿ ಬಂದ ಉಪಾಖ್ಯಾನವನ್ನು ನಾನು ಹಿಂದೆ (ಸಪ್ತಮಸ್ಕಂಧದಲ್ಲಿ) ನಿನಗೆ ವಿಸ್ತಾರವಾಗಿ ಹೇಳಿಬಿಟ್ಟಿದ್ದೇನೆ.॥ ೫೦ ॥

ರಾಜಸೂಯಾವಭೃಥ್ಯೇನ ಸ್ನಾತೋ ರಾಜಾ ಯುಧಿಷ್ಠಿರಃ ।
ಬ್ರಹ್ಮಕ್ಷತ್ರಸಭಾಮಧ್ಯೇ ಶುಶುಭೇ ಸುರರಾಡಿವ ॥ ೫೧ ॥

ರಾಜ್ಞಾ ಸಭಾಜಿತಾಃ ಸರ್ವೇ ಸುರಮಾನವಖೇಚರಾಃ ।
ಕೃಷ್ಣಂ ಕ್ರತುಂ ಚ ಶಂಸಂತಃ ಸ್ವಧಾಮಾನಿ ಯಯುರ್ಮುದಾ ॥ ೫೨ ॥

ದುರ್ಯೋಧನಮೃತೇ ಪಾಪಂ ಕಲಿಂ ಕುರುಕುಲಾಮಯಮ್ ।
ಯೋ ನ ಸೇಹೇ ಶ್ರಿಯಂ ಸ್ಫೀತಾಂ ದೃಷ್ಟ್ವಾ ಪಾಂಡುಸುತಸ್ಯ ತಾಮ್ ॥ ೫೩ ॥

ಯ ಇದಂ ಕೀರ್ತಯೇದ್ವಿಷ್ಣೋಃ ಕರ್ಮ ಚೈದ್ಯವಧಾದಿಕಮ್ ।
ರಾಜಮೋಕ್ಷಂ ವಿತಾನಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೫೪ ॥

ರಾಜಸೂಯ ಯಾಗವನ್ನು ಮಾಡಿ ವಿಧಿವತ್ತಾಗಿ ಅವಭೃತ ಸ್ನಾನ ಮಾಡಿದ ಯುಧಿಷ್ಠಿರನು ಬ್ರಾಹ್ಮಣ ಮತ್ತು ಕ್ಷತ್ರಿಯರ ಸಭೆಯಲ್ಲಿ ದೇವೇಂದ್ರನಂತೆ ಪ್ರಕಾಶಿಸಿದನು. ॥ ೫೧ ॥ ಯುಧಿಷ್ಠಿರನು ದೇವತೆಗಳನ್ನು, ಮನುಷ್ಯರನ್ನು, ಆಕಾಶಚಾರಿಗಳನ್ನು ಯಥಾಯೋಗ್ಯವಾಗಿ ಸತ್ಕರಿಸಿದನು. ಅವರೆಲ್ಲರೂ ರಾಜಸೂಯ ಯಜ್ಞವನ್ನು ಮತ್ತು ಭಗವಾನ್ ಶ್ರೀಕೃಷ್ಣನನ್ನು ಪ್ರಶಂಸಿಸುತ್ತಾ ಬಹಳ ಆನಂದದಿಂದ ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ॥ ೫೨ ॥ ಪರೀಕ್ಷಿತನೇ! ಎಲ್ಲರೂ ಸಂತೋಷಗೊಂಡರು ಆದರೆ ದುರ್ಯೋಧನನಿಗೆ ಪಾಂಡವರ ಈ ಉಜ್ವಲ ರಾಜ್ಯಲಕ್ಷ್ಮಿಯ ಉತ್ಕರ್ಷವುಸಹಿಸ ದಾಯಿತು. ಏಕೆಂದರೆ, ಅವನು ಸ್ವಭಾವದಿಂದಲೇ ಪಾಪಿಯೂ, ಕಲಹಪ್ರಿಯನೂ ಮತ್ತು ಕುರುಕುಲವನ್ನು ನಾಶಗೊಳಿಸುವಂತಹ ಒಂದು ರೋಗವೇ ಆಗಿದ್ದನು. ॥ ೫೩ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ-ಶಿಶುಪಾಲ ವಧೆ, ಜರಾಸಂಧ ವಧೆ, ಸೆರೆಯಾಳಾದ ರಾಜರ ಬಿಡುಗಡೆ, ಯಜ್ಞಾನುಷ್ಠಾನ ಮೊದಲಾದ ಈ ಲೀಲೆಗಳನ್ನು ಕೀರ್ತನೆ ಮಾಡುವವನು ಸಮಸ್ತ ಪಾಪಗಳಿಂದ ಮುಕ್ತನಾಗಿ ಹೋಗುವನು. ॥ ೫೪ ॥

ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೭೪ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಶಿಶುಪಾಲವಧೋ ನಾಮ ಚತುಃಸಪ್ತತಿತಮೋಽಧ್ಯಾಯಃ ॥ ೭೪ ॥

# ಎಪ್ಪತ್ತೈದನೆಯ ಅಧ್ಯಾಯ

## ರಾಜಸೂಯ ಯಜ್ಞದ ಪರಿಸಮಾಪ್ತಿ - ದುರ್ಯೋಧನನಿಗಾದ ಅವಮಾನ

ರಾಜೋವಾಚ

ಅಜಾತಶತ್ರೋಸ್ತಂ ದೃಷ್ಟ್ವಾ ರಾಜಸೂಯಮಹೋದಯಮ್ ।
ಸರ್ವೇ ಮುಮುದಿರೇ ಬ್ರಹ್ಮನ್ನೃದೇವಾ ಯೇ ಸಮಾಗತಾಃ ॥ ೧ ॥

ದುರ್ಯೋಧನಂ ವರ್ಜಯಿತ್ವಾ ರಾಜಾನಃ ಸರ್ಷಯಃ ಸುರಾಃ ।
ಇತಿ ಶ್ರುತಂ ನೋ ಭಗವಂಸ್ತತ್ರ ಕಾರಣಮುಚ್ಯತಾಮ್ ॥ ೨ ॥

ಋಷಿರುವಾಚ

ಪಿತಾಮಹಸ್ಯ ತೇ ಯಜ್ಞೇ ರಾಜಸೂಯೇ ಮಹಾತ್ಮನಃ ।
ಬಾಂಧವಾಃ ಪರಿಚರ್ಯಾಯಾಂ ತಸ್ಯಾಸನ್ ಪ್ರೇಮಬಂಧನಾಃ ॥ ೩ ॥

ಭೀಮೋ ಮಹಾನಸಾಧ್ಯಕ್ಷೋ ಧನಾಧ್ಯಕ್ಷಃ ಸುಯೋಧನಃ ।
ಸಹದೇವಸ್ತು ಪೂಜಾಯಾಂ ನಕುಲೋ ದ್ರವ್ಯಸಾಧನೇ ॥ ೪ ॥

ಗುರುಶುಶ್ರೂಷಣೇ ಜಿಷ್ಣುಃ ಕೃಷ್ಣಃ ಪಾದಾವನೇಜನೇ ।
ಪರಿವೇಷಣೇ ದ್ರುಪದಜಾ ಕರ್ಣೋ ದಾನೇ ಮಹಾಮನಾಃ ॥ ೫ ॥

**ಪರೀಕ್ಷಿದ್ರಾಜನು ಕೇಳಿದನು** - ಪೂಜ್ಯರೇ! ಅಜಾತಶತ್ರುವಾದ ಯುಧಿಷ್ಠಿರನ ರಾಜಸೂಯ ಯಜ್ಞವನ್ನು ನೋಡಲು ಬಂದಿರುವ ಮನುಷ್ಯರೂ, ರಾಜರೂ, ಋಷಿ-ಮುನಿಗಳೂ, ದೇವತೆಗಳೂ ಮುಂತಾದವರೆಲ್ಲರೂ ಆನಂದಿತರಾದರು. ಆದರೆ ದುರ್ಯೋಧನನಿಗೆ ಮಾತ್ರ ಸಂತೋಷವಾಗಲಿಲ್ಲ, ದುಃಖವಾಯಿತು ಎಂದು ನೀವು ಹೇಳಿದಿರಿ. ಇದರ ಕಾರಣವನ್ನು ದಯವಿಟ್ಟು ಹೇಳಿರಿ. ॥ ೧-೨ ॥

**ಶ್ರೀಶುಕಮಹಾಮುನಿಗಳು ಹೇಳಿದರು** - ಪರೀಕ್ಷಿತನೇ! ನಿನ್ನ ಪಿತಾಮಹ ಯುಧಿಷ್ಠಿರನು ಮಹಾತ್ಮನಾಗಿದ್ದನು. ಅವನ ಪ್ರೇಮ ಬಂಧನಕ್ಕೆ ಸಿಲುಕಿದ ಎಲ್ಲ ಬಂಧುಬಾಂಧವರು ರಾಜಸೂಯ ಯಜ್ಞದಲ್ಲಿ ಬೇರೆ-ಬೇರೆ ಸೇವಾಕಾರ್ಯಗಳನ್ನು ವಹಿಸಿಕೊಂಡಿದ್ದರು. ॥ ೩ ॥ ಭೀಮಸೇನನು ಪಾಕಶಾಲೆಗೆ ಅಧ್ಯಕ್ಷನಾಗಿದ್ದನು. ದುರ್ಯೋಧನನು ಧನಾಕ್ಷನಾಗಿದ್ದನು. ಸಹದೇವನು ಅಭ್ಯಾಗತರ ಸ್ವಾಗತ-ಸತ್ಕಾರದಲ್ಲಿ ನಿಯುಕ್ತನಾಗಿದ್ದನು. ನಕುಲನು ಸಾಮಗ್ರಿಗಳನ್ನು ಸಂಗ್ರಹಿಸುವ ಕಾರ್ಯವನ್ನು ನೋಡಿಕೊಳ್ಳುತ್ತಿದ್ದನು. ॥ ೪ ॥ ಅರ್ಜುನನು ಗುರುಜನರ ಸೇವಾ-ಶುಶ್ರೂಷೆಗಳ ಹೊಣೆಯನ್ನು ಹೊತ್ತಿದ್ದನು. ಭಗವಾನ್ ಶ್ರೀಕೃಷ್ಣನು ಅತಿಥಿಗಳ ಕಾಲುಗಳನ್ನು ತೊಳೆಯುವ ಕೆಲಸಮಾಡುತ್ತಿದ್ದನು. ದ್ರೌಪದಾದೇವಿಯು ಊಟ ಬಡಿಸುವ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದಳು. ಉದಾರಶಿರೋಮಣಿಯಾದ ಕರ್ಣನು ಮುಕ್ತಹಸ್ತದಿಂದ ದಾನಮಾಡುತ್ತಿದ್ದನು. ॥ ೫ ॥

ಯುಯುಧಾನೋ ವಿಕರ್ಣಶ್ಚ ಹಾರ್ದಿಕ್ಯೋ ವಿದುರಾದಯಃ ।
ಬಾಹ್ಲೀಕಪುತ್ರಾ ಭೂರ್ಯಾದ್ಯಾ ಯೇ ಚ ಸಂತರ್ದನಾದಯಃ
॥ ೬ ॥

ನಿರೂಪಿತಾ ಮಹಾಯಜ್ಞೇ ನಾನಾಕರ್ಮಸು ತೇ ತದಾ ।
ಪ್ರವರ್ತಂತೇ ಸ್ಮ ರಾಜೇಂದ್ರ ರಾಜ್ಞಃ ಪ್ರಿಯಚಿಕೀರ್ಷವಃ
॥ ೭ ॥

ಋತ್ವಿಕ್ಸದಸ್ಯಬಹುವಿತ್ಸು ಸುಹೃತ್ತಮೇಷು
ಸ್ವಿಷ್ಟೇಷು ಸೂನೃತಸಮರ್ಹಣದಕ್ಷಿಣಾಭಿಃ ।
ಚೈದ್ಯೇ ಚ ಸಾತ್ವತಪತೇಶ್ಚರಣಂ ಪ್ರವಿಷ್ಟೇ
ಚಕ್ರುಸ್ತತಸ್ತ್ವವಭೃಥಸ್ನಪನಂ ದ್ಯುನದ್ಯಾಮ್ ॥ ೮ ॥

ಮೃದಂಗಶಂಖಪಣವಧುಂಧುರ್ಯಾನಕಗೋಮುಖಾಃ ।
ವಾದಿತ್ರಾಣಿ ವಿಚಿತ್ರಾಣಿ ನೇದುರಾವಭೃಥೋತ್ಸವೇ
॥ ೯ ॥

ನರ್ತಕ್ಯೋ ನನೃತುರ್ಹೃಷ್ಟಾ ಗಾಯಕಾ ಯೂಥಶೋ ಜಗುಃ ।
ವೀಣಾವೇಣುತಲೋನ್ನಾದಸ್ತೇಷಾಂ ಸ ದಿವಮಸ್ಪೃಶತ್
॥ ೧೦ ॥

ಚಿತ್ರಧ್ವಜಪತಾಕಾಗ್ರೈರಿಭೇಂದ್ರಸ್ಯಂದನಾರ್ವಭಿಃ ।
ಸ್ವಲಂಕೃತೈರ್ಭಟೈರ್ಭೂಪಾ ನಿರ್ಯಯೂ ರುಕ್ಮಮಾಲಿನಃ
॥ ೧೧ ॥

ಯದುಸೃಂಜಯಕಾಂಭೋಜಕುರುಕೇಕಯಕೋಸಲಾಃ ।
ಕಂಪಯಂತೋ ಭುವಂ ಸೈನ್ಯೈರ್ಯಜಮಾನಪುರಸ್ಸರಾಃ
॥ ೧೨ ॥

ಸದಸ್ಯರ್ತ್ವಿಗ್ದ್ವಿಜಶ್ರೇಷ್ಠಾ ಬ್ರಹ್ಮಘೋಷೇಣ ಭೂಯಸಾ ।
ದೇವರ್ಷಿಪಿತೃಗಂಧರ್ವಾಸ್ತುಷ್ಟುವುಃ ಪುಷ್ಪವರ್ಷಿಣಃ
॥ ೧೩ ॥

ಸ್ವಲಂಕೃತಾ ನರಾ ನಾರ್ಯೋ ಗಂಧಸ್ರಗ್ಭೂಷಣಾಂಬರೈಃ ।
ವಿಲಿಂಪಂತ್ಯೋಽಭಿಷಿಂಚಂತ್ಯೋ ವಿಜಹ್ರುರ್ವಿವಿಧೈ ರಸೈಃ
॥ ೧೪ ॥

ತೈಲಗೋರಸಗಂಧೋದಹರಿದ್ರಾಸಾಂದ್ರಕುಂಕುಮೈಃ ।
ಪುಂಭಿರ್ಲಿಪ್ತಾಃ ಪ್ರಲಿಂಪಂತ್ಯೋ ವಿಜಹ್ರುರ್ವಾರಯೋಷಿತಃ
॥ ೧೫ ॥

ಗುಪ್ತಾ ನೃಭಿರ್ನಿರಗಮನ್ನುಪಲಬ್ಧುಮೇತದ್
ದೇವ್ಯೋ ಯಥಾ ದಿವಿ ವಿಮಾನವರೈರ್ನೃದೇವ್ಯಃ ।
ತಾ ಮಾತುಲೇಯಸಖಿಭಿಃ ಪರಿಷಿಚ್ಯಮಾನಾಃ
ಸವ್ರೀಡಹಾಸವಿಕಸದ್ವದನಾ ವಿರೇಜುಃ ॥ ೧೬ ॥

ಪರೀಕ್ಷಿತನೇ! ಹೀಗೆಯೆ ಸಾತ್ಯಕಿ, ವಿಕರ್ಣ, ಹಾರ್ದಿಕ್ಯ, ವಿದುರ, ಭೂರಿಶ್ರವಾ ಮೊದಲಾದ ಬಾಹ್ಲಿಕನ ಮಕ್ಕಳು, ಸಂತರ್ದನರೇ ಮುಂತಾದವರೆಲ್ಲರೂ ರಾಜಸೂಯ ಯಜ್ಞದಲ್ಲಿ ಬೇರೆ-ಬೇರೆ ಕಾರ್ಯದಲ್ಲಿ ನಿಯುಕ್ತರಾದರು. ಎಲ್ಲರ ಆಶಯವೂ ಕೂಡ ಯುಧಿಷ್ಠಿರನಿಗೆ ಪ್ರಿಯ ಮತ್ತು ಹಿತವನ್ನುಂಟುಮಾಡಬೇಕೆಂದೇ ಇತ್ತು. ॥ ೬-೭ ॥

ಪರೀಕ್ಷಿತನೇ! ಹೀಗೆ ಋತ್ವಿಜರು, ಸದಸ್ಯರು, ವಿದ್ವಾಂಸರು, ಇಷ್ಟ-ಮಿತ್ರರು, ಬಂಧು-ಬಾಂಧವರು ಸಮಸ್ತರೂ ಪ್ರಿಯವಚನಗಳಿಂದಲೂ, ಮರ್ಯಾದೆಗಳಿಂದಲೂ, ದಕ್ಷಿಣೆಗಳಿಂದಲೂ ಯಥಾಯೋಗ್ಯವಾಗಿ ಪೂಜಿಸಲ್ಪಟ್ಟು, ಶಿಶುಪಾಲನು ಭಕ್ತವತ್ಸಲನಾದ ಭಗವಂತನ ಚರಣಗಳಲ್ಲಿ ಸೇರಿ ಹೋದನು. ಬಳಿಕ ಧರ್ಮರಾಜನು ದೇವಗಂಗೆಯಲ್ಲಿ ಅವಭೃತಸ್ನಾನಕ್ಕಾಗಿ ಹೊರಟನು.॥ ೮ ॥ ಅವನು ಅವಭೃತಸ್ನಾನ ಮಾಡತೊಡಗಿದಾಗ ಮೃದಂಗ, ಶಂಖ, ಪಣವ, ಆನಕ, ನಗಾರಿ, ಢಕ್ಕೆ ಗೋಮುಖ ಮೊದಲಾದ ಮಂಗಳ ವಾದ್ಯಗಳು ಮೊಳಗಿದವು. ॥ ೯ ॥ ನರ್ತಕಿಯರು ನರ್ತನ ವಾಡಿದರು. ಗಾಯಕರು ಗುಂಪು-ಗುಂಪಾಗಿ ಹಾಡತೊಡಗಿದರು. ವೀಣೆ, ಕೊಳಲು, ತಾಳಗಳು ನುಡಿಸಲ್ಪಟ್ಟವು. ಇವುಗಳ ಶಬ್ದವು ಆಕಾಶದಲ್ಲೆಲ್ಲ ಪ್ರತಿಧ್ವನಿಸಿತು. ॥ ೧೦ ॥ ಸುವರ್ಣದ ಹಾರಗಳಿಂದ ಸಮಲಂಕೃತರಾದ ಯದು, ಸೃಂಜಯ, ಕಾಂಬೋಜ, ಕುರು, ಕೇಕಯ ಮತ್ತು ಕೋಸಲ ದೇಶಗಳ ರಾಜರು ಬಣ್ಣ-ಬಣ್ಣದ ಧ್ವಜಪತಾಕೆಗಳಿಂದ ಅಲಂಕೃತವಾಗಿದ್ದ ಮಹಾಗಜಗಳ ಮೇಲೂ, ಕುದುರೆಗಳ ಮೇಲೂ, ರಥಗಳಲ್ಲಿಯೂ ಕುಳಿತು ಪದಾತಿ ಸೈನಿಕರೊಡನೆ ಭೂಮಿಯನ್ನೇ ನಡುಗಿಸುತ್ತಾ ಯುಧಿಷ್ಠಿರ ಮಹಾರಾಜನನ್ನು ಮುಂದುಮಾಡಿಕೊಂಡು ಅವಭೃತಕ್ಕೆ ಹೋಗುತ್ತಿದ್ದರು. ॥ ೧೧-೧೨ ॥ ಯಜ್ಞದ ಸದಸ್ಯರು, ಋತ್ವಿಜರು, ಬಹಳಷ್ಟು ಮಂದಿ ಬ್ರಾಹ್ಮಣಶ್ರೇಷ್ಠರು ಉಚ್ಚ ಸ್ವರದಲ್ಲಿ ಮಂತ್ರಗಳನ್ನು ಪಠಿಸತೊಡಗಿದರು. ದೇವತೆಗಳು, ಋಷಿಗಳು, ಪಿತೃಗಳು, ಗಂಧರ್ವರು ಆಕಾಶದಿಂದ ಹೂಮಳೆಗರೆಯುತ್ತಾ ಯುಧಿಷ್ಠಿರನನ್ನು ಹೊಗಳುತ್ತಿದ್ದರು. ॥ ೧೩ ॥ ಗಂಧಮಾಲ್ಯಾಭರಣ ವಸ್ತ್ರಗಳಿಂದ ಸಮಲಂಕೃತರಾಗಿದ್ದ ಇಂದ್ರಪ್ರಸ್ಥದ ನರ-ನಾರಿಯರು ಓಕುಳಿಯ ನೀರು, ಹಾಲು, ಎಣ್ಣೆ, ಬೆಣ್ಣೆ ಮುಂತಾದವುಗಳನ್ನು ಒಬ್ಬರ ಮೇಲೊಬ್ಬರು ಎರಚಾಡುತ್ತಾ, ಆಟವಾಡುತ್ತಾ ಹಿಂಬಾಲಿಸುತ್ತಿದ್ದರು. ॥ ೧೪ ॥ ವಾರಾಂಗನೆಯರು ಎಣ್ಣೆ, ಹಾಲು, ತುಪ್ಪ, ಬೆಣ್ಣೆ, ಪನ್ನೀರು, ಅರಸಿನ ಇವೇ ಮುಂತಾದುವನ್ನು ಬೆರೆಸಿದ ಕೇಸರೀ ಮಿಶ್ರಿತವಾದ ಕೆಂಪುನೀರನ್ನು ಪುರುಷರ ಮೇಲೆ ಸುರಿಯುವರು ಮತ್ತು ಪುರುಷರೂ ಅವರ ಮೇಲೆ ಎರಚುತ್ತಾ ಓಕುಳಿಯ ಆಟವನ್ನಾಡುತ್ತಿದ್ದರು. ॥ ೧೫ ॥

ಆ ಸಮಯದಲ್ಲಿ ಅವಭೃತೋತ್ಸವವನ್ನು ನೋಡುವ ಸಲುವಾಗಿ ಶ್ರೇಷ್ಠವಾದ ವಿಮಾನಗಳಲ್ಲಿ ಕುಳಿತು ಆಕಾಶದಲ್ಲಿ ಅಸಂಖ್ಯಾತ ದೇವಿಯರು ಉಪಸ್ಥಿತರಾಗಿರುವಂತೆಯೇ ಇಂದ್ರಪ್ರಸ್ಥದ ರಾಜಮಹಿಷಿಯರು ಸೈನಿಕರಿಂದ ಸಂರಕ್ಷಿತರಾಗಿ ಸುಂದರವಾದ ಪಲ್ಲಕ್ಕಿಗಳಲ್ಲಿ ಕುಳಿತು ಆಗಮಿಸಿದ್ದರು. ಪಾಂಡವರ ಸೋದರಮಾವನ

ತಾ ದೇವರಾನುತ ಸಖೀನ್ಸಿಷಿಚುರ್ದೃತೀಭಿಃ
ಕ್ಲಿನ್ನಾಂಬರಾ ವಿವೃತಗಾತ್ರಕುಚೋರುಮಧ್ಯಾಃ ।
ಔತ್ಸುಕ್ಯಮುಕ್ತಕಬರಾಚ್ಚ್ಯವಮಾನಮಾಲ್ಯಾಃ
ಕ್ಷೋಭಂ ದಧುರ್ಮಲಧಿಯಾಂ ರುಚಿರೈರ್ವಿಹಾರೈಃ ॥ ೧೭ ॥

ಸ ಸಮ್ರಾಡ್ ರಥಮಾರೂಢಃ ಸದಶ್ವಂ ರುಕ್ಮಮಾಲಿನಮ್ ।
ವ್ಯರೋಚತ ಸ್ವಪತ್ನೀಭಿಃ ಕ್ರಿಯಾಭಿಃ ಕ್ರತುರಾಡಿವ ॥ ೧೮ ॥

ಪತ್ನೀಸಂಯಾಜಾವಭೃಥ್ಯೈಶ್ಚರಿತ್ವಾ ತೇ ತಮೃತ್ವಿಜಃ ।
ಆಚಾಂತಂ ಸ್ನಾಪಯಾಂಚಕ್ರುರ್ಗಂಗಾಯಾಂ ಸಹ ಕೃಷ್ಣಯಾ ॥ ೧೯ ॥

ದೇವದುಂದುಭಯೋ ನೇದುರ್ನರದುಂದುಭಿಭಿಃ ಸಮಮ್ ।
ಮುಮುಚುಃ ಪುಷ್ಪವರ್ಷಾಣಿ ದೇವರ್ಷಿಪಿತೃಮಾನವಾಃ ॥ ೨೦ ॥

ಸಸ್ನುಸ್ತತ್ರ ತತಃ ಸರ್ವೇ ವರ್ಣಾಶ್ರಮಯುತಾ ನರಾಃ ।
ಮಹಾಪಾತಕ್ಯಪಿ ಯತಃ ಸದ್ಯೋ ಮುಚ್ಯೇತ ಕಿಲ್ಬಿಷಾತ್ ॥ ೨೧ ॥

ಅಥ ರಾಜಾಽಹತೇ ಕ್ಷೌಮೇ ಪರಿಧಾಯ ಸ್ವಲಂಕೃತಃ ।
ಋತ್ವಿಕ್ಸದಸ್ಯವಿಪ್ರಾದೀನಾನರ್ಚಾಭರಣಾಂಬರೈಃ ॥ ೨೨ ॥

ಬಂಧುಜ್ಞಾತಿನೃಪಾನ್ಮಿತ್ರಸುಹೃದೋಽನ್ಯಾಂಶ್ಚ ಸರ್ವಶಃ ।
ಅಭೀಕ್ಷ್ಣಂ ಪೂಜಯಾಮಾಸ ನಾರಾಯಣಪರೋ ನೃಪಃ ॥ ೨೩ ॥

ಸರ್ವೇ ಜನಾಃ ಸುರರುಚೋ ಮಣಿಕುಂಡಲಸ್ರ-
ಗುಷ್ಣೀಷಕಂಚುಕದುಕೂಲಮಹಾರ್ಘ್ಯಹಾರಾಃ ।
ನಾರ್ಯಶ್ಚ ಕುಂಡಲಯುಗಾಲಕವೃಂದ ಜುಷ್ಟ-
ವಕ್ತ್ರಶ್ರಿಯಃ ಕನಕಮೇಖಲಯಾ ವಿರೇಜುಃ ॥ ೨೪ ॥

ಮಗನಾದ ಶ್ರೀಕೃಷ್ಣ ಮತ್ತು ಅವನ ಸ್ನೇಹಿತರು ಆ ರಾಣಿಯರ ಮೇಲೆ ಓಕುಳಿಯನ್ನು ಚೆಲ್ಲುತ್ತಿದ್ದರು ಇದರಿಂದ ರಾಜಮಹಿಷಿಯರ ಮುಖವು ನಾಚಿಕೆಯಿಂದಲೂ, ಮಂದಹಾಸದಿಂದಲೂ ವಿಕಸಿತ ವಾಗಿ ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿತ್ತು. ॥ ೧೬ ॥ ಹಾಗೆಯೇ ಪಲ್ಲಕ್ಕಿಗಳಲ್ಲಿ ಕುಳಿತಿದ್ದ ರಾಣಿಯರೂ ಕೂಡ ಭಾವ ಮೈದುನರ ಮೇಲೂ, ಸಖಿಯರ ಮೇಲೂ ಜೀರ್ಕೊಳವೆಯಿಂದ ಓಕುಳಿಯನ್ನು ಎರಚುತ್ತಿದ್ದರು. ಹೀಗೆ ಪರಸ್ಪರ ಓಕುಳಿಯ ಆಟವನ್ನಾಡುತ್ತಿದ್ದಾಗ ಸ್ತ್ರೀಯರ ಬಟ್ಟೆಗಳೆಲ್ಲವೂ ಒದ್ದೆಯಾಗಿದ್ದವು. ಆಟವಾಡುವ ಸಂಭ್ರಮದಲ್ಲಿ ಅವರ ಮುಡಿಗಳು ಸಡಿಲವಾಗಿ ಮುಡಿದ ಹೂವುಗಳು ನಕ್ಷತ್ರಗಳಂತೆ ಉದುರುತ್ತಿದ್ದವು. ಪರೀಕ್ಷಿತನೇ! ಅವರ ಇಂತಹ ಸುಂದರವಾದ ಮತ್ತು ಪವಿತ್ರವಾದ ವಿಹಾರವನ್ನು ಕಂಡು ಮಲಿನವಾದ ಅಂತಃಕರಣವುಳ್ಳ ಪುರುಷರ ಮನಸ್ಸು ಕ್ಷೋಭೆಗೊಂಡವು. ॥ ೧೭ ॥

ಚಕ್ರವರ್ತಿ ಮಹಾರಾಜ ಯುಧಿಷ್ಠಿರನು ದ್ರೌಪದಿಯೇ ಮೊದಲಾದ ತನ್ನ ಪತ್ನಿಯರೊಡನೆ ಸುಂದರವಾದ ಕುದುರೆಗಳನ್ನು ಹೂಡಲ್ಪಟ್ಟ ಸುವರ್ಣಮಾಲೆಗಳಿಂದ ಸಮಲಂಕೃತವಾದ ದಿವ್ಯರಥದಲ್ಲಿ ಕುಳಿತು ಪ್ರಯಾಜವೇ ಮೊದಲಾದ ಯಜ್ಞಕ್ರಿಯೆಗಳಿಂದ ಕೂಡಿ ಮೂರ್ತಿವತ್ತಾಗಿ ಆವಿರ್ಭವಿಸಿದ ರಾಜಸೂಯ ಯಜ್ಞದಂತೆಯೇ ಪ್ರಕಾಶಿಸಿದನು. ॥ ೧೮ ॥ ಅನಂತರ ಋತ್ವಿಜರು ಪತ್ನೀಸಂಯಾಜ (ಒಂದು ಯಜ್ಞಕ್ರಿಯೆ)ವೆಂಬ ವಿಶೇಷಯಾಗವನ್ನೂ ಮತ್ತು ಯಜ್ಞಾಂತ-ಸ್ನಾನದ ಸಂಬಂಧವಾದ ಕರ್ಮಗಳನ್ನು ಯುಧಿಷ್ಠಿರನಿಂದ ಮಾಡಿಸಿ, ಅವನಿಂದ ಶುದ್ಧಾಚಮನ ಮಾಡಿಸಿದನಂತರ ದ್ರೌಪದಿಯೊಡನೆ ಗಂಗಾಸ್ನಾನವನ್ನು ಮಾಡಿಸಿದರು. ॥ ೧೯ ॥ ಆ ಸಮಯದಲ್ಲಿ ನುಡಿಸಿದ ದುಂದುಭಿಗಳೊಡನೆ ದೇವದುಂದುಭಿಗಳೂ ಮೊಳಗಿದವು. ದೇವರ್ಷಿ-ಪಿತೃ-ಮನುಷ್ಯರು ಧರ್ಮರಾಜನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ॥ ೨೦ ॥ ಮಹಾರಾಜ ಯುಧಿಷ್ಠಿರನು ದ್ರೌಪದಿಯೊಡನೆ ಅವಭೃತ ಸ್ನಾನಮಾಡಿದ ನಂತರ ಇತರ ಸಮಸ್ತ ವರ್ಣದವರೂ ಗಂಗೆಯಲ್ಲಿ ಸ್ನಾನ ಮಾಡಿದರು. ಈ ಪವಿತ್ರಸ್ನಾನದಿಂದ ಮಹಾಪಾತಕಿಯಾದರೂ ತನ್ನ ಪಾಪಗಳಿಂದ ಕ್ಷಣದಲ್ಲೇ ಮುಕ್ತನಾಗಿ ಹೋಗುತ್ತಾನೆ. ॥ ೨೧ ॥ ಬಳಿಕ ಯುಧಿಷ್ಠಿರನು ನವೀನ ರೇಷ್ಮೆಯ ಪಂಚೆ-ಉತ್ತರೀಯವನ್ನು ಧರಿಸಿಕೊಂಡು ವಿಧ-ವಿಧವಾದ ಆಭರಣಗಳಿಂದ ಅಲಂಕೃತನಾದನು. ಮತ್ತೆ ಋತ್ವಿಜರಿಗೆ, ಸದಸ್ಯರಿಗೆ, ಬ್ರಾಹ್ಮಣರಿಗೆ ವಸ್ತ್ರಾಭೂಷಣಗಳನ್ನು ಕೊಟ್ಟು ಸತ್ಕರಿಸಿದನು. ॥ ೨೨ ॥ ನಾರಾಯಣ ಪರಾಯಣನೂ, ಎಲ್ಲರಲ್ಲಿಯೂ ಭಗವಂತನನ್ನೇ ಕಾಣುವವನೂ, ಶ್ರೀಕೃಷ್ಣನ ಪರಮಭಕ್ತನೂ ಆದ ಯುಧಿಷ್ಠಿರನು ಬಂಧುಗಳನ್ನೂ, ಜ್ಞಾತಿಗಳನ್ನೂ, ರಾಜರನ್ನೂ, ಸುಹೃದರನ್ನೂ, ಸಮಸ್ತರನ್ನೂ ಪುನಃ ಪುನಃ ಪೂಜಿಸಿ ಸತ್ಕರಿಸಿದನು. ॥ ೨೩ ॥ ಆ ಸಮಯದಲ್ಲಿ ಸಮಸ್ತ ಜನರೂ ರತ್ನಕುಂಡಲಗಳಿಂದಲೂ, ಪುಷ್ಪಹಾರಗಳಿಂದಲೂ, ರುಮಾಲುಗಳಿಂದಲೂ, ಕವಚಗಳಿಂದಲೂ, ಪಟ್ಟೆವಸ್ತ್ರಗಳಿಂದಲೂ, ಬಹುಮೂಲ್ಯ ರತ್ನಹಾರಗಳಿಂದಲೂ ಸಮಲಂಕೃತರಾಗಿ ದೇವತೆಗಳಂತೆ

ಅಥರ್ತ್ವಿಜೋ ಮಹಾಶೀಲಾಃ ಸದಸ್ಯಾ ಬ್ರಹ್ಮವಾದಿನಃ ।
ಬ್ರಹ್ಮಕ್ಷತ್ರಿಯವಿಟ್ಶೂದ್ರಾ ರಾಜಾನೋ ಯೇ ಸಮಾಗತಾಃ ॥ ೨೫ ॥

ದೇವರ್ಷಿಪಿತೃಭೂತಾನಿ ಲೋಕಪಾಲಾಃ ಸಹಾನುಗಾಃ ।
ಪೂಜಿತಾಸ್ತಮನುಜ್ಞಾಪ್ಯ ಸ್ವಧಾಮಾನಿ ಯಯುರ್ನೃಪ ॥ ೨೬ ॥

ಹರಿದಾಸಸ್ಯ ರಾಜರ್ಷೇ ರಾಜಸೂಯಮಹೋದಯಮ್ ।
ನೈವಾತೃಪ್ಯನ್ ಪ್ರಶಂಸಂತಃ ಪಿಬನ್ಮರ್ತ್ಯೋಽಮೃತಂ ಯಥಾ ॥ ೨೭ ॥

ತತೋ ಯುಧಿಷ್ಠಿರೋ ರಾಜಾ ಸುಹೃತ್ಸಂಬಂಧಿ ಬಾಂಧವಾನ್ ।
ಪ್ರೇಮ್ಣಾ ನಿವಾಸಯಾಮಾಸ ಕೃಷ್ಣಂ ಚ ತ್ಯಾಗಕಾತರಃ ॥ ೨೮ ॥

ಭಗವಾನಪಿ ತತ್ರಾಂಗ ನ್ಯವಾತ್ಸೀತ್ತತ್ಪ್ರಿಯಂಕರಃ ।
ಪ್ರಸ್ಥಾಪ್ಯ ಯದುವೀರಾಂಶ್ಚ ಸಾಂಬಾದೀಂಶ್ಚ ಕುಶಸ್ಥಲೀಮ್ ॥ ೨೯ ॥

ಇತ್ಥಂ ರಾಜಾ ಧರ್ಮಸುತೋ ಮನೋರಥಮಹಾರ್ಣವಮ್ ।
ಸುದುಸ್ತರಂ ಸಮುತ್ತೀರ್ಯ ಕೃಷ್ಣೇನಾಸೀದ್ಗತಜ್ವರಃ ॥ ೩೦ ॥

ಏಕದಾಂತಃಪುರೇ ತಸ್ಯ ವೀಕ್ಷ್ಯ ದುರ್ಯೋಧನಃ ಶ್ರಿಯಮ್ ।
ಅತಪ್ಯದ್ರಾಜಸೂಯಸ್ಯ ಮಹಿತ್ವಂ ಚಾಚ್ಯುತಾತ್ಮನಃ ॥ ೩೧ ॥

ಯಸ್ಮಿನ್ ನರೇಂದ್ರದಿತಿಜೇಂದ್ರಸುರೇಂದ್ರಲಕ್ಷ್ಮೀ-
ರ್ನಾನಾ ವಿಭಾಂತಿ ಕಿಲ ವಿಶ್ವಸೃಜೋಪಕ್ಲೃಪ್ತಾಃ ।
ತಾಭಿಃ ಪತೀಂದ್ರುಪದರಾಜಸುತೋಪತಸ್ಥೇ
ಯಸ್ಯಾಂ ವಿಷಕ್ತಹೃದಯಃ ಕುರುರಾಡತಪ್ಯತ್ ॥ ೩೨ ॥

ಶೋಭಿಸುತ್ತಿದ್ದರು. ಸ್ತ್ರೀಯರೂ ಕೂಡ ಥಳ-ಥಳಿಸುವ ಓಲೆಗಳನ್ನು ಧರಿಸಿ, ಗುಂಗುರು ಕೂದಲುಗಳಿಂದ ಅಲಂಕೃತವಾದ ಮುಖ ಕಮಲಗಳಿಂದಲೂ, ಸುವರ್ಣಮಯವಾದ ಸೊಂಟಪಟ್ಟಿಯಿಂದಲೂ ಕೂಡಿ ಅತ್ಯಂತ ಶೋಭಾಯಮಾನರಾಗಿ ಕಾಣುತ್ತಿದ್ದರು. ॥ ೨೪ ॥

ಪರೀಕ್ಷಿತನೇ! ರಾಜಸೂಯ ಯಜ್ಞಕ್ಕೆ ಆಗಮಿಸಿದ್ದ ಶೀಲವಂತರಾದ ಋತ್ವಿಜರು, ವೇದಪಾಠಿಗಳಾದ ಸದಸ್ಯರು, ಬ್ರಾಹ್ಮಣ ಕ್ಷತ್ರಿಯ-ವೈಶ್ಯ-ಶೂದ್ರರು, ರಾಜರು, ದೇವತೆಗಳು, ಋಷಿಗಳು, ಮುನಿಗಳು, ಪಿತೃದೇವತೆಗಳು, ಇತರ ಪ್ರಾಣಿಗಳೂ ತಮ್ಮ-ತಮ್ಮ ಅನುಯಾಯಿಗಳೊಂದಿಗೆ ಆಗಮಿಸಿದ್ದ ಲೋಕಪಾಲರು - ಇವರೆಲ್ಲರನ್ನೂ ಧರ್ಮರಾಜನಾದ ಯುಧಿಷ್ಠಿರನು ಯಥೋಚಿತವಾಗಿ ಪೂಜಿಸಿ ಸತ್ಕರಿಸಿದನು. ಅನಂತರ ಅವರೆಲ್ಲರೂ ರಾಜನ ಅನುಮತಿಯನ್ನು ಪಡೆದು ತಮ್ಮ-ತಮ್ಮ ನಿವಾಸಸ್ಥಾನಗಳಿಗೆ ಹೊರಟು ಹೋದರು. ॥ ೨೫-೨೬ ॥ ಪರೀಕ್ಷಿದ್ರಾಜನೇ! ಅಮೃತಪಾನ ಮಾಡುತ್ತಾ-ಮಾಡುತ್ತಾ ಮನುಷ್ಯನು ತೃಪ್ತನಾಗದಿರುವಂತೆಯೇ ಹರಿದಾಸನಾದ, ರಾಜರ್ಷಿಯಾದ ಯುಧಿಷ್ಠಿರನ ರಾಜಸೂಯ ಯಾಗವನ್ನು ಎಷ್ಟು ಹೊಗಳಿದರೂ ಜನರಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ॥ ೨೭ ॥ ಬಳಿಕ ಯುಧಿಷ್ಠಿರನು ಪ್ರಯಾಣ ಹೊರಟಿದ್ದ ತನ್ನ ಸುಹೃದರನ್ನು, ನೆಂಟರಿಷ್ಟರನ್ನು, ಬಂಧುಗಳನ್ನು ಮತ್ತು ಶ್ರೀಕೃಷ್ಣನನ್ನು ಅವರ ವಿಯೋಗವನ್ನು ಸಹಿಸಿಕೊಳ್ಳಲಾರದೆ ಪ್ರೇಮದಿಂದ ಅವರೆಲ್ಲರನ್ನೂ ತಡೆಹಿಡಿದು ಇರಿಸಿಕೊಂಡನು. ॥ ೨೮ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಯದುವಂಶದ ವೀರರಾದ ಸಾಂಬರೇ ಮೊದಲಾದವರನ್ನು ದ್ವಾರಕೆಗೆ ಕಳಿಸಿಕೊಟ್ಟು, ತಾನು ಯುಧಿಷ್ಠಿರರಾಜನ ಅಭಿಲಾಷೆಯನ್ನು ಪೂರ್ಣಗೊಳಿಸಲಿಕ್ಕಾಗಿ, ಅವನಿಗೆ ಆನಂದವನ್ನುಂಟುಮಾಡುವುದಕ್ಕಾಗಿ ಸ್ವಲ್ಪಕಾಲ ಅಲ್ಲೇ ಇರಲು ಬಯಸಿದನು. ॥ ೨೯ ॥ ಹೀಗೆ ಧರ್ಮನಂದನನಾದ ಯುಧಿಷ್ಠಿರನು ದಾಟಲು ಅತ್ಯಂತ ದುಸ್ತರವಾಗಿದ್ದ ಮನೋರಥವೆಂಬ ಮಹಾಸಮುದ್ರವನ್ನು ಭಗವಾನ್ ಶ್ರೀಕೃಷ್ಣನ ಕೃಪಾವಿಶೇಷದಿಂದ ಸುಲಭವಾಗಿ ದಾಟಿ ನಿಶ್ಚಿಂತನಾದನು. ॥ ೩೦ ॥

ಹಾಗೆ ಉಳಿದುಕೊಂಡವರಲ್ಲಿ ದುರ್ಯೋಧನನು ಒಬ್ಬನು. ಒಂದು ದಿನ ಭಗವಂತನ ಪರಮಪ್ರೇಮಿ ಯುಧಿಷ್ಠಿರ ರಾಜನ ಅಂತಃಪುರದ ಸೌಂದರ್ಯ - ಸಂಪತ್ತನ್ನೂ, ರಾಜಸೂಯಯಜ್ಞದಿಂದ ಪ್ರಾಪ್ತವಾದ ಮಹತ್ವವನ್ನು ನೋಡಿದ ದುರ್ಯೋಧನನ ಮನಸ್ಸು ಮತ್ಸರದಿಂದ ಕುದಿಯಲು ತೊಡಗಿತು. ॥ ೩೧ ॥ ಪರೀಕ್ಷಿತನೇ! ಪಾಂಡವರಿಗಾಗಿ ಮಯನಿಂದ ನಿರ್ಮಿಸಿಕೊಟ್ಟಿದ್ದ ಆ ಸಭಾಭವನದಲ್ಲಿ ನರೇಂದ್ರರ, ದೈತ್ಯೇಂದ್ರರ ಮತ್ತು ಸುರೇಂದ್ರರ ವೈಭವವು ಎದ್ದು ಕಾಣುತ್ತಿತ್ತು. ನಾನಾ ಪ್ರಕಾರದ ಭೋಗಸಾಮಗ್ರಿಗಳು ಆ ಸಭಾಭವನದಲ್ಲಿದ್ದು, ಅವುಗಳ ಮೂಲಕ ದ್ರೌಪದಿಯು ತನ್ನ ಪತಿಗಳ ಸೇವೆ ಮಾಡುತ್ತಿದ್ದಳು. ಅಂತಹ ರಾಜಭವನದಲ್ಲಿ ಆ ದಿನಗಳಲ್ಲಿ ಶ್ರೀಕೃಷ್ಣನ ಸಾವಿರಾರು ರಾಣಿಯರು ವಾಸಿಸುತ್ತಿದ್ದರು. ಅವರು ನಿತಂಬಗಳ ಭಾರದಿಂದ ನಿಧಾನವಾಗಿ ನಡೆಯುತ್ತಿದ್ದರು. ಆಗ ಅವರ ಕಾಲ್ಗೆಜ್ಜೆಗಳ ಝಣ-ಝಣ ನಿನಾದವು ಎಲ್ಲೆಡೆ ವ್ಯಾಪಿಸಿತ್ತು. ಸುಂದರವಾದ ಕಟಿಭಾಗವುಳ್ಳ ಅವರು ಧರಿಸಿದ್ದ ಬಿಳಿಯ ಮುತ್ತಿನ ಹಾರಗಳು ಕುಚಗಳಿಗೆ ಲೇಪಿತವಾದ ಕುಂಕುಮ

ಯಸ್ಮಿಂಸ್ತದಾ ಮಧುಪತೇರ್ಮಹಿಷೀಸಹಸ್ರಂ
ಶ್ರೋಣೀಭರೇಣ ಶನಕೈಃ ಕ್ವಣದಂಘ್ರಿಶೋಭಮ್ ।
ಮಧ್ಯೇ ಸುಚಾರು ಕುಚಕುಂಕುಮಶೋಣಹಾರಂ
ಶ್ರೀಮನ್ಮುಖಂ ಪ್ರಚಲಕುಂಡಲಕುಂತಲಾಢ್ಯಮ್ ॥ ೩೩ ॥

ಸಭಾಯಾಂ ಮಯಕ್ಲೃಪ್ತಾಯಾಂ ಕ್ವಾಪಿ ಧರ್ಮಸುತೋಽರಾಟ್ ।
ವೃತೋಽನುಜೈರ್ಬಂಧುಭಿಶ್ಚ ಕೃಷ್ಣೇನಾಪಿ ಸ್ವಚಕ್ಷುಷಾ ॥ ೩೪ ॥

ಆಸೀನಃ ಕಾಂಚನೇ ಸಾಕ್ಷಾದಾಸನೇ ಮಘವಾನಿವ ।
ಪಾರಮೇಷ್ಠ್ಯಶ್ರಿಯಾ ಜುಷ್ಟಃ ಸ್ತೂಯಮಾನಶ್ಚ ವಂದಿಭಿಃ ॥ ೩೫ ॥

ತತ್ರ ದುರ್ಯೋಧನೋ ಮಾನೀ ಪರೀತೋ ಭ್ರಾತೃಭಿರ್ನೃಪ ।
ಕಿರೀಟಮಾಲೀ ನ್ಯವಿಶದಸಿಹಸ್ತಃ ಕ್ಷಿಪನ್ರುಷಾ ॥ ೩೬ ॥

ಸ್ಥಲೇಽಭ್ಯಗೃಹ್ಣಾದ್ವಸ್ತ್ರಾಂತಂ ಜಲಂ ಮತ್ವಾ ಸ್ಥಲೇಽಪತತ್ ।
ಜಲೇ ಚ ಸ್ಥಲವದ್ಭ್ರಾಂತ್ಯಾ ಮಯಮಾಯಾವಿಮೋಹಿತಃ ॥ ೩೭ ॥

ಜಹಾಸ ಭೀಮಸ್ತಂ ದೃಷ್ಟ್ವಾ ಸ್ತ್ರಿಯೋ ನೃಪತಯೋಽಪರೇ ।
ನಿವಾರ್ಯಮಾಣಾ ಅಪ್ಯಂಗ ರಾಜ್ಞಾ ಕೃಷ್ಣಾನುಮೋದಿತಾಃ ॥ ೩೮ ॥

ಸ ವ್ರೀಡಿತೋಽವಾಗ್ವದನೋ ರುಷಾ ಜ್ವಲನ್
ನಿಷ್ಕ್ರಮ್ಯ ತೂಷ್ಣೀಂ ಪ್ರಯಯೌ ಗಜಾಹ್ವಯಮ್ ।
ಹಾಹೇತಿ ಶಬ್ದಃ ಸುಮಹಾನಭೂತ್ಸತಾ-
ಮಜಾತಶತ್ರುರ್ವಿಮನಾ ಇವಾಭವತ್ ।
ಬಭೂವ ತೂಷ್ಣೀಂ ಭಗವಾನ್ಭುವೋ ಭರಂ
ಸಮುಜ್ಜಿಹೀರ್ಷುರ್ಭ್ರಮತಿ ಸ್ಮ ಯದ್ದೃಶಾ ॥ ೩೯ ॥

ಏತತ್ತೇಽಭಿಹಿತಂ ರಾಜನ್ ಯತ್ಪೃಷ್ಟೋಽಹಮಿಹ ತ್ವಯಾ ।
ಸುಯೋಧನಸ್ಯ ದೌರಾತ್ಮ್ಯಂ ರಾಜಸೂಯೇ ಮಹಾಕ್ರತೌ ॥ ೪೦ ॥

ಕೇಸರಿಯಿಂದಾಗಿ ಕೆಂಪಾಗಿ ಕಾಣುತ್ತಿದ್ದವು. ಕುಂಡಲಗಳು ಮತ್ತು ಮುಂಗುರುಳುಗಳ ನಲಿದಾಟದಿಂದ ಅವರ ಮುಖದ ಶೋಭೆಯು ಇನ್ನೂ ಹೆಚ್ಚಾಗುತ್ತಿತ್ತು. ಇಂತಹ ವೈಭವವನ್ನು ಕಂಡ ದುರ್ಯೋಧನನು ಅಂತಹ ವೈಭವವು ತನಗಿಲ್ಲವಲ್ಲ ಎಂದು ಪರಿತಪಿಸಿದನು. ಪರೀಕ್ಷಿತನೇ ! ನಿಜ ಹೇಳಬೇಕೆಂದರೆ, ದುರ್ಯೋಧನನ ಮನಸ್ಸು ದ್ರೌಪದಿಯಲ್ಲಿ ಆಸಕ್ತವಾಗಿದ್ದುದೇ ಅವನ ಸಂತಾಪಕ್ಕೆ ಮುಖ್ಯ ಕಾರಣವಾಗಿತ್ತು. ॥ ೩೨-೩೩ ॥

ಒಂದು ದಿನ ರಾಜಾಧಿರಾಜನಾದ ಯುಧಿಷ್ಠಿರ ಮಹಾರಾಜನು ತನ್ನ ಅನುಜರಿಂದಲೂ, ಸಂಬಂಧಿಗಳಿಂದಲೂ, ತನ್ನ ಕಣ್ಮಣಿಯೂ, ಪರಮಹಿತೈಷಿಯೂ ಆದ ಭಗವಾನ್ ಶ್ರೀಕೃಷ್ಣನೊಡನೆ ಮಯಸಭೆಯಲ್ಲಿ ಸ್ವರ್ಣ ಸಿಂಹಾಸನದಲ್ಲಿ ದೇವೇಂದ್ರನಂತೆ ವಿರಾಜಮಾನನಾಗಿದ್ದನು. ಅವನಲ್ಲಿದ್ದ ಭೋಗ-ಸಾಮಗ್ರಿಗಳೂ, ರಾಜ್ಯಲಕ್ಷ್ಮಿಯೂ ಬ್ರಹ್ಮನ ಐಶ್ವರ್ಯಕ್ಕೆ ಸಮಾನವಾಗಿತ್ತು. ವಂದೀಜನರು ಅವನನ್ನು ಸ್ತುತಿಸುತ್ತಿದ್ದರು. ॥ ೩೪-೩೫ ॥ ಅದೇ ಸಮಯಕ್ಕೆ ಅಭಿಮಾನಿಯಾದ ದುರ್ಯೋಧನನು ತನ್ನ ತಮ್ಮಂದಿರಾದ ದುಃಶಾಸನರೇ ಮೊದಲಾದವರೊಂದಿಗೆ ಅಲ್ಲಿಗೆ ಬಂದನು. ಅವನ ತಲೆಯಲ್ಲಿ ಕಿರೀಟ, ಕತ್ತಿನಲ್ಲಿ ಹಾರಗಳು, ಕೈಯಲ್ಲಿ ಖಡ್ಗವಿದ್ದು ಅವನು ಕ್ರೋಧಗೊಂಡು ದ್ವಾರಪಾಲಕರನ್ನು ತಿರಸ್ಕರಿಸುತ್ತಾ ಪ್ರವೇಶಿಸಿದನು. ॥ ೩೬॥ ಆ ಸಭಾಭವನದಲ್ಲಿ ಮಯನು ನಿರ್ಮಿಸಿದ ಮಾಯೆಯಿಂದಾಗಿ ದುರ್ಯೋಧನನು ಮೋಹಿತನಾಗಿ ನೆಲವನ್ನು ಜಲವೆಂದೂ ಭ್ರಮಿಸಿ ತನ್ನ ಬಟ್ಟೆಗಳನ್ನು ಎತ್ತಿ ಹಿಡಿದನು ಹಾಗೂ ಜಲವನ್ನು ನೆಲವೆಂದು ತಿಳಿದು ಅದರಲ್ಲಿ ಬಿದ್ದುಬಿಟ್ಟನು. ॥೩೭ ॥ ಅವನು ಬಿದ್ದುದನ್ನು ನೋಡಿ ಭೀಮಸೇನ, ರಾಣಿಯರು ಹಾಗೂ ನೆರೆದಿದ್ದ ರಾಜರೆಲ್ಲರೂ ನಗತೊಡಗಿದರು. ಯುಧಿಷ್ಠಿರನು ನಗಬಾರದೆಂದು ತಡೆಯುತ್ತಿದ್ದರೂ, ಅವರಿಗೆ ಶ್ರೀಕೃಷ್ಣನ ಸಂಕೇತ-ಅನುಮೋದನೆಯೂ ದೊರಕಿತ್ತು. ॥ ೩೮ ॥ ಇದರಿಂದ ದುರ್ಯೋಧನನು ನಾಚಿಕೊಂಡು ಅವನ ರೋಮರೋಮಗಳೆಲ್ಲ ಕ್ರೋಧದಿಂದ ಉರಿಯತೊಡಗಿತು. ಅವನು ತಲೆತಗ್ಗಿಸಿಕೊಂಡು, ಏನನ್ನೂ ಮಾತನಾಡದೆ ಹಸ್ತಿನಾಪುರಕ್ಕೆ ಹೊರಟು ಹೋದನು. ಈ ಘಟನೆಯನ್ನು ನೋಡಿ ಸತ್ಪುರುಷರಲ್ಲಿ ಹಾಹಾಕಾರವೆದ್ದಿತು. ಧರ್ಮರಾಜ ಯುಧಿಷ್ಠಿರನ ಮನಸ್ಸು ಖಿನ್ನವಾಯಿತು. ಪರೀಕ್ಷಿತನೇ! ಇದೆಲ್ಲವೂ ನಡೆದರೂ ಶ್ರೀಕೃಷ್ಣನು ಸುಮ್ಮನಿದ್ದನು. ಯಾವುದೇ ಪ್ರಕಾರದಿಂದ ಭೂಭಾರವು ತಗ್ಗಬೇಕೆಂಬುದೇ ಅವನ ಇಚ್ಛೆಯಿತ್ತು. ನಿಜಹೇಳಬೇಕಾದರೆ ಅವನ ಮಾಯೆಯಿಂದಲೇ ದುರ್ಯೋಧನನಿಗೆ ಅಂತಹ ಭ್ರಮೆ ಉಂಟಾಗಿತ್ತು. ॥ ೩೯ ॥ ಪರೀಕ್ಷಿತನೇ! ಆ ಮಹಾರಾಜಸೂಯ ಯಜ್ಞದಲ್ಲಿ ದುರ್ಯೋಧನನಿಗೆ ಏಕೆ ಮತ್ಸರವುಂಟಾಗಿತ್ತು ? ಎಂದು ನೀನು ಕೇಳಿದ್ದೆಯಲ್ಲ! ಅದೆಲ್ಲವನ್ನು ನಾನು ನಿನಗೆ ವಿಸ್ತಾರವಾಗಿ ತಿಳಿಸಿದ್ದೇನೆ. ॥ ೪೦ ॥

ಎಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೭೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ದುರ್ಯೋಧನಮಾನಭಂಗೋ ನಾಮ ಪಂಚಸಪ್ತತಿತಮೋಽಧ್ಯಾಯಃ ॥ ೭೫ ॥

# ಎಪ್ಪತ್ತಾರನೆಯ ಅಧ್ಯಾಯ

## ಶಾಲ್ವನೊಡನೆ ಯಾದವರ ಯುದ್ಧ

*ಶ್ರೀಶುಕ ಉವಾಚ*

**ಅಥಾನ್ಯದಪಿ ಕೃಷ್ಣಸ್ಯ ಶೃಣು ಕರ್ಮಾದ್ಭುತಂ ನೃಪ ।**
**ಕ್ರೀಡಾನರಶರೀರಸ್ಯ ಯಥಾ ಸೌಭಪತಿರ್ಹತಃ ॥ ೧ ॥**

**ಶಿಶುಪಾಲಸಖಃ ಶಾಲ್ವೋ ರುಕ್ಮಿಣ್ಯುದ್ವಾಹ ಆಗತಃ ।**
**ಯದುಭಿರ್ನಿರ್ಜಿತಃ ಸಂಖ್ಯೇ ಜರಾಸಂಧಾದಯಸ್ತಥಾ ॥ ೨ ॥**

**ಶಾಲ್ವಃ ಪ್ರತಿಜ್ಞಾಮಕರೋತ್ ಶೃಣ್ವತಾಂ ಸರ್ವಭೂಭುಜಾಮ್ ।**
**ಅಯಾದವೀಂ ಕ್ಷ್ಮಾಂ ಕರಿಷ್ಯೇ ಪೌರುಷಂ ಮಮ ಪಶ್ಯತ ॥ ೩ ॥**

**ಇತಿ ಮೂಢಃ ಪ್ರತಿಜ್ಞಾಯ ದೇವಂ ಪಶುಪತಿಂ ಪ್ರಭುಮ್ ।**
**ಆರಾಧಯಾಮಾಸ ನೃಪ ಪಾಂಸುಮುಷ್ಟಿಂ ಸಕೃದ್ಗ್ರಸನ್ ॥ ೪ ॥**

**ಸಂವತ್ಸರಾಂತೇ ಭಗವಾನಾಶುತೋಷ ಉಮಾಪತಿಃ ।**
**ವರೇಣಚ್ಛಂದಯಾಮಾಸ ಶಾಲ್ವಂ ಶರಣಮಾಗತಮ್ ॥ ೫ ॥**

**ದೇವಾಸುರಮನುಷ್ಯಾಣಾಂ ಗಂಧರ್ವೋರಗರಕ್ಷಸಾಮ್ ।**
**ಅಭೇದ್ಯಂ ಕಾಮಗಂ ವವ್ರೇ ಸ ಯಾನಂ ವೃಷ್ಣಿಭೀಷಣಮ್ ॥ ೬ ॥**

**ತಥೇತಿ ಗಿರಿಶಾದಿಷ್ಟೋ ಮಯಃ ಪರಪುರಂಜಯಃ ।**
**ಪುರಂ ನಿರ್ಮಾಯ ಶಾಲ್ವಾಯ ಪ್ರಾದಾತ್ಸೌಭಮಯಸ್ಮಯಮ್ ॥ ೭ ॥**

**ಸ ಲಬ್ಧ್ವಾ ಕಾಮಗಂ ಯಾನಂ ತಮೋಧಾಮ ದುರಾಸದಮ್ ।**
**ಯಯೌ ದ್ವಾರವತೀಂ ಶಾಲ್ವೋ ವೈರಂ ವೃಷ್ಣಿಕೃತಂ ಸ್ಮರನ್ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ಪರೀಕ್ಷಿತನೇ! ಲೀಲಾಮಾನುಷ ವಿಗ್ರಹನಾದ ಭಗವಾನ್ ಶ್ರೀಕೃಷ್ಣನ ಮತ್ತೊಂದು ಅದ್ಭುತವಾದ ಚರಿತ್ರೆಯನ್ನು ಹೇಳುವೆನು; ಕೇಳು. ಇದರಲ್ಲಿ ಸೌಭವೆಂಬ ವಿಮಾನಕ್ಕೆ ಒಡೆಯನಾದ ಶಾಲ್ವನು ಶ್ರೀಕೃಷ್ಣನಿಂದ ಹೇಗೆ ಹತನಾದನೆಂಬುದನ್ನು ಹೇಳಲಾಗುವುದು. ॥ ೧ ॥ ಶಾಲ್ವನು ಶಿಶುಪಾಲನ ಸ್ನೇಹಿತನಾಗಿದ್ದು, ರುಕ್ಮಿಣಿಯ ವಿವಾಹದ ಸಂದರ್ಭದಲ್ಲಿ ಶಿಶುಪಾಲನ ದಿಬ್ಬಣದೊಂದಿಗೆ ಇವನೂ ಬಂದಿದ್ದನು. ಆ ಸಮಯದಲ್ಲಿ ಯಾದವವೀರರು ಯುದ್ಧದಲ್ಲಿ ಜರಾಸಂಧರೇ ಮೊದಲಾದವರೊಂದಿಗೆ ಶಾಲ್ವನನ್ನು ಗೆದ್ದುಕೊಂಡಿದ್ದರು. ॥ ೨ ॥ ಆ ದಿನ ಎಲ್ಲ ರಾಜರ ಮುಂದೆ ಶಾಲ್ವನು ಹೀಗೆ ಪ್ರತಿಜ್ಞೆಮಾಡಿದ್ದನು 'ನಾನು ಈ ಭೂಮಂಡಲವನ್ನು ಯಾದವರಿಂದ ರಹಿತವನ್ನಾಗಿಸಿ ಬಿಡುತ್ತೇನೆ. ಅಂತಹ ನನ್ನ ಪೌರುಷವನ್ನು ನೀವು ನೋಡವಿರಂತೆ.' ॥ ೩ ॥ ಪರೀಕ್ಷಿತನೇ! ಮೂರ್ಖನಾದ ಶಾಲ್ವನು ಹೀಗೆ ಪ್ರತಿಜ್ಞೆಮಾಡಿ ದೇವಾಧಿದೇವನಾದ ಭಗವಾನ್ ಪಶುಪತಿಯ ಆರಾಧನೆಯನ್ನು ಪ್ರಾರಂಭಿಸಿದನು. ಅವನು ದಿನಕ್ಕೆ ಒಂದು ಮುಷ್ಟಿಯಷ್ಟು ಬೂದಿಯನ್ನು ಮಾತ್ರ ಸೇವಿಸುತ್ತಿದ್ದನು. ॥ ೪ ॥ ಉಮಾಪತಿಯಾದ ಶಿವನು ಬಹಳ ಬೇಗ ಸಂತುಷ್ಟನಾಗುವವನಾದರೂ ಶಾಲ್ವನ ಮನಸ್ಸಿನಲ್ಲಿದ್ದ ದುರಭಿಪ್ರಾಯವನ್ನು ಗ್ರಹಿಸಿ ಒಂದು ವರ್ಷದ ಮೇಲೆಯೇ ಪ್ರಸನ್ನನಾಗಿ ಶರಣಾಗತನಾದ ಶಾಲ್ವನಿಗೆ ವರವನ್ನು ಕೇಳಿಕೊಳ್ಳುವಂತೆ ಅನುಗ್ರಹಿಸಿದನು. ॥ ೫ ॥ ಆಗ ಶಾಲ್ವನು – ದೇವಾಸುರ-ಮನುಷ್ಯರಿಂದಲೂ, ಗಂಧರ್ವೋರಗ ರಾಕ್ಷಸರಿಂದಲೂ ಭೇದಿಸಲಾಗದ, ಇಚ್ಛೆಬಂದಡೆಗೆ ಹೋಗುವ, ವೃಷ್ಣಿವಂಶದವರಿಗೆ ಭಯವನ್ನುಂಟುಮಾಡುವ ವಿಮಾನವೊಂದನ್ನು ದಯಪಾಲಿಸುವಂತೆ ಪರಶಿವನಲ್ಲಿ ಕೇಳಿಕೊಂಡನು. ॥ ೬ ॥ ಹಾಗೆಯೇ ಆಗಲೆಂದು ಹೇಳಿ ಭಗವಾನ್ ಶಂಕರನು ಅಂತಹ ಅಪೂರ್ವವಾದ ವಿಮಾನವೊಂದನ್ನು ನಿರ್ಮಿಸಿಕೊಡುವಂತೆ ದಾನವ ಶಿಲ್ಪಿಯಾದ ಮಯಾಸುರನಿಗೆ ಆಜ್ಞಾಪಿಸಿದನು. ಶತ್ರು ಪಟ್ಟಣವನ್ನು ಜಯಿಸುವ ಸಾಮರ್ಥ್ಯವುಳ್ಳ ಮಯಾಸುರನು ಶಿವನ ಆಜ್ಞೆಯಂತೆ ಲೋಹಮಯವಾದ ಸೌಭವೆಂಬ ವಿಮಾನವನ್ನು ನಿರ್ಮಿಸಿ ಶಾಲ್ವನಿಗೆ ಕೊಟ್ಟನು. ॥ ೭ ॥ ಅದ್ಭುತವಾದ ನಗರದಂತೆ ಇದ್ದ ಆ ವಿಮಾನವು ಅಂಧಕಾರಮಯವಾಗಿತ್ತು. ಯಾರ ಕಣ್ಣಿಗೂ ಕಾಣಿಸುತ್ತಿರಲಿಲ್ಲ, ಆದುದರಿಂದ ಅದನ್ನು ಯಾರಿಂದಲೂ ಹಿಡಿಯಲಾಗುತ್ತಿರಲಿಲ್ಲ. ಅದು ನಡೆಸುವವನ ಇಚ್ಛೆಬಂದಲ್ಲಿಗೆ ಹೋಗುವ ಸಾಮರ್ಥ್ಯ ಹೊಂದಿತ್ತು. ಶಾಲ್ವನು ವೃಷ್ಣಿಗಳೊಡನೆ ಅಥವಾ ಶ್ರೀಕೃಷ್ಣನೊಡನೆ ತನಗಿದ್ದ ವೈರವನ್ನು ಪದೇ-ಪದೇ ಸ್ಮರಿಸಿಕೊಳ್ಳುತ್ತಾ ಸೌಭವಿಮಾನಾರೂಢನಾಗಿ ಸೈನ್ಯಸಮೇತನಾಗಿ ದ್ವಾರಕೆಯನ್ನು ಮುತ್ತಿದನು. ॥ ೮ ॥

ನಿರುದ್ಧ್ಯ ಸೇನಯಾ ಶಾಲ್ವೋ ಮಹತ್ಯಾ ಭರತರ್ಷಭ ।
ಪುರೀಂ ಬಭಂಜೋಪವನಾನ್ಯುದ್ಯಾನಾನಿ ಚ ಸರ್ವಶಃ ॥ ೯ ॥

ಸಗೋಪುರಾಣಿ ದ್ವಾರಾಣಿ ಪ್ರಾಸಾದಾಟ್ಟಾಲತೋಲಿಕಾಃ ।
ವಿಹಾರಾನ್ಸ ವಿಮಾನಾಗ್ರ್ಯಾನ್ನಿಪೇತುಃ ಶಸ್ತ್ರವೃಷ್ಟಯಃ ॥ ೧೦ ॥

ಶಿಲಾ ದ್ರುಮಾಶ್ಚಾಶನಯಃ ಸರ್ಪಾ ಆಸಾರಶರ್ಕರಾಃ ।
ಪ್ರಚಂಡಶ್ಚಕ್ರವಾತೋಽಭೂದ್ರಜಸಾಽಽಚ್ಛಾದಿತಾ ದಿಶಃ ॥ ೧೧ ॥

ಇತ್ಯರ್ದ್ಯಮಾನಾ ಸೌಭೇನ ಕೃಷ್ಣಸ್ಯ ನಗರೀ ಭೃಶಮ್ ।
ನಾಭ್ಯಪದ್ಯತ ಶಂ ರಾಜಂಸ್ತ್ರಿಪುರೇಣ ಯಥಾ ಮಹೀ ॥ ೧೨ ॥

ಪ್ರದ್ಯುಮ್ನೋ ಭಗವಾನ್ ವೀಕ್ಷ್ಯ ಬಾಧ್ಯಮಾನಾ ನಿಜಾಃ ಪ್ರಜಾಃ ।
ಮಾ ಭೈಷ್ಟೇತ್ಯಭ್ಯಧಾದ್ವೀರೋ ರಥಾರೂಢೋ ಮಹಾಯಶಾಃ ॥ ೧೩ ॥

ಸಾತ್ಯಕಿಶ್ಚಾರುದೇಷ್ಣಶ್ಚ ಸಾಂಬೋಽಕ್ರೂರಃ ಸಹಾನುಜಃ ।
ಹಾರ್ದಿಕ್ಯೋ ಭಾನುವಿಂದಶ್ಚ ಗದಶ್ಚ ಶುಕಸಾರಣೌ ॥ ೧೪ ॥

ಅಪರೇ ಚ ಮಹೇಷ್ವಾಸಾ ರಥಯೂಥಪಯೂಥಪಾಃ ।
ನಿರ್ಯಯುರ್ದಂಶಿತಾ ಗುಪ್ತಾ ರಥೇಭಾಶ್ವಪದಾತಿಭಿಃ ॥ ೧೫ ॥

ತತಃ ಪ್ರವವೃತೇ ಯುದ್ಧಂ ಶಾಲ್ವಾನಾಂ ಯದುಭಿಃ ಸಹ ।
ಯಥಾಸುರಾಣಾಂ ವಿಬುಧೈಸ್ತುಮುಲಂ ಲೋಮಹರ್ಷಣಮ್ ॥ ೧೬ ॥

ತಾಶ್ಚ ಸೌಭಪತೇರ್ಮಾಯಾ ದಿವ್ಯಾಸ್ತ್ರೈ ರುಕ್ಮಿಣೀಸುತಃ ।
ಕ್ಷಣೇನ ನಾಶಯಾಮಾಸ ನೈಶಂ ತಮ ಇವೋಷ್ಣಗುಃ ॥ ೧೭ ॥

ವಿವ್ಯಾಧ ಪಂಚವಿಂಶತ್ಯಾ ಸ್ವರ್ಣಪುಂಖೈರಯೋಮುಖೈಃ ।
ಶಾಲ್ವಸ್ಯ ಧ್ವಜಿನೀಪಾಲಂ ಶರೈಃ ಸನ್ನತಪರ್ವಭಿಃ ॥ ೧೮ ॥

ಶತೇನಾತಾಡಯಚ್ಛಾಲ್ವಮೇಕೈಕೇನಾಸ್ಯ ಸೈನಿಕಾನ್ ।
ದಶಭಿರ್ದಶಭಿರ್ನೇತೄನ್ ವಾಹನಾನಿ ತ್ರಿಭಿಸ್ತ್ರಿಭಿಃ ॥ ೧೯ ॥

ತದದ್ಭುತಂ ಮಹತ್ಕರ್ಮ ಪ್ರದ್ಯುಮ್ನಸ್ಯ ಮಹಾತ್ಮನಃ ।
ದೃಷ್ಟ್ವಾ ತಂ ಪೂಜಯಾಮಾಸುಃ ಸರ್ವೇ ಸ್ವಪರಸೈನಿಕಾಃ ॥ ೨೦ ॥

ಪರೀಕ್ಷಿತನೇ ! ಸೇನಾಸಮೇತನಾಗಿದ್ದ ಶಾಲ್ವನು ದ್ವಾರಕೆಯನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿಗೆ ಹಾಕಿ, ಫಲ-ಪುಷ್ಪಗಳಿಂದ ತುಂಬಿದ್ದ ಉಪವನಗಳನ್ನು, ಉದ್ಯಾನಗಳನ್ನು, ಧ್ವಂಸಮಾಡಿದನು. ಹಾಗೆಯೇ ನಗರದ್ವಾರಗಳನ್ನು, ಪ್ರಕಾರಗಳನ್ನು, ಉಪ್ಪರಿಗೆಯ ಸೌಧಗಳನ್ನು, ರಾಜಭವನಗಳನ್ನು, ಕ್ರೀಡಾಸ್ಥಳಗಳನ್ನು ನಾಶಮಾಡ ತೊಡಗಿದನು. ಶಾಲ್ವನು ಸೌಭವಿಮಾನದ ಅಗ್ರಭಾಗದಿಂದ ಶಸ್ತ್ರಾಸ್ತ್ರಗಳ ಮಳೆಯನ್ನೇ ಸುರಿಸಿದನು. ॥ ೯-೧೦ ॥ ಅಷ್ಟೇ ಅಲ್ಲದೆ ಆ ವಿಮಾನದಿಂದ ದೊಡ್ಡ-ದೊಡ್ಡ ಬಂಡೆಗಳು, ಮರಗಳು ಸರ್ಪಗಳ ವೃಷ್ಟಿಯೇ ಆಗುತ್ತಿತ್ತು. ಸಿಡಿಲು ಬಡಿದು, ಆಲಿಕಲ್ಲಿನ ಮಳೆಗರೆಯುತ್ತಿತ್ತು. ಪ್ರಚಂಡವಾದ ಸುಂಟರಗಾಳಿ ಎದ್ದು ದ್ವಾರಕೆಯ ಎಲ್ಲೆಡೆ ಧೂಳನ್ನು ತುಂಬಿಬಿಟ್ಟಿತ್ತು. ॥ ೧೧ ॥ ಪರೀಕ್ಷಿತನೇ! ಹಿಂದೆ ತ್ರಿಪುರಾಸುರನಿಂದ ಭೂಮಿಯು ಕ್ಷೋಭೆಗೊಂಡಂತೆ ಶಾಲ್ವನ ವಿಮಾನದಿಂದ ಪೀಡಿಸಲ್ಪಡುತ್ತಿದ್ದ ಶ್ರೀಕೃಷ್ಣನ ದ್ವಾರಕಾಪಟ್ಟಣವು ಆಗ ಸ್ವಲ್ಪವಾದರೂ ಸುಖವನ್ನು ಕಾಣದೆ, ಪ್ರಜೆಗಳು ತತ್ತರಿಸಿ ಹೋದರು. ॥ ೧೨ ॥ (ಆ ಸಮಯದಲ್ಲಿ ಶ್ರೀಕೃಷ್ಣನೂ ದ್ವಾರಕೆಯಲ್ಲಿರಲಿಲ್ಲ) ಆಗ ಶ್ರೀಕೃಷ್ಣನ ಮಗನಾದ ಪರಮಯಶಸ್ವೀ ವೀರಪ್ರದ್ಯುಮ್ನನು - ತಮ್ಮ ಪ್ರಜೆಗಳೆಲ್ಲರೂ ಕಷ್ಟಪಡುತ್ತಿರುವುದನ್ನು ಕಂಡು - 'ಹೆದರಬೇಡಿರಿ' ಎಂದು ಅವರಿಗೆ ಧೈರ್ಯತುಂಬಿ ರಥಾರೂಢನಾಗಿ ಯುದ್ಧಕ್ಕೆ ಹೊರಟೇ ಬಿಟ್ಟನು. ॥ ೧೩ ॥ ಅವನನ್ನು ಅನುಸರಿಸುತ್ತಾ ಸಾತ್ಯಕಿ, ಚಾರುದೇಷ್ಣ ಸಾಂಬ, ತಮ್ಮಂದಿರೊಡನೆ ಅಕ್ರೂರ, ಕೃತವರ್ಮ, ಭಾನುವಿಂದ, ಗದ, ಶುಕ, ಸಾರಣ ಮೊದಲಾದ ಮಹಾರಥಿಗಳಾದ ಅನೇಕ ಮಹಾ-ಮಹಾವೀರರು ಕವಚಗಳನ್ನು ತೊಟ್ಟು, ಧನುಷ್ಪಾಣಿಯಾಗಿ ಹೊರಟರು. ಅವರೊಂದಿಗೆ ಅಸಂಖ್ಯಾತ ರಥ, ಗಜ, ಅಶ್ವ ಮತ್ತು ಪದಾತಿಗಳೆಂಬ ಚತುರಂಗ ಸೇನೆಯು ಹೊರಟಿತು. ॥ ೧೪-೧೫ ॥ ಹಿಂದಿನ ಕಾಲದಲ್ಲಿ ದೇವತೆಗಳೊಂದಿಗೆ ಅಸುರರ ತುಮುಲಯುದ್ಧವಾದಂತೆಯೇ ಶಾಲ್ವನ ಸೈನಿಕರೊಡನೆ ಯಾದವವೀರರ ಯುದ್ಧವು ಪ್ರಾರಂಭಗೊಂಡಿತು. ಆ ಅದ್ಭುತಯುದ್ಧವನ್ನು ನೋಡಿದವರ ರೋಮಗಳು ನಿಮಿರಿ ನಿಂತಿರುತ್ತಿದ್ದುವು. ॥ ೧೬ ॥ ಸೂರ್ಯನು ತನ್ನ ಪ್ರಖರವಾದ ಕಿರಣಗಳಿಂದ ಕತ್ತಲೆಯನ್ನು ಅಳಿಸಿಹಾಕುವಂತೆ ವೀರವರನಾದ ಪ್ರದ್ಯುಮ್ನನು ತನ್ನ ದಿವ್ಯ ಅಸ್ತ್ರಗಳಿಂದ ಕ್ಷಣದಲ್ಲಿ ಸೌಭಪತಿ ಶಾಲ್ವನ ಮಾಯೆಯೆಯಲ್ಲವನ್ನೂ ಕತ್ತರಿಸಿ ಹಾಕಿದನು. ॥ ೧೭ ॥ ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿದ ಲೋಹದ ಅಗ್ರಭಾಗವುಳ್ಳ ಇಪ್ಪತ್ತೈದು ಬಾಣಗಳಿಂದ ಪ್ರದ್ಯುಮ್ನನು ಶಾಲ್ವನ ಸೇನಾಪತಿಯನ್ನು ಘಾಸಿಗೊಳಿಸಿದನು. ॥ ೧೮ ॥ ಮಹಾವೀರನಾದ ಪ್ರದ್ಯುಮ್ನನು ಪುನಃ ಶಾಲ್ವನನ್ನು ನೂರು ಬಾಣಗಳಿಂದಲೂ, ಒಬ್ಬೊಬ್ಬ ಸೈನಿಕರನ್ನು ಒಂದೊಂದು ಬಾಣದಿಂದಲೂ ಸಾರಥಿಗಳನ್ನು ಹತ್ತತ್ತು ಬಾಣಗಳಿಂದಲೂ, ವಾಹನಗಳನ್ನು ಮೂರು-ಮೂರು ಬಾಣಗಳಿಂದ ಪ್ರಹರಿಸಿ ಗಾಯಗೊಳಿಸಿದನು. ॥ ೧೯ ॥ ಮಹಾತ್ಮನಾದ ಪ್ರದ್ಯುಮ್ನನ ಈ ಮಹತ್ಕಾರ್ಯವನ್ನು ಕಂಡು ಅವನ ಕಡೆಯ ಸೈನಿಕರು ಮತ್ತು ಶತ್ರು ಪಕ್ಷದ ಸೈನಿಕರೂ ಕೂಡ ಅವನನ್ನು ಬಹಳವಾಗಿ ಪ್ರಶಂಸಿಸಿದರು. ॥ ೨೦ ॥

ಬಹುರೂಪೈಕರೂಪಂ ತದ್ದೃಶ್ಯತೇ ನ ಚ ದೃಶ್ಯತೇ ।
ಮಾಯಾಮಯಂ ಮಯಕೃತಂ ದುರ್ವಿಭಾವ್ಯಂ ಪರೈರಭೂತ್ ॥ ೨೧ ॥

ಕ್ವಚಿದ್ಭೂಮೌ ಕ್ವಚಿದ್ವ್ಯೋಮ್ನಿ ಗಿರಿಮೂರ್ಧ್ನಿ ಜಲೇ ಕ್ವಚಿತ್ ।
ಅಲಾತಚಕ್ರವದ್ಭ್ರಾಮ್ಯತ್ಸೌಭಂ ತದ್ದುರವಸ್ಥಿತಮ್ ॥ ೨೨ ॥

ಯತ್ರ ಯತ್ರೋಪಲಕ್ಷ್ಯೇತ ಸಸೌಭಃ ಸಹಸೈನಿಕಃ ।
ಶಾಲ್ವಸ್ತತಸ್ತತೋಽಮುಂಚನ್ ಶರಾನ್ಸಾತ್ವತಯೂಥಪಾಃ ॥ ೨೩ ॥

ಶರೈರಗ್ನ್ಯರ್ಕಸಂಸ್ಪರ್ಶೈರಾಶೀವಿಷದುರಾಸದೈಃ ।
ಪೀಡ್ಯಮಾನಪುರಾನೀಕಃ ಶಾಲ್ವೋಽಮುಹ್ಯತ್ಪರೇರಿತೈಃ ॥ ೨೪ ॥

ಶಾಲ್ವಾನೀಕಪಶಸ್ತ್ರೌಘೈರ್ವೃಷ್ಣಿವೀರಾ ಭೃಶಾರ್ದಿತಾಃ ।
ನ ತತ್ಯಜೂ ರಣಂ ಸ್ವಂ ಸ್ವಂ ಲೋಕದ್ವಯಜಿಗೀಷವಃ ॥ ೨೫ ॥

ಶಾಲ್ವಾಮಾತ್ಯೋ ದ್ಯುಮಾನ್ನಾಮ ಪ್ರದ್ಯುಮ್ನಂ ಪ್ರಾಕ್ಪ್ರಪೀಡಿತಃ ।
ಆಸಾದ್ಯ ಗದಯಾ ಮೌರ್ವ್ಯಾ ವ್ಯಾಹತ್ಯ ವ್ಯನದದ್ಬಲೀ ॥ ೨೬ ॥

ಪ್ರದ್ಯುಮ್ನಂ ಗದಯಾ ಶೀರ್ಣವಕ್ಷಃಸ್ಥಲಮರಿಂದಮಮ್ ।
ಅಪೋವಾಹ ರಣಾತ್ಸೂತೋ ಧರ್ಮವಿದ್ದಾರುಕಾತ್ಮಜಃ ॥ ೨೭ ॥

ಲಬ್ಧಸಂಜ್ಞೋ ಮುಹೂರ್ತೇನ ಕಾರ್ಷ್ಣಿಃ ಸಾರಥಿಮಬ್ರವೀತ್ ।
ಅಹೋ ಅಸಾಧ್ವಿದಂ ಸೂತ ಯದ್ರಣಾನ್ಮೇಽಪಸರ್ಪಣಮ್ ॥ ೨೮ ॥

ನ ಯದೂನಾಂ ಕುಲೇ ಜಾತಃ ಶ್ರೂಯತೇ ರಣವಿಚ್ಯುತಃ ।
ವಿನಾ ಮತ್ಕ್ಲೀಬಚಿತ್ತೇನ ಸೂತೇನ ಪ್ರಾಪ್ತಕಿಲ್ಬಿಷಾತ್ ॥ ೨೯ ॥

ಪರೀಕ್ಷಿತನೇ! ಮಾಯಾಸುರನಿಂದ ನಿರ್ಮಿಸಲ್ಪಟ್ಟ ಸೌಭ ವಿಮಾನವು ಅತ್ಯಂತ ಮಾಯಾಮಯವಾಗಿತ್ತು. ಕೆಲವೊಮ್ಮೆ ಅನೇಕ ರೂಪದಿಂದ ಕಂಡುಬಂದರೆ, ಕೆಲವೊಮ್ಮೆ ಒಂದೇಯಾಗಿ ತೋರುತ್ತಿತ್ತು. ಕೆಲವೊಮ್ಮೆ ಕಣ್ಮರೆಯಾಗುತ್ತಿತ್ತು. ಯದುವೀರರಿಗೆ ಆ ವಿಮಾನವು ಎಲ್ಲಿದೆ? ಯಾವಾಗ ಬರುತ್ತಿದೆ? ಎಂಬುದೇ ತಿಳಿಯುತ್ತಿರಲಿಲ್ಲ. ॥ ೨೧ ॥ ಅದು ಕೆಲವೊಮ್ಮೆ ಭೂಮಿಯಲ್ಲಿ ಸಂಚರಿಸಿದರೆ, ಕೆಲವೊಮ್ಮೆ ಆಕಾಶದಲ್ಲಿ ಹಾರುತ್ತಿತ್ತು. ಕೆಲವೊಮ್ಮೆ ಪರ್ವತಾಗ್ರದಲ್ಲಿ ಕಂಡುಬಂದರೆ, ಕೆಲವೊಮ್ಮೆ ನೀರಿನ ಮೇಲೆ ತೇಲುತ್ತಿತ್ತು. ಆ ಸೌಭವಿಮಾನವು ಕೊಳ್ಳಿಯ ಚಕ್ರದಂತೆ ಎಲ್ಲೆಂದರಲ್ಲಿ ಸಂಚರಿಸುತ್ತಾ ನಿಂತಲ್ಲಿ ನಿಲ್ಲದೆ ಯದುವೀರರಿಗೆ ಭ್ರಾಂತಿಯನ್ನು ಉಂಟುಮಾಡುತ್ತಿತ್ತು. ॥ ೨೨ ॥ ಶಾಲ್ವನು ಸೈನಿಕರೊಡನೆ ಮತ್ತು ತನ್ನ ವಿಮಾನದೊಡನೆ ಕಂಡಬಂದಲ್ಲೆಲ್ಲ ಯಾದವ ಸೇನಾಪತಿಗಳು ಬಾಣಗಳ ಮಳೆಯನ್ನೇ ಸುರಿಸುತ್ತಿದ್ದರು. ॥ ೨೩ ॥ ಅವರ ಬಾಣಗಳು ಸೂರ್ಯ, ಅಗ್ನಿಗಳಂತೆ ಉರಿಯುತ್ತಾ ಪ್ರಖರವಾಗಿದ್ದು, ವಿಷಸರ್ಪಗಳಂತೆ ತಡೆದುಕೊಳ್ಳಲು ಅಸಾಧ್ಯವಾಗಿದ್ದವು. ಅವುಗಳಿಂದ ಶಾಲ್ವನ ನಗರಾಕಾರವಾದ ವಿಮಾನ ಮತ್ತು ಸೈನ್ಯವು ಅತ್ಯಂತ ಪೀಡಿತವಾಯಿತು. ಕೊನೆಗೆ ಯಾದವರ ಬಾಣಗಳಿಂದ ಶಾಲ್ವನೂ ಮೂರ್ಛೆಗೊಂಡನು. ॥ ೨೪ ॥

ಪರೀಕ್ಷಿತನೇ! ಶಾಲ್ವನ ಸೇನಾಪತಿಗಳೂ ಯಾದವ ಸೈನ್ಯದ ಮೇಲೆ ಶಸ್ತ್ರಾಸ್ತ್ರಗಳನ್ನು ಮಳೆಗರೆದರು. ಇದರಿಂದ ಯಾದವ ಸೈನಿಕರು ಬಹಳ ಗಾಯಗೊಂಡರು. ಆದರೂ 'ಜಯಿಸಿದರೆ ಭೋಗ, ಸತ್ತರೆ ಸ್ವರ್ಗ' ಎಂದು ಯೋಚಿಸುತ್ತಾ ಅವರು ರಣಭೂಮಿಯನ್ನು ಬಿಟ್ಟು ಹೋಗಲಿಲ್ಲ. ॥ ೨೫ ॥ ಪರೀಕ್ಷಿದ್ರಾಜನೇ! ಶಾಲ್ವನ ದ್ಯುಮಂತನೆಂಬ ಮಂತ್ರಿಯು ಈ ಹಿಂದೆ ಪ್ರದ್ಯುಮ್ನನು ಪ್ರಯೋಗಿಸಿದ ಇಪ್ಪತ್ತೈದು ಬಾಣಗಳಿಂದ ಬಹಳ ಗಾಯಗೊಂಡಿದ್ದನು. ಸ್ವಲ್ಪ ಚೇತರಿಸಿಕೊಂಡು; ಪುನಃ ಪ್ರದ್ಯುಮ್ನನೊಡನೆ ಯುದ್ಧಮಾಡಲು ಬಂದು ಮಹಾಬಲಿಷ್ಠನಾದ ದ್ಯುಮಂತನು ಕಬ್ಬಿಣದ ಗದೆಯಿಂದ ಪ್ರದ್ಯುಮ್ನನನ್ನು ರಭಸದಿಂದ ಪ್ರಹರಿಸಿ ಗಟ್ಟಿಯಾಗಿ ಗರ್ಜಿಸಿದನು. ॥ ೨೬ ॥ ಪರೀಕ್ಷಿತನೇ! ದ್ಯುಮಂತನ ಗದಾಪ್ರಹಾರದಿಂದ ಪ್ರದ್ಯುಮ್ನನ ಎದೆ ಒಡೆದಂತಾಗಿ ಮೂರ್ಛಿತನಾದನು. ಅವನ ರಥವನ್ನು ನಡೆಸುತ್ತಿದ್ದ ದಾರುಕನ ಪುತ್ರನು ಸಾರಥಿಯ ಧರ್ಮಕ್ಕನುಸಾರ ಅವನನ್ನು ರಣಭೂಮಿಯಿಂದ ಹೊರಕ್ಕೆ ಕೊಂಡೊಯ್ದನು. ॥ ೨೭ ॥ ಮುಹೂರ್ತಕಾಲವು ಕಳೆದನಂತರ ಪ್ರದ್ಯುಮ್ನನಿಗೆ ಮೂರ್ಛೆಯ ತಿಳಿಯಿತು. ಆಗ ಅವನು ಸಾರಥಿಗೆ ಹೇಳಿದನು ಸಾರಥಿಯೇ! ನನ್ನನ್ನು ರಣರಂಗದಿಂದ ಹಿಂದಕ್ಕೆ ಕರೆತಂದು ಬಹಳ ತಪ್ಪು ಕೆಲಸವನ್ನು ಮಾಡಿಬಿಟ್ಟಿರುವೆ. ನೀನು ಹೀಗೆ ಮಾಡಬಾರದಾಗಿತ್ತು. ॥ ೨೮ ॥ ಸೂತನೇ! ನಮ್ಮ ವಂಶದಲ್ಲಿ ಯಾವನೇ ವೀರನು ರಣರಂಗದಿಂದ ಪಲಾಯನಮಾಡಿದನೆಂಬುದು ನಾನು ಇದೂವರೆಗೂ ಕೇಳಿಯೇ ಇಲ್ಲ. ಹೇಡಿಯಾದ ಸಾರಥಿಯಿಂದಾಗಿ ನಾನೊಬ್ಬನು ಇಂತಹ ಕಳಂಕಕ್ಕೆ ಗುರಿಯಾಗಬೇಕಾಯಿತಲ್ಲ! ॥ ೨೯ ॥

ಕಿಂ ನು ವಕ್ಷ್ಯೇಽಭಿಸಂಗಮ್ಯ ಪಿತರೌ ರಾಮಕೇಶವೌ ।
ಯುದ್ಧಾತ್ಸಮ್ಯಗಪಕ್ರಾಂತಃ ಪೃಷ್ಟಸ್ತತ್ರಾತ್ಮನಃ ಕ್ಷಮಮ್ ॥ ೩೦ ॥

ಈಗ ನಾನು ದೊಡ್ಡಪ್ಪನಾದ ಬಲರಾಮನ ಮತ್ತು ತಂದೆಯಾದ ಶ್ರೀಕೃಷ್ಣನ ಮುಂದೆ ಹೋಗಿ ಏನು ಹೇಳಲಿ? ಈಗಲಾದರೋ ಎಲ್ಲ ಜನರು 'ನಾನು ಯುದ್ಧದಿಂದ ಓಡಿ ಹೋದೆ' ಎಂದೇ ಹೇಳುವರು. ಅವರು ಪ್ರಶ್ನಿಸಿದಾಗ ನನ್ನ ಶೌರ್ಯ-ಸಾಹಸಗಳಿಗೆ ಅನುರೂಪವಾದ ಯಾವ ಉತ್ತರವನ್ನು ಕೊಡಲಿ? ॥ ೩೦ ॥

ವ್ಯಕ್ತಂ ಮೇ ಕಥಯಿಷ್ಯಂತಿ ಹಸಂತ್ಯೋ ಭ್ರಾತೃಜಾಮಯಃ ।
ಕ್ಲೈಬ್ಯಂ ಕಥಂ ಕಥಂ ವೀರ ತವಾನ್ಯೈಃ ಕಥ್ಯತಾಂ ಮೃಧೇ ॥ ೩೧ ॥

ನನ್ನ ಅತ್ತಿಗೆ-ನಾದಿನಿಯರು ನನ್ನ ಹೇಡಿತನವನ್ನು ಹಂಗಿಸುತ್ತಾ, ಗಹ-ಗಹಿಸಿ ನಗುತ್ತಾ 'ವೀರಶೂರನೇ! ನೀನು ನಪುಂಸಕ ಹೇಗಾದೆ? ನೀನು ಶತ್ರುಗಳೊಡನೆ ರಣರಂಗದಲ್ಲಿ ಹೇಗೆ ಯುದ್ಧ ಮಾಡಿದೆ? ವಿವರಿಸಿ ಹೇಳು' ಎಂದು ಕೇಳಿದರೆ ನಾನೇನು ಉತ್ತರಿಸಲಿ? ॥ ೩೧ ॥

ಸಾರಥಿರುವಾಚ

ಧರ್ಮಂ ವಿಜಾನತಾಽಽಯುಷ್ಮನ್ ಕೃತಮೇತನ್ಮಯಾ ವಿಭೋ ।
ಸೂತಃ ಕೃಚ್ಛ್ರಗತಂ ರಕ್ಷೇದ್ರಥಿನಂ ಸಾರಥಿಂ ರಥೀ ॥ ೩೨ ॥

**ಸಾರಥಿಯು ಹೇಳಿದನು** - ಆಯುಷ್ಮಂತನೇ! ನಾನು ಸಾರಥಿಯ ಧರ್ಮವನ್ನು ಅರಿತುಕೊಂಡೇ ಮಾಡಿರುವೆನು. ಒಡೆಯಾ! ಪ್ರಾಣಾಪತ್ತಿನಲ್ಲಿ ಸಿಕ್ಕಿಬಿದ್ದಿರುವಾಗ ಸಾರಥಿಯು ರಥಿಕನನ್ನು ರಕ್ಷಿಸಬೇಕು. ಹಾಗೆಯೇ ಸಾರಥಿಯನ್ನು ಕಾಪಾಡಬೇಕು ಎಂಬುದು ಯುದ್ಧದ ಧರ್ಮವಾಗಿದೆಯಲ್ಲ! ॥ ೩೨ ॥ ಈ ಧರ್ಮವನ್ನು ತಿಳಿದುಕೊಂಡೇ ನಾನು ನಿಮ್ಮನ್ನು ರಣರಂಗದಿಂದ ಕರೆ ತಂದಿರುವೆನು. ಶತ್ರುವು ನಿಮ್ಮ ಮೇಲೆ ಗದಾ ಪ್ರಹಾರಮಾಡಿದಾಗ ನೀವು ಮೂರ್ಛಿತರಾದಿರಿ. ದೊಡ್ಡ ಆಪತ್ತಿನಲ್ಲಿ ಸಿಲುಕಿದಿರಿ. ಅದರಿಂದಾಗಿ ನಾನು ಹೀಗೆ ಮಾಡಬೇಕಾಯಿತು. (ಸೂತನ ಮಾತನ್ನು ಕೇಳಿ ಪ್ರದ್ಯುಮ್ನನಿಗೂ ಸಮಾಧಾನವಾಯಿತು.) ॥ ೩೩ ॥

ಏತದ್ವಿದಿತ್ವಾ ತು ಭವಾನ್ ಮಯಾಪೋವಾಹಿತೋ ರಣಾತ್ ।
ಉಪಸೃಷ್ಟಃ ಪರೇಣೇತಿ ಮೂರ್ಛಿತೋ ಗದಯಾ ಹತಃ ॥ ೩೩ ॥

ಎಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೭೬ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ಶಾಲ್ವಯುದ್ಧೇ ಷಟ್ ಸಪ್ತತಿತಮೋಽಧ್ಯಾಯಃ ॥ ೭೬ ॥

# ಎಪ್ಪತ್ತೇಳನೆಯ ಅಧ್ಯಾಯ

## ಶಾಲ್ವನ ಸಂಹಾರ

ಶ್ರೀಶುಕ ಉವಾಚ

ಸ ತೂಪಸ್ಪೃಶ್ಯ ಸಲಿಲಂ ದಂಶಿತೋ ಧೃತಕಾರ್ಮುಕಃ ।
ನಯ ಮಾಂ ದ್ಯುಮತಃ ಪಾರ್ಶ್ವಂ ವೀರಸ್ಯೇತ್ಯಾಹ ಸಾರಥಿಮ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತ ಮಹಾರಾಜನೇ! ಬಳಿಕ ಪ್ರದ್ಯುಮ್ನನು ಶುದ್ಧಾಚಮನವನ್ನು ಮಾಡಿ ಕವಚವನ್ನು ತೊಟ್ಟು ಧನುಸ್ಸನ್ನು ಧರಿಸಿ ಸಾರಥಿಗೆ ಹೇಳಿದನು ಶೀಘ್ರವಾಗಿ ನನ್ನನ್ನು ದ್ಯುಮಂತನ ಬಳಿಗೆ ಕರೆದೊಯ್ಯುವವನಾಗು. ॥ ೧ ॥ ಪ್ರದ್ಯುಮ್ನನ ಆಜ್ಞೆಯಂತೆ ಸಾರಥಿಯು ರಥವನ್ನು ದ್ಯುಮಂತನ ಬಳಿಗೆ ಒಯ್ದನು. ಆಗ ಅವನು ಯಾದವರ ಸೈನ್ಯವನ್ನು ಧ್ವಂಸಮಾಡುತ್ತಿದ್ದನು. ಪ್ರದ್ಯುಮ್ನನು ಅವನನ್ನು ತಡೆದು ಎಂಟು ಬಾಣಗಳಿಂದ ನಸುನಗುತ್ತಲೇ ಪ್ರಹರಿಸಿದನು. ॥ ೨ ॥ ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನು ಕೊಂದು, ಒಂದು ಬಾಣದಿಂದ ಸಾರಥಿಯನ್ನು, ಎರಡು ಬಾಣಗಳಿಂದ ಧನುಸ್ಸನ್ನು, ಧ್ವಜವನ್ನು ಕತ್ತರಿಸಿ, ಮತ್ತೊಂದು ಬಾಣದಿಂದ ದ್ಯುಮಂತನ ತಲೆಯನ್ನು ತರಿದನು. ॥ ೩ ॥

ವಿಧಮಂತಂ ಸ್ವಸೈನ್ಯಾನಿ ದ್ಯುಮಂತಂ ರುಕ್ಮಿಣೀಸುತಃ ।
ಪ್ರತಿಹತ್ಯ ಪ್ರತ್ಯವಿಧ್ಯನ್ನಾರಾಚೈರಷ್ಟಭಿಃ ಸ್ಮಯನ್ ॥ ೨ ॥

ಚತುರ್ಭಿಶ್ಚತುರೋ ವಾಹಾನ್ ಸೂತಮೇಕೇನ ಚಾಹನತ್ ।
ದ್ವಾಭ್ಯಾಂ ಧನುಶ್ಚ ಕೇತುಂ ಚ ಶರೇಣಾನ್ಯೇನ ವೈ ಶಿರಃ ॥ ೩ ॥

ಗದಸಾತ್ಯಕಿಸಾಂಬಾದ್ಯಾ ಜಘ್ನುಃ ಸೌಭಪತೇರ್ಬಲಮ್ ।
ಪೇತುಃ ಸಮುದ್ರೇ ಸೌಭೇಯಾಃ ಸರ್ವೇ ಸಂಭಿನ್ನಕಂಧರಾಃ
॥ ೪ ॥

ಏವಂ ಯದೂನಾಂ ಶಾಲ್ವಾನಾಂ ನಿಘ್ನತಾಮಿತರೇತರಮ್ ।
ಯುದ್ಧಂ ತ್ರಿಣವರಾತ್ರಂ ತದಭೂತ್ತುಮುಲಮುಲ್ಬಣಮ್
॥ ೫ ॥

ಇಂದ್ರಪ್ರಸ್ಥಂ ಗತಃ ಕೃಷ್ಣ ಆಹೂತೋ ಧರ್ಮಸೂನುನಾ ।
ರಾಜಸೂಯೇಽಥ ನಿರ್ವೃತ್ತೇ ಶಿಶುಪಾಲೇ ಚ ಸಂಸ್ಥಿತೇ
॥ ೬ ॥

ಕುರುವೃದ್ಧಾನನುಜ್ಞಾಪ್ಯ ಮುನೀಂಶ್ಚ ಸಸುತಾಂ ಪೃಥಾಮ್ ।
ನಿಮಿತ್ತಾನ್ಯತಿಘೋರಾಣಿ ಪಶ್ಯನ್ ದ್ವಾರವತೀಂ ಯಯೌ
॥ ೭ ॥

ಆಹ ಚಾಹಮಿಹಾಯಾತ ಆರ್ಯಮಿಶ್ರಾಭಿಸಂಗತಃ ।
ರಾಜನ್ಯಾಶ್ಚೈದ್ಯಪಕ್ಷೀಯಾ ನೂನಂ ಹನ್ಯುಃ ಪುರೀಂ ಮಮ
॥ ೮ ॥

ವೀಕ್ಷ್ಯ ತತ್ಕದನಂ ಸ್ವಾನಾಂ ನಿರೂಪ್ಯ ಪುರರಕ್ಷಣಮ್ ।
ಸೌಭಂ ಚ ಶಾಲ್ವರಾಜಂ ಚ ದಾರುಕಂ ಪ್ರಾಹ ಕೇಶವಃ
॥ ೯ ॥

ರಥಂ ಪ್ರಾಪಯ ಮೇ ಸೂತ ಶಾಲ್ವಸ್ಯಾಂತಿಕಮಾಶು ವೈ ।
ಸಂಭ್ರಮಸ್ತೇ ನ ಕರ್ತವ್ಯೋ ಮಾಯಾವೀ ಸೌಭರಾಡಯಮ್
॥ ೧೦ ॥

ಇತ್ಯುಕ್ತಶ್ಚೋದಯಾಮಾಸ ರಥಮಾಸ್ಥಾಯ ದಾರುಕಃ ।
ವಿಶಂತಂ ದದೃಶುಃ ಸರ್ವೇ ಸ್ವೇ ಪರೇ ಚಾರುಣಾನುಜಮ್
॥ ೧೧ ॥

ಶಾಲ್ವಶ್ಚ ಕೃಷ್ಣಮಾಲೋಕ್ಯ ಹತಪ್ರಾಯಬಲೇಶ್ವರಃ ।
ಪ್ರಾಹರತ್ ಕೃಷ್ಣಸೂತಾಯ ಶಕ್ತಿಂ ಭೀಮರವಾಂ ಮೃಧೇ
॥ ೧೨ ॥

ತಾಮಾಪತಂತೀಂ ನಭಸಿ ಮಹೋಲ್ಕಾಮಿವ ರಂಹಸಾ ।
ಭಾಸಯಂತೀಂ ದಿಶಃ ಶೌರಿಃ ಸಾಯಕೈಃ ಶತಧಾಚ್ಛಿನತ್
॥ ೧೩ ॥

ತಂ ಚ ಷೋಡಶಭಿರ್ವಿದ್ಧ್ವಾ ಬಾಣೈಃ ಸೌಭಂ ಚ ಖೇ ಭ್ರಮತ್ ।
ಅವಿಧ್ಯಚ್ಛರಸಂದೋಹೈಃ ಖಂ ಸೂರ್ಯ ಇವ ರಶ್ಮಿಭಿಃ
॥ ೧೪ ॥

ಶಾಲ್ವಃ ಶೌರೇಸ್ತು ದೋಃ ಸವ್ಯಂ ಸಶಾರ್ಙ್ಗಂ ಶಾರ್ಙ್ಗಧನ್ವನಃ ।
ಬಿಭೇದ ನ್ಯಪತದ್ಧಸ್ತಾತ್ ಶಾರ್ಙ್ಗಮಾಸೀತ್ತದದ್ಭುತಮ್
॥ ೧೫ ॥

ಇತ್ತ ಕಡೆ ಗದ, ಸಾತ್ಯಕಿ, ಸಾಂಬ ಮೊದಲಾದ ಯಾದವ ವೀರರೂ ಶಾಲ್ವನ ಸೇನೆಯನ್ನು ಸಂಹರಿಸಲು ತೊಡಗಿದರು, ಸೌಭ ವಿಮಾನದಲ್ಲಿದ್ದ ಸೈನಿಕರ ತಲೆಗಳು ತುಂಡಾಗಿ ಸಮುದ್ರಕ್ಕೆ ಬೀಳುತ್ತಿದ್ದವು. ॥ ೪ ॥ ಹೀಗೆ ಯದುವಂಶೀಯ ವೀರರಲ್ಲಿ ಮತ್ತು ಶಾಲ್ವನ ಸೈನಿಕರಲ್ಲಿ ಪರಸ್ಪರವಾಗಿ ಪ್ರಹರಿಸುತ್ತಾ ಇಪ್ಪತ್ತೇಳು ದಿನಗಳ ವರೆಗೆ ಅತ್ಯಂತ ಘೋರವಾದ ಮತ್ತು ಭಯಂಕರವಾದ ಯುದ್ಧವು ನಡೆಯಿತು. ॥ ೫ ॥

ಆ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನು ಧರ್ಮನಂದನನ ಕರೆಯಂತೆ ಇಂದ್ರಪ್ರಸ್ಥಕ್ಕೆ ಹೋಗಿದ್ದನು. ರಾಜಸೂಯಯಜ್ಞವೂ ಮುಗಿದಿತ್ತು. ಶಿಶುಪಾಲನ ವಧೆಯೂ ಆಗಿಹೋಗಿತ್ತು. ॥ ೬ ॥ ಅಲ್ಲಿ ಭಯಂಕರವಾದ ಅಪಶಕುನಗಳು ಆಗುತ್ತಿರುವುದನ್ನು ಕಂಡು ಭಗವಾನ್ ಶ್ರೀಕೃಷ್ಣನು ಕುರುವಂಶದ ಹಿರಿಯರಿಂದ, ಋಷಿ-ಮುನಿಗಳಿಂದ, ಕುಂತೀ ಮತ್ತು ಪಾಂಡವರಿಂದ ಅನುಮತಿ ಪಡೆದು ದ್ವಾರಕೆಗೆ ಪ್ರಯಾಣ ಮಾಡಿದನು. ॥ ೭ ॥ 'ನಾನು ಪೂಜ್ಯನಾದ ಅಣ್ಣ ಬಲರಾಮನೊಂದಿಗೆ ಇಂದ್ರಪ್ರಸ್ಥಕ್ಕೆ ಬಂದು ಬಿಟ್ಟೆ. ಈಗ ಶಿಶುಪಾಲನ ಪಕ್ಷಪಾತಿಗಳಾದ ಕ್ಷತ್ರಿಯರು ಅವಶ್ಯಕವಾಗಿ ದ್ವಾರಕೆಯ ಮೇಲೆ ಆಕ್ರಮಣ ಮಾಡಿರಬಹುದು' ಎಂದು ಮನಸ್ಸಿನಲ್ಲೇ ಅಂದುಕೊಂಡನು. ॥ ೮ ॥ ಭಗವಾನ್ ಶ್ರೀಕೃಷ್ಣನು ದ್ವಾರಕೆಗೆ ಬಂದು ನೋಡುತ್ತಾನೆ - ನಿಜವಾಗಿಯೂ ಯಾದವರ ಮೇಲೆ ದೊಡ್ಡ ಆಪತ್ತು ಬಂದೊದಗಿದೆ. ಆಗ ಬಲರಾಮನನ್ನು ದ್ವಾರಕೆಯ ರಕ್ಷಣೆಗಾಗಿ ನಿಯೋಜಿಸಿ, ಸೌಭಪತಿ ಶಾಲ್ವನನ್ನು ನೋಡಿ ತನ್ನ ಸಾರಥಿಯಾದ ದಾರುಕನಲ್ಲಿ ಹೇಳಿದನು - ॥ ೯ ॥ ದಾರುಕನೇ! ನೀನು ಅತಿ ಶೀಘ್ರವಾಗಿ ನನ್ನ ರಥವನ್ನು ಶಾಲ್ವನ ಬಳಿಗೆಕೊಂಡು ಹೋಗು. ನೋಡು, ಈ ಶಾಲ್ವನು ಮಹಾಮಾಯಾವಿಯಾಗಿದ್ದಾನೆ. ಆದರೂ ನೀನು ಸ್ವಲ್ಪವೂ ಭಯಪಡಬೇಡ. ॥ ೧೦ ॥ ಶ್ರೀಕೃಷ್ಣನ ಆಜ್ಞೆ ಯಾದೊಡನೆಯೇ ದಾರುಕನು ರಥವನ್ನು ಶಾಲ್ವನ ಬಳಿಗೆ ಒಯ್ದನು. ಭಗವಂತನ ರಥದ ಗರುಡಧ್ವಜವನ್ನು ಕಂಡೊಡನೆ ಶ್ರೀಕೃಷ್ಣನೇ ಆಗಮಿಸಿದನೆಂದು ಯಾದವರೂ ಮತ್ತು ಶತ್ರುಸೈನ್ಯದವರು ಭಾವಿಸಿದರು. ॥ ೧೧ ॥ ಪರೀಕ್ಷಿತನೆ! ಅಷ್ಟರೊಳಗೆ ಶಾಲ್ವನ ಸೈನ್ಯವೆಲ್ಲ ಪ್ರಾಯಶಃ ನಾಶವಾಗಿ ಹೋಗಿತ್ತು. ಭಗವಾನ್ ಶ್ರೀಕೃಷ್ಣನನ್ನು ನೋಡುತ್ತಲೇ ಶಾಲ್ವನು ಅತ್ಯಂತ ಭಯಂಕರವಾದ ಶಕ್ತ್ಯಾಯುಧವೊಂದನ್ನು ದಾರುಕನ ಮೇಲೆ ಪ್ರಯೋಗಿಸಿದನು. ಆ ಶಕ್ತಿಯು ಭಾರೀ ಶಬ್ದಮಾಡುತ್ತಾ, ಹತ್ತು ದಿಕ್ಕುಗಳನ್ನು ಬೆಳಗಿಸುತ್ತಾ ದೊಡ್ಡ ಉಲ್ಕೆಯಂತೆ ವೇಗವಾಗಿ ಸಾರಥಿಯ ಕಡೆಗೆ ಬರುತ್ತಿರುವುದನ್ನು ನೋಡಿದ ಶ್ರೀಕೃಷ್ಣನು ತನ್ನ ಬಾಣಗಳಿಂದ ಅದನ್ನು ನೂರಾರು ತುಂಡುಗಳಾಗಿ ಕತ್ತರಿಸಿ ಬಿಟ್ಟನು. ॥ ೧೨-೧೩ ॥ ಮತ್ತೆ ಶ್ರೀಕೃಷ್ಣನು ಹದಿನಾರು ಬಾಣಗಳಿಂದ ಶಾಲ್ವನನ್ನು ಪ್ರಹರಿಸಿ, ಆಕಾಶದಲ್ಲಿ ಸಂಚರಿಸುತ್ತಿದ್ದ ಸೌಭವಿಮಾನವನ್ನೂ ಸೂರ್ಯನು ತನ್ನ ಕಿರಣಗಳಿಂದ ಆಕಾಶವನ್ನು ಮುಚ್ಚಿಬಿಡುವಂತೆ - ಅಸಂಖ್ಯಾತವಾದ ಬಾಣಗಳಿಂದ ಮುಚ್ಚಿಬಿಟ್ಟನು. ॥ ೧೪ ॥ ಇದಕ್ಕೆ ಪ್ರತಿಯಾಗಿ ಶಾಲ್ವನು ಶಾರ್ಙ್ಗಧನುಸ್ಸಿನಿಂದ ಕೂಡಿದ ಶ್ರೀಕೃಷ್ಣನ ಎಡ ತೋಳನ್ನು ತೀಕ್ಷ್ಣವಾದ ಬಾಣದಿಂದ ಪ್ರಹರಿಸಿದನು. ಇದರಿಂದ ಭಗವಂತನು ಧರಿಸಿದ್ದ ಶಾರ್ಙ್ಗಧನುಸ್ಸು ಕೆಳಗೆ ಬಿದ್ದು ಹೋಯಿತು. ಇಂತಹ ಅದ್ಭುತವಾದೊಂದು ಘಟನೆ ನಡೆದುಹೋಯಿತು. ॥ ೧೫ ॥

ಹಾಹಾಕಾರೋ ಮಹಾನಾಸೀದ್ ಭೂತಾನಾಂ ತತ್ರ ಪಶ್ಯತಾಮ್ ।
ವಿನದ್ಯ ಸೌಭರಾಡುಚ್ಚೈರಿದಮಾಹ ಜನಾರ್ದನಮ್ ॥ ೧೬ ॥

ಯತ್ತ್ವಯಾ ಮೂಢ ನಃ ಸಖ್ಯುರ್ಭ್ರಾತುರ್ಭಾರ್ಯಾ ಹೃತೇಕ್ಷತಾಮ್ ।
ಪ್ರಮತ್ತಃ ಸ ಸಭಾಮಧ್ಯೇ ತ್ವಯಾ ವ್ಯಾಪಾದಿತಃ ಸಖಾ ॥ ೧೭ ॥

ತಂ ತ್ವಾದ್ಯ ನಿಶಿತೈರ್ಬಾಣೈರಪರಾಜಿತಮಾನಿನಮ್ ।
ನಯಾಮ್ಯಪುನರಾವೃತ್ತಿಂ ಯದಿ ತಿಷ್ಠೇರ್ಮಮಾಗ್ರತಃ ॥ ೧೮ ॥

ಶ್ರೀಭಗವಾನುವಾಚ

ವೃಥಾ ತ್ವಂ ಕತ್ಥಸೇ ಮಂದ ನ ಪಶ್ಯಸ್ಯಂತಿಕೇಽಂತಕಮ್ ।
ಪೌರುಷಂ ದರ್ಶಯಂತಿ ಸ್ಮ ಶೂರಾ ನ ಬಹುಭಾಷಿಣಃ ॥ ೧೯ ॥

ಇತ್ಯುಕ್ತ್ವಾ ಭಗವಾನ್ ಶಾಲ್ವಂ ಗದಯಾ ಭೀಮವೇಗಯಾ ।
ತತಾಡ ಜತ್ರೌ ಸಂರಬ್ಧಃ ಸ ಚಕಂಪೇ ವಮನ್ನಸೃಕ್ ॥ ೨೦ ॥

ಗದಾಯಾಂ ಸನ್ನಿವೃತ್ತಾಯಾಂ ಶಾಲ್ವಸ್ತ್ವಂತರಧೀಯತ ।
ತತೋ ಮುಹೂರ್ತ ಆಗತ್ಯ ಪುರುಷಃ ಶಿರಸಾಚ್ಯುತಮ್ ।
ದೇವಕ್ಯಾ ಪ್ರಹಿತೋಽಸ್ಮೀತಿ ನತ್ವಾ ಪ್ರಾಹ ವಚೋ ರುದನ್ ॥ ೨೧ ॥

ಕೃಷ್ಣ ಕೃಷ್ಣ ಮಹಾಬಾಹೋ ಪಿತಾ ತೇ ಪಿತೃವತ್ಸಲ ।
ಬದ್ಧ್ವಾಪನೀತಃ ಶಾಲ್ವೇನ ಸೌನಿಕೇನ ಯಥಾ ಪಶುಃ ॥ ೨೨ ॥

ನಿಶಮ್ಯ ವಿಪ್ರಿಯಂ ಕೃಷ್ಣೋ ಮಾನುಷೀಂ ಪ್ರಕೃತಿಂ ಗತಃ ।
ವಿಮನಸ್ಕೋ ಘೃಣೀ ಸ್ನೇಹಾದ್ಬಭಾಷೇ ಪ್ರಾಕೃತೋ ಯಥಾ ॥ ೨೩ ॥

ಕಥಂ ರಾಮಮಸಂಭ್ರಾಂತಂ ಜಿತ್ವಾಜೇಯಂ ಸುರಾಸುರೈಃ ।
ಶಾಲ್ವೇನಾಲ್ಪೀಯಸಾ ನೀತಃ ಪಿತಾ ಮೇ ಬಲವಾನ್ ವಿಧಿಃ ॥ ೨೪ ॥

ಇತಿ ಬ್ರುವಾಣೇ ಗೋವಿಂದೇ ಸೌಭರಾಟ್ ಪ್ರತ್ಯುಪಸ್ಥಿತಃ ।
ವಸುದೇವಮಿವಾನೀಯ ಕೃಷ್ಣಂ ಚೇದಮುವಾಚ ಸಃ ॥ ೨೫ ॥

ಏಷ ತೇ ಜನಿತಾ ತಾತೋ ಯದರ್ಥಮಿಹ ಜೀವಸಿ ।
ವಧಿಷ್ಯೇ ವೀಕ್ಷತಸ್ತೇಽಮುಮೀಶಶ್ಚೇತ್ ಪಾಹಿ ಬಾಲಿಶ ॥ ೨೬ ॥

ಆಕಾಶದಲ್ಲಿ ಮತ್ತು ಭೂಮಿಯಲ್ಲಿ ಈ ಯುದ್ಧವನ್ನು ನೋಡುತ್ತಿದ್ದ ಜನರು ಗಟ್ಟಿಯಾಗಿ ಹಾಹಾಕಾರ ಮಾಡಿದರು. ಆಗ ಶಾಲ್ವನು ಗರ್ಜಿಸುತ್ತಾ ಶ್ರೀಕೃಷ್ಣನಲ್ಲಿ ಹೀಗೆ ಹೇಳಿದನು – ॥ ೧೬ ॥ ಎಲೈ ಮೂಢನೇ! ನಾವೆಲ್ಲರೂ ನೋಡು-ನೋಡುತ್ತಿರುವಂತೆಯೇ ನಮ್ಮ ತಮ್ಮನೂ, ಮಿತ್ರನೂ ಆದ ಶಿಶುಪಾಲನ ಪತ್ನಿಯನ್ನು ನೀನು ಕದ್ದು ಕೊಂಡು ಹೋದೆ ಮತ್ತು ತುಂಬಿದ ಸಭೆಯಲ್ಲಿ ನಮ್ಮ ಮಿತ್ರನಾದ ಶಿಶುಪಾಲನು ಅಜಾಗರೂಕನಾಗಿದ್ದಾಗ ನೀನು ಅವನನ್ನು ಕೊಂದು ಹಾಕಿದೆ. ॥ ೧೭ ॥ ಆದರೂ ನಿನ್ನನ್ನು ಅಜೇಯನೆಂದು ಭಾವಿಸಿರುವೆ. ಒಂದು ವೇಳೆ ನನ್ನೆದುರಿಗೆ ಯುದ್ಧಕ್ಕೆ ನಿಂತರೆ ಇಂದು ತೀಕ್ಷ್ಣವಾದ ಬಾಣಗಳಿಂದ ಮರಳಿ ಬಾರದಿರುವ ಜಾಗಕ್ಕೆ ತಲುಪಿಸಿಬಿಡುತ್ತೇನೆ. ॥ ೧೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಎಲೈ ಮೂರ್ಖನೇ! ನೀನು ವ್ಯರ್ಥವಾಗಿ ಗಳಹುತ್ತಿರುವೆ. ನಿನ್ನ ತಲೆಯ ಮೇಲೆ ಮೃತ್ಯುವು ಕುಣಿಯುತ್ತಿರುವುದನ್ನು ನೀನರಿಯೆ. ನಿಜವಾದ ಶೂರರು ಹೆಚ್ಚು ಮಾತನಾಡುವುದಿಲ್ಲ, ತನ್ನ ಪೌರುಷವನ್ನು ತೋರಿಸಿಕೊಡುತ್ತಾರೆ. ॥ ೧೯ ॥ ಹೀಗೆ ಹೇಳಿ ಭಗವಾನ್ ಶ್ರೀಕೃಷ್ಣನು ಕ್ರುದ್ಧನಾಗಿ, ಅತ್ಯಂತ ವೇಗಶಾಲಿಯಾದ, ಭಯಂಕರವಾದ ತನ್ನ ಗದೆಯಿಂದ ಶಾಲ್ವನ ಹೆಗಲಮೇಲೆ ಪ್ರಹರಿಸಿದನು. ಇದರಿಂದ ಅವನು ರಕ್ತವನ್ನು ಕಕ್ಕುತ್ತಾ ಥರ-ಥರನೆ ನಡುಗಿಹೋದನು. ॥ ೨೦ ॥ ಇತ್ತ ಗದೆಯು ಭಗವಂತನ ಬಳಿಗೆ ಮರಳಿ ಬಂದಾಗ ಶಾಲ್ವನು ಅಂತರ್ಧಾನನಾದನು. ಅನಂತರ ಮುಹೂರ್ತಕಾಲ ಕಳೆಯುತ್ತಿರುವಂತೆ ಒಬ್ಬ ಮನುಷ್ಯನು ಭಗವಂತನ ಸಮೀಪಕ್ಕೆ ಬಂದು ತಲೆ ಬಾಗಿ ನಮಸ್ಕರಿಸಿ, ಅಳುತ್ತಾ ಹೇಳಿದನು – ನನ್ನನ್ನು ನಿಮ್ಮ ತಾಯಿ ದೇವಕಿಯು ಕಳಿಸಿರುವಳು – ॥ ೨೧ ॥ ಆಕೆಯು ಹೇಳಿರುವಳು – ಕೃಷ್ಣ! ಕೃಷ್ಣಾ! ಮಹಾಬಾಹುವೇ! ಪಿತೃವತ್ಸಲನೇ! ಶಾಲ್ವನು ನಿನ್ನ ತಂದೆಯನ್ನು ಬಂಧಿಸಿ, ಕಟುಕನು ಪಶುವನ್ನು ಕಟ್ಟಿಕೊಂಡು ಎಳೆದೊಯ್ಯುವಂತೆ ಕೊಂಡುಹೋಗಿರುವನು. ॥ ೨೨ ॥ ಈ ಅಪ್ರಿಯವಾದ ಸಮಾಚಾರವನ್ನು ಕೇಳಿದ ಭಗವಾನ್ ಶ್ರೀಕೃಷ್ಣನ ಮುಖದಲ್ಲಿ ಮನುಷ್ಯ ಸ್ವಭಾವದಂತೆ ಖಿನ್ನತೆ ಆವರಿಸಿತು. ಅವನು ಸಾಮಾನ್ಯ ಮನುಷ್ಯರಂತೆ ಅತ್ಯಂತ ದಯಾಪರನಾಗಿ ಪಿತೃಸ್ನೇಹದಿಂದ ಹೀಗೆ ಹೇಳತೊಡಗಿದನು. ॥ ೨೩ ॥ ಅರೇ! ನನ್ನಣ್ಣ ಬಲರಾಮನನ್ನು ದೇವತೆಗಳು ಅಥವಾ ಅಸುರರು ಯಾರೂ ಗೆಲ್ಲಲಾರರು. ಅವನು ಸದಾಕಾಲ ಸಾವಧಾನವಾಗಿರುವವನು. ಶಾಲ್ವನ ಬಲ-ಪೌರುಷವಾದರೋ ಅಲ್ಪವಾದುದು. ಹೀಗಿದ್ದರೂ ಇವನು ನನ್ನಣ್ಣನನ್ನು ಹೇಗೆ ಗೆದ್ದುಕೊಂಡನು? ನಮ್ಮ ತಂದೆಯನ್ನು ಹೇಗೆ ಬಂಧಿಸಿಕೊಂಡು ಹೋದನು? ನಿಜವಾಗಿ ಪ್ರಾರಬ್ಧವು ಬಲವತ್ತರವಾದುದು. ॥ ೨೪ ॥ ಭಗವಾನ್ ಶ್ರೀಕೃಷ್ಣನು ಹೀಗೆ ಹೇಳುತ್ತಿರುವಂತೆಯೇ ಶಾಲ್ವನು ವಸುದೇವನಂತಹ ಒಬ್ಬ ಮಾಯಾರಚಿತ ಮನುಷ್ಯನನ್ನು ಹಿಡಿದುಕೊಂಡು ಬಂದು, ಶ್ರೀಕೃಷ್ಣನಲ್ಲಿ ಹೇಳತೊಡಗಿದನು. ॥ ೨೫ ॥ ಮೂರ್ಖನೇ! ನೀನು ಯಾರಿಗಾಗಿ ಬದುಕಿರುವೆಯೋ ಅಂತಹ ನಿನಗೆ ಜನ್ಮದಾತನಾದ ತಂದೆಯೇ ಇವನಾಗಿದ್ದಾನೆ; ನೋಡು. ನೀನು ನೋಡುತ್ತಿರುವಂತೆ ಇವನನ್ನು ನಾನೀಗ ಕತ್ತರಿಸಿಬಿಡುತ್ತೇನೆ. ನಿನಗೇನಾದರೂ ಶಕ್ತಿಯಿದ್ದರೆ ಇವನನ್ನು ಬದುಕಿಸಿಕೋ. ॥ ೨೬ ॥

ಏವಂ ನಿರ್ಭರ್ತ್ಸ್ಯ ಮಾಯಾವೀ ಖಡ್ಗೇನಾನಕದುಂದುಭೇಃ ।
ಉತ್ಕೃತ್ಯ ಶಿರ ಆದಾಯ ಖಸ್ಥಂ ಸೌಭಂ ಸಮಾವಿಶತ್ ॥ ೨೭ ॥

ತತೋ ಮುಹೂರ್ತಂ ಪ್ರಕೃತಾವುಪಪ್ಲುತಃ
ಸ್ವಬೋಧ ಆಸ್ತೇ ಸ್ವಜನಾನುಷಂಗತಃ ।
ಮಹಾನುಭಾವಸ್ತದಬುದ್ಧ್ಯದಾಸುರೀಂ
ಮಾಯಾಂ ಸ ಶಾಲ್ವಪ್ರಸೃತಾಂ ಮಯೋದಿತಾಮ್ ॥ ೨೮ ॥

ನ ತತ್ರ ದೂತಂ ನ ಪಿತುಃ ಕಲೇವರಂ
ಪ್ರಬುದ್ಧ ಆಜೌ ಸಮಪಶ್ಯದಚ್ಯುತಃ ।
ಸ್ವಾಪ್ನಂ ಯಥಾ ಚಾಂಬರಚಾರಿಣಂ ರಿಪುಂ
ಸೌಭಸ್ಥ ಮಾಲೋಕ್ಯ ನಿಹಂತುಮುದ್ಯತಃ ॥ ೨೯ ॥

ಏವಂ ವದಂತಿ ರಾಜರ್ಷೇ ಋಷಯಃ ಕೇಚ ನಾನ್ವಿತಾಃ ।
ಯತ್ ಸ್ವವಾಚೋ ವಿರುಧ್ಯೇತ ನೂನಂ ತೇ ನ ಸ್ಮರಂತ್ಯುತ ॥ ೩೦ ॥

ಕ್ವ ಶೋಕಮೋಹೌ ಸ್ನೇಹೋ ವಾ ಭಯಂ ವಾ ಯೇಽಜ್ಞಸಂಭವಾಃ ।
ಕ್ವ ಚಾಖಂಡಿತವಿಜ್ಞಾನಜ್ಞಾನೈಶ್ವರ್ಯಸ್ತ್ವಖಂಡಿತಃ ॥ ೩೧ ॥

ಯತ್ಪಾದಸೇವೋರ್ಜಿತ ಯಾಽಽತ್ಮವಿದ್ಯಯಾ
ಹಿನ್ವಂತ್ಯನಾದ್ಯಾತ್ಮವಿಪರ್ಯಯಗ್ರಹಮ್ ।
ಲಭಂತ ಆತ್ಮೀಯಮನಂತಮೈಶ್ವರಂ
ಕುತೋ ನು ಮೋಹಃ ಪರಮಸ್ಯ ಸದ್ಗತೇಃ ॥ ೩೨ ॥

ತಂ ಶಸ್ತ್ರಪೂಗೈಃ ಪ್ರಹರಂತಮೋಜಸಾ
ಶಾಲ್ವಂ ಶರೈಃ ಶೌರಿರಮೋಘವಿಕ್ರಮಃ ।
ವಿದ್ಧ್ವಾಚ್ಛಿನದ್ವರ್ಮ ಧನುಃ ಶಿರೋಮಣಿಂ
ಸೌಭಂ ಚ ಶತ್ರೋರ್ಗದಯಾ ರುರೋಜ ಹ ॥ ೩೩ ॥

ತತ್ ಕೃಷ್ಣಹಸ್ತೇರಿತಯಾ ವಿಚೂರ್ಣಿತಂ
ಪಪಾತ ತೋಯೇ ಗದಯಾ ಸಹಸ್ರಧಾ ।
ವಿಸೃಜ್ಯ ತದ್ಭೂತಲಮಾಸ್ಥಿತೋ ಗದಾ-
ಮುದ್ಯಮ್ಯ ಶಾಲ್ವೋಽಚ್ಯುತಮಭ್ಯಗಾದ್ದ್ರುತಮ್ ॥ ೩೪ ॥

ಮಾಯಾವಿಯಾದ ಶಾಲ್ವನು ಹೀಗೆ ಭಗವಂತನನ್ನು ನಿಂದಿಸುತ್ತಾ ಮಾಯಾರಚಿತ ವಸುದೇವನ ತಲೆಯನ್ನು ಕತ್ತಿಯಿಂದ ತುಂಡರಿಸಿ, ಅದನ್ನೆತ್ತಿಕೊಂಡು ಆಕಾಶದಲ್ಲಿ ನಿಂತಿದ್ದ ಸೌಭವಿಮಾನವನ್ನೇರಿದನು. ॥ ೨೭ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸ್ವಯಂಸಿದ್ಧ ಜ್ಞಾನಸ್ವರೂಪನೂ, ಮಹಾನುಭಾವನೂ ಆಗಿದ್ದನು. ಆ ಘಟನೆಯನ್ನು ನೋಡಿ ಎರಡು ಗಳಿಗೆ ತಂದೆಯಾದ ವಸುದೇವನ ವಿಷಯದಲ್ಲಿ ಅತ್ಯಂತ ಪ್ರೀತಿಯಿದ್ದ ಕಾರಣ ಸಾಧಾರಣ ಮನುಷ್ಯರಂತೆ ಶೋಕ ಸಾಗರದಲ್ಲಿ ಮುಳುಗಿ ಹೋದನು. ಸ್ವಲ್ಪ ಹೊತ್ತಾದನಂತರ ತಾನು ಕಂಡದ್ದು ಶಾಲ್ವನಿಗೆ ಮಯನು ಉಪದೇಶಿಸಿದ್ದ ಮಾಯಾವಿದ್ಯೆಯ ಪ್ರದರ್ಶನವೆಂಬುದು ಶ್ರೀಕೃಷ್ಣನಿಗೆ ತಿಳಿದು ಹೋಯಿತು. ॥ ೨೮ ॥ ಕನಸಿನಲ್ಲಿ ಕಂಡದ್ದೆಲ್ಲಾ ಎಚ್ಚರವಾದೊಡನೆ ಕಾಣದೇ ಹೋಗುವಂತೆಯೇ ಶ್ರೀಕೃಷ್ಣನಿಗೆ ನಿಜಸ್ಥಿತಿಯುಂಟಾಗುತ್ತಲೇ ಅಲ್ಲಿ ಆ ದೂತನಾಗಲೀ, ತಂದೆಯ ಶರೀರವಾಗಲೀ ಏನೂ ಇರಲಿಲ್ಲ. ವಿಮಾನವನ್ನು ಹತ್ತಿ ಅಟ್ಟಹಾಸದಿಂದ ಆಕಾಶದಲ್ಲಿ ಸಂಚರಿಸುತ್ತಿದ್ದ ಶಾಲ್ವನನ್ನು ನೋಡಿ ಅವನನ್ನು ವಧಿಸಲು ಮುಂದಾದನು. ॥ ೨೯ ॥

ಪ್ರಿಯ ಪರೀಕ್ಷಿತನೇ! ಶ್ರೀಕೃಷ್ಣನಿಗೆ ವಿಮೋಹ ಉಂಟಾದ ಮಾತುಗಳನ್ನು ಪೂರ್ವಾಪರ ವಿಚಾರ ಮಾಡದ ಕೆಲವು - ಕೆಲವು ಋಷಿಗಳು ಹೇಳುತ್ತಿರುತ್ತಾರೆ. ಶ್ರೀಕೃಷ್ಣನ ವಿಷಯದಲ್ಲಿ ಹೀಗೆ ಹೇಳುವುದು - 'ಅವನು ಮಾಯಾತೀತನೂ, ಸರ್ವಜ್ಞನೂ' ಎಂದು ಅವರೇ ಹಿಂದೆ ಹೇಳಿದ ಮಾತುಗಳಿಗೆ ವಿರೋಧವಾಗಿದೆ. ॥ ೩೦ ॥ ಅಜ್ಞಾನದಿಂದುಟಾಗುವ ಶೋಕ-ಮೋಹ-ಸ್ನೇಹ-ಭಯಗಳೆಲ್ಲಿ? ಪರಿಪೂರ್ಣವಾದ ಜ್ಞಾನ- ವಿಜ್ಞಾನೈಶ್ವರ್ಯಗಳಿಗೆ ನೆಲೆಯಾದ, ದೇವವಂದ್ಯನಾದ, ಪರಿಪೂರ್ಣನಾದ ಶ್ರೀಕೃಷ್ಣನೆಲ್ಲಿ? (ಅವನಲ್ಲಿ ಇಂತಹ ಭಾವಗಳಿರುವುದು ಸಂಭವವೇ ಇಲ್ಲ.) ॥ ೩೧ ॥ ದೊಡ್ಡ ದೊಡ್ಡ ಋಷಿಮುನಿಗಳು ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ಸೇವೆ ಮಾಡಿ ಆತ್ಮವಿದ್ಯೆಯನ್ನು ಸಂಪಾದಿಸಿಕೊಳ್ಳುತ್ತಾರೆ ಮತ್ತು ಅನಾದಿ ಕಾಲದಿಂದಲೂ ಬಂದಿರುವ ಅಜ್ಞಾನರೂಪವಾದ ದೇಹಾತ್ಮ ಬುದ್ಧಿಯನ್ನು ತೊರೆಯುತ್ತಾರೆ. ಆತ್ಮಸಂಬಂಧಿಯಾದ ಅನಂತ ಐಶ್ವರ್ಯವನ್ನು ಪಡೆದುಕೊಳ್ಳುತ್ತಾರೆ. ಅಂತಹ ಸಂತರ ಪರಮಗತಿ ಸ್ವರೂಪನಾದ ಭಗವಾನ್ ಶ್ರೀಕೃಷ್ಣನಲ್ಲಿ ಇಂತಹ ಮೋಹವು ಹೇಗೆ ತಾನೇ ಉಂಟಾಗಬಲ್ಲದು? ॥ ೩೨ ॥

ಈಗ ಶಾಲ್ವನು ಉತ್ಸಾಹಭರಿತನಾಗಿ ಶ್ರೀಕೃಷ್ಣನ ಮೇಲೆ ಪುಂಖಾನುಪುಂಖವಾಗಿ ಶಸ್ತ್ರಗಳ ಮಳೆಗರೆಯತೊಡಗಿದನು. ಅಮೋಘಶಕ್ತಿಯುಳ್ಳ ಭಗವಾನ್ ಶ್ರೀಕೃಷ್ಣನೂ ಕೂಡ ತನ್ನ ಬಾಣಗಳಿಂದ ಶಾಲ್ವನನ್ನು ಗಾಯಗೊಳಿಸಿ, ಕವಚ, ಧನುಸ್ಸು ಮತ್ತು ಕಿರೀಟವನ್ನು ಪುಡಿ-ಪುಡಿ ಮಾಡಿದನು. ಜೊತೆಗೆ ಗದಾಘಾತದಿಂದ ಅವನ ವಿಮಾನವನ್ನು ಘಾಸಿಗೊಳಿಸಿದನು. ॥ ೩೩ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ವೇಗವಾಗಿ ಎಸೆದಿರುವ ಗದೆಯಿಂದ ಆ ವಿಮಾನವು ನುಚ್ಚು-ನೂರಾಗಿ ಸಮುದ್ರಕ್ಕೆ ಬಿದ್ದು ಹೋಯಿತು. ಅದು ಬೀಳುವ ಮೊದಲೇ ಶಾಲ್ವನು ವಿಮಾನದಿಂದ ನೆಲಕ್ಕೆ ಹಾರಿ ಗದಾಪಾಣಿಯಾಗಿ ವೇಗವಾಗಿ ಶ್ರೀಕೃಷ್ಣನ ಕಡೆಗೆ ಮುನ್ನುಗ್ಗಿದನು. ॥ ೩೪ ॥

ಅಥಾವತಃ ಸಗದಂ ತಸ್ಯ ಬಾಹುಂ
ಭಲ್ಲೇನ ಭಿತ್ತ್ವಾಥ ರಥಾಂಗಮದ್ಭುತಮ್ ।
ವಧಾಯ ಶಾಲ್ವಸ್ಯ ಲಯಾರ್ಕಸನ್ನಿಭಂ
ಬಿಭ್ರದ್ಬಭೌ ಸಾರ್ಕ ಇವೋದಯಾಚಲಃ ॥ ೩೫ ॥

ಜಹಾರ ತೇನೈವ ಶಿರಃ ಸಕುಂಡಲಂ
ಕಿರೀಟಯುಕ್ತಂ ಪುರುಮಾಯಿನೋ ಹರಿಃ ।
ವಜ್ರೇಣ ವೃತ್ರಸ್ಯ ಯಥಾ ಪುರಂದರೋ
ಬಭೂವ ಹಾಹೇತಿ ವಚಸ್ತದಾ ನೃಣಾಮ್ ॥ ೩೬ ॥

ತಸ್ಮಿನ್ನಿಪತಿತೇ ಪಾಪೇ ಸೌಭೇ ಚ ಗದಯಾ ಹತೇ ।
ನೇದುರ್ದುಂದುಭಯೋ ರಾಜನ್ ದಿವಿ ದೇವಗಣೇರಿತಾಃ ।
ಸಖೀನಾಮಪಚಿತಿಂ ಕುರ್ವನ್ ದಂತವಕ್ತ್ರೋ ರುಷಾಭ್ಯಗಾತ್
॥ ೩೭ ॥

ಶಾಲ್ವನ ಆಕ್ರಮಣವನ್ನು ನೋಡಿದ ಶ್ರೀಕೃಷ್ಣನು ಭಲ್ಲೆಯಿಂದ ಗದೆಯ ಸಹಿತ ಅವನ ತೋಳನ್ನು ಕತ್ತರಿಸಿ ಹಾಕಿದನು. ಮತ್ತೆ ಅವನನ್ನು ಕೊಲ್ಲಲಿಕ್ಕಾಗಿ ಪ್ರಳಯಕಾಲದ ಸೂರ್ಯನಂತೆ ತೇಜಸ್ಸಿನಿಂದ ಕೂಡಿದ್ದ ಪರಮಾದ್ಭುತವಾದ ಸುದರ್ಶನ ಚಕ್ರವನ್ನು ಧರಿಸಿ ಸೂರ್ಯನಿಂದ ಕೂಡಿದ ಉದಯಾಚಲದಂತೆ ಪ್ರಕಾಶಿಸಿದನು. ॥ ೩೫ ॥ ಭಗವಾನ್ ಶ್ರೀಕೃಷ್ಣನು ಮಾಯಾವಿ ಶಾಲ್ವನ ಕಿರೀಟ ಕುಂಡಲ ಸಹಿತ ಶಿರಸ್ಸನ್ನು-ಇಂದ್ರನು ವಜ್ರಾಯುಧದಿಂದ ವೃತ್ರಾಸುರನ ಶಿರವನ್ನು ಕತ್ತರಿಸಿದಂತೆ ಚಕ್ರಾಯುಧದಿಂದ ಕತ್ತರಿಸಿಬಿಟ್ಟನು. ಆ ಸಮಯದಲ್ಲಿ ಶಾಲ್ವನ ಸೈನಿಕರೆಲ್ಲರೂ ದುಃಖಿತರಾಗಿ ಅಯ್ಯೋ! ಅಯ್ಯೋ! ಎಂದು ಕಿರುಚಿಕೊಂಡರು. ॥ ೩೬ ॥

ಪರೀಕ್ಷಿತನೇ! ಹೀಗೆ ಪಾಪಿಯಾದ ಶಾಲ್ವನು ಹತನಾಗಿ ಅವನ ವಿಮಾನವೂ ಗದೆಯಿಂದ ವಿಧ್ವಸ್ತವಾದಾಗ ದೇವತೆಗಳು ಆಕಾಶದಲ್ಲಿ ದುಂದುಭಿಗಳನ್ನು ನುಡಿಸತೊಡಗಿದರು. ಇದೇ ಸಮಯಕ್ಕೆ ಸರಿಯಾಗಿ ದಂತವಕ್ತ್ರನು ತನ್ನ ಮಿತ್ರನಾದ ಶಿಶುಪಾಲನೇ ಮೊದಲಾದವರ ಸಾವಿನ ಸೇಡನ್ನು ತೀರಿಸಿಕೊಳ್ಳಲು ಅತ್ಯಂತ ಕ್ರುದ್ಧನಾಗಿ ದ್ವಾರಕೆಗೆ ಆಗಮಿಸಿದನು. ॥ ೩೭ ॥

ಎಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೭೭ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಸೌಭವಧೋನಾಮ ಸಪ್ತಸಪ್ತತಿತಮೋಽಧ್ಯಾಯಃ ॥ ೭೭ ॥

# ಎಪ್ಪತ್ತೆಂಟನೆಯ ಅಧ್ಯಾಯ

## ದಂತವಕ್ತ್ರ-ವಿದೂರಥ ಸಂಹಾರ
## ತೀರ್ಥಯಾತ್ರೆಯಲ್ಲಿ ಬಲರಾಮನಿಂದ ಸೂತಪುರಾಣಿಕರ ವಧೆ

*ಶ್ರೀಶುಕ ಉವಾಚ*

ಶಿಶುಪಾಲಸ್ಯ ಶಾಲ್ವಸ್ಯ ಪೌಂಡ್ರಕಸ್ಯಾಪಿ ದುರ್ಮತಿಃ ।
ಪರಲೋಕಗತಾನಾಂ ಚ ಕುರ್ವನ್ ಪಾರೋಕ್ಷ್ಯಸೌಹೃದಮ್
॥ ೧ ॥

ಏಕಃ ಪದಾತಿಃ ಸಂಕ್ರುದ್ಧೋ ಗದಾಪಾಣಿಃ ಪ್ರಕಂಪಯನ್ ।
ಪದ್ಭ್ಯಾಮಿಮಾಂ ಮಹಾರಾಜ ಮಹಾಸತ್ತ್ವೋ ವ್ಯದೃಶ್ಯತ
॥ ೨ ॥

ತಂ ತಥಾಽಽಯಾಂತಮಾಲೋಕ್ಯ ಗದಾಮಾದಾಯ ಸತ್ವರಃ ।
ಅವಪ್ಲುತ್ಯ ರಥಾತ್ ಕೃಷ್ಣಃ ಸಿಂಧುಂ ವೇಲೇವ ಪ್ರತ್ಯಧಾತ್
॥ ೩ ॥

ಗದಾಮುದ್ಯಮ್ಯ ಕಾರೂಷೋ ಮುಕುಂದಂ ಪ್ರಾಹ ದುರ್ಮದಃ ।
ದಿಷ್ಟ್ಯಾ ದಿಷ್ಟ್ಯಾ ಭವಾನದ್ಯ ಮಮ ದೃಷ್ಟಿಪಥಂ ಗತಃ
॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಶಿಶುಪಾಲ, ಶಾಲ್ವ, ಪೌಂಡ್ರಕ ಮೊದಲಾದವರು ಪರಲೋಕವನ್ನು ಸೇರಿದುದರಿಂದ ಅವರ ಮಿತ್ರ ಋಣವನ್ನು ತೀರಿಸಬೇಕೆಂದು ದುರ್ಮತಿಯಾದ ದಂತವಕ್ತ್ರನು ಒಬ್ಬಂಟಿಗನಾಗಿ ಕಾಲ್ನಡಿಗೆಯಿಂದ ಯುದ್ಧಭೂಮಿಗೆ ಆಗಮಿಸಿದನು. ಆಗ ಮಹಾಶಕ್ತಿಶಾಲಿಯಾದ ಅವನು ಅತ್ಯಂತ ಕ್ರುದ್ಧನಾಗಿ ಗದೆಯನ್ನೆತ್ತಿಕೊಂಡು, ಗಡುಸಾದ ಹೆಜ್ಜೆಗಳಿಂದ ಭೂಮಿಯನ್ನು ನಡುಗಿಸುತ್ತಾ ಬರುತ್ತಿರುವುದನ್ನು ಜನರು ನೋಡಿದರು. ॥ ೧-೨ ॥ ಹೀಗೆ ತನ್ನೆಡೆಗೆ ಬರುತ್ತಿರುವ ದಂತವಕ್ತ್ರನನ್ನು ನೋಡಿ ಭಗವಾನ್ ಶ್ರೀಕೃಷ್ಣನು ಶೀಘ್ರವಾಗಿ ಗದೆಯನ್ನೆತ್ತಿಕೊಂಡು ರಥದಿಂದ ಧುಮುಕಿ-ಸಮುದ್ರದ ಅಲೆಗಳನ್ನು ತೀರವು ತಡೆದು ನಿಲ್ಲಿಸುವಂತೆ ಅವನನ್ನು ತಡೆದು ನಿಲ್ಲಿಸಿದನು. ॥ ೩ ॥ ಶ್ರೀಕೃಷ್ಣನು ಎದುರಿಗೆ ನಿಂತಿರುವುದನ್ನು ನೋಡಿ ದುರ್ಮದನಾದ ಕರೂಷನರೇಶನಾದ ದಂತವಕ್ತ್ರನು ಗದೆಯನ್ನು ಮೇಲೆತ್ತಿಕೊಂಡು ಶ್ರೀಕೃಷ್ಣನಿಗೆ ಹೇಳಿದನು – ಇಂದು ನೀನು ಸೌಭಾಗ್ಯವಶದಿಂದ ನನ್ನ ಕಣ್ಣಿಗೆ ಬಿದ್ದಿರುವೆ. ॥ ೪ ॥

ತ್ವಂ ಮಾತುಲೇಯೋ ನಃ ಕೃಷ್ಣ ಮಿತ್ರಧ್ರುಗ್ಮಾಂ ಜಿಘಾಂಸಸಿ ।
ಅತಸ್ತ್ವಾಂ ಗದಯಾ ಮಂದ ಹನಿಷ್ಯೇ ವಜ್ರಕಲ್ಪಯಾ ॥ ೫ ॥

ತರ್ಹ್ಯಾನೃಣ್ಯಮುಪೈಮ್ಯಜ್ಞ ಮಿತ್ರಾಣಾಂ ಮಿತ್ರವತ್ಸಲಃ ।
ಬಂಧುರೂಪಮರಿಂ ಹತ್ವಾ ವ್ಯಾಧಿಂ ದೇಹಚರಂ ಯಥಾ ॥ ೬ ॥

ಏವಂ ರೂಕ್ಷೈಸ್ತುದನ್ ವಾಕ್ಯೈಃ ಕೃಷ್ಣಂ ತೋತ್ತ್ರೈರಿವ ದ್ವಿಪಮ್ ।
ಗದಯಾ ತಾಡಯನ್ಮೂರ್ಧ್ನಿ ಸಿಂಹವದ್ವ್ಯನದಚ್ಚ ಸಃ ॥ ೭ ॥

ಗದಯಾಭಿಹತೋಽಪ್ಯಾಜೌ ನ ಚಚಾಲ ಯದೂದ್ವಹಃ ।
ಕೃಷ್ಣೋಽಪಿ ತಮಹನ್ಗುರ್ವ್ಯಾ ಕೌಮೋದಕ್ಯಾ ಸ್ತನಾಂತರೇ ॥ ೮ ॥

ಗದಾನಿರ್ಭಿನ್ನ ಹೃದಯ ಉದ್ವಮನ್ರುಧಿರಂ ಮುಖಾತ್ ।
ಪ್ರಸಾರ್ಯ ಕೇಶಬಾಹ್ವಂಘ್ರೀಂಧರಣ್ಯಾಂ ನ್ಯಪತದ್ವ್ಯಸುಃ ॥ ೯ ॥

ತತಃ ಸೂಕ್ಷ್ಮತರಂ ಜ್ಯೋತಿಃ ಕೃಷ್ಣಮಾವಿಶದದ್ಭುತಮ್ ।
ಪಶ್ಯತಾಂ ಸರ್ವಭೂತಾನಾಂ ಯಥಾ ಚೈದ್ಯವಧೇ ನೃಪ ॥ ೧೦ ॥

ವಿದೂರಥಸ್ತು ತದ್ಭ್ರಾತಾ ಭ್ರಾತೃಶೋಕಪರಿಪ್ಲುತಃ ।
ಆಗಚ್ಛದಸಿಚರ್ಮಾಭ್ಯಾಮುಚ್ಛ್ವಸಂಸ್ತಜ್ಜಿಘಾಂಸಯಾ ॥ ೧೧ ॥

ತಸ್ಯ ಚಾಪತತಃ ಕೃಷ್ಣಶ್ಚಕ್ರೇಣ ಕ್ಷುರನೇಮಿನಾ ।
ಶಿರೋ ಜಹಾರ ರಾಜೇಂದ್ರ ಸಕಿರೀಟಂ ಸಕುಂಡಲಮ್ ॥ ೧೨ ॥

ಏವಂ ಸೌಭಂ ಚ ಶಾಲ್ವಂ ಚ ದಂತವಕ್ತ್ರಂ ಸಹಾನುಜಮ್ ।
ಹತ್ವಾ ದುರ್ವಿಷಹಾನನ್ಯೈರೀಡಿತಃ ಸುರಮಾನವೈಃ ॥ ೧೩ ॥

ಮುನಿಭಿಃ ಸಿದ್ಧಗಂಧರ್ವೈರ್ವಿದ್ಯಾಧರಮಹೋರಗೈಃ ।
ಅಪ್ಸರೋಭಿಃ ಪಿತೃಗಣೈರ್ಯಕ್ಷೈಃ ಕಿನ್ನರಚಾರಣೈಃ ॥ ೧೪ ॥

ಕೃಷ್ಣ! ನೀನು ನನ್ನ ಮಾವನ ಮಗನೇ ಆಗಿರುವೆ. ಆದ್ದರಿಂದ ನಿನ್ನನ್ನು ಕೊಲ್ಲಬಾರದು. ಆದರೆ ಅಂದು ನೀನು ನನ್ನ ಮಿತ್ರನನ್ನು ಕೊಂದು ಹಾಕಿದೆ. ಮತ್ತೆ ಇಂದು ನನ್ನನ್ನು ಕೊಲ್ಲಲೆಳಿಸುವೆ. ಅದಕ್ಕಾಗಿ ಎಲೈ ಮೂರ್ಖನೇ! ಈಗ ನಾನು ನಿನ್ನನ್ನು ನನ್ನ ವಜ್ರಕರ್ಕಶವಾದ ಗದೆಯಿಂದ ಸಂಹರಿಸಿಬಿಡುತ್ತೇನೆ. ॥ ೫ ॥ ಮಂದಮತಿಯೇ! ಹಾಗೆ ನೋಡಿದರೆ ನೀನು ನನಗೆ ಸಂಬಂಧಿಯೇ ಆಗಿರುವೆ. ಆದರೆ ಶರೀರದಲ್ಲಿ ಇರುವ ಯಾವುದಾದರೂ ರೋಗದಂತೆ ನೀನು ಶತ್ರುವೇ ಆಗಿರುವೆ. ನಾನು ನನ್ನ ಮಿತ್ರರನ್ನು ತುಂಬಾ ಪ್ರೀತಿಸುತ್ತೇನೆ. ಅವರ ಋಣ ನನ್ನ ಮೇಲಿದೆ. ಈಗ ನಿನ್ನನ್ನು ಕೊಂದು ಅದನ್ನು ತೀರಿಸಿಕೊಳ್ಳುವೆ. ॥ ೬ ॥ ಮಾವುತನು ಅಂಕುಶದಿಂದ ತಿವಿದು ಆನೆಯನ್ನು ಕೆರಳಿಸುವಂತೆ ದಂತವಕ್ತ್ರನು ತನ್ನ ಕಠೋರವಾದ ಮಾತುಗಳಿಂದ ಶ್ರೀಕೃಷ್ಣನನ್ನು ಕೆಣಕಿದನು ಹಾಗೂ ವೇಗವಾಗಿ ಅವನ ತಲೆಯಮೇಲೆ ಗದೆಯಿಂದ ಹೊಡೆದು ಸಿಂಹದಂತೆ ಗರ್ಜಿಸಿದನು. ॥ ೭ ॥ ರಣರಂಗದಲ್ಲಿ ಗದೆಯ ಏಟನ್ನು ತಿಂದರೂ ಭಗವಾನ್ ಶ್ರೀಕೃಷ್ಣನು ಹಿಂದಕ್ಕೆ ಸರಿಯದೆ ಸ್ಥಿರವಾಗಿ ನಿಂತು ತನ್ನ ಅತ್ಯಂತ ಭಾರವಾಗಿದ್ದ ಕೌಮೋದಕೀ ಗದೆಯಿಂದ ದಂತವಕ್ತ್ರನ ವಕ್ಷಃಸ್ಥಳದಲ್ಲಿ ರಭಸದಿಂದ ಪ್ರಹರಿಸಿದನು. ॥ ೮ ॥ ಗದಾಘಾತದಿಂದ ದಂತವಕ್ತ್ರನ ಎದೆಯೊಡೆದು ರಕ್ತವನ್ನು ಕಾರತೊಡಗಿದನು. ಕೂದಲುಗಳು ಕೆದರಿಹೋಯಿತು. ಬಾಹುಗಳನ್ನು ಚಾಚಿ ಗತಪ್ರಾಣನಾಗಿ ಅವನು ಭೂಮಿಗೊರಗಿದನು. ॥ ೯ ॥ ಪರೀಕ್ಷಿತನೇ! ಶಿಶುಪಾಲನ ವಧೆಯ ಸಮಯದಲ್ಲಿ ಆದಂತೆಯೇ, ಗತಪ್ರಾಣನಾದ ದಂತವಕ್ತ್ರನ ಶರೀರದಿಂದ ಅತ್ಯಂತ ಸೂಕ್ಷ್ಮವಾದ ಜ್ಯೋತಿಯೊಂದು ಹೊರಬಂದು ಎಲ್ಲರೂ ನೋಡುತ್ತಿರುವಂತೆಯೇ ಅದು ವಿಚಿತ್ರ ರೀತಿಯಿಂದ ಭಗವಾನ್ ಶ್ರೀಕೃಷ್ಣನಲ್ಲಿ ಸೇರಿಹೋಯಿತು. ॥ ೧೦ ॥

ವಿದೂರಥನೆಂಬುವನು ದಂತವಕ್ತ್ರನ ತಮ್ಮನು. ಅವನು ಅಣ್ಣನ ಮರಣದಿಂದಾಗಿ ಅತ್ಯಂತ ಶೋಕಾಕುಲನಾಗಿದ್ದನು. ಈಗವನು ಬಹಳವಾಗಿ ಕ್ರುದ್ಧನಾಗಿ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಕೈಯಲ್ಲಿ ಕತ್ತಿ-ಗುರಾಣಿಗಳನ್ನು ಹಿಡಿದು ಶ್ರೀಕೃಷ್ಣನನ್ನು ಕೊಂದುಹಾಕುವುದಕ್ಕಾಗಿ ಬಂದನು. ॥ ೧೧ ॥ ರಾಜೇಂದ್ರನೇ! ಅವನು ತನ್ನ ಮೇಲೆ ಪ್ರಹಾರಮಾಡಲು ಬಯಸುತ್ತಿರುವುದನ್ನು ನೋಡಿದ ಭಗವಾನ್ ಶ್ರೀಕೃಷ್ಣನು ಕತ್ತಿಯಂತೆ ಹರಿತವಾದ ಅಂಚುಗಳುಳ್ಳ ಚಕ್ರಾಯುಧದಿಂದ ಕಿರೀಟ-ಕುಂಡಲಗಳ ಸಹಿತವಾಗಿ ಅವನ ತಲೆಯನ್ನು ಕತ್ತರಿಸಿ ಹಾಕಿದನು. ॥ ೧೨ ॥ ಈ ಪ್ರಕಾರವಾಗಿ ಶ್ರೀಕೃಷ್ಣನು ಇತರರಿಂದ ಎದುರಿಸಲು ಅಸಾಧ್ಯರಾದ ಶಾಲ್ವನನ್ನೂ ಅವನ ಸೌಭ ವಿಮಾನವನ್ನೂ, ದಂತವಕ್ತ್ರನನ್ನೂ, ವಿದೂರಥನನ್ನು ಸಂಹರಿಸಿ ದ್ವಾರಕಾ ಪಟ್ಟಣವನ್ನು ಪ್ರವೇಶಿಸಿದನು. ಆ ಸಮಯದಲ್ಲಿ ದೇವತೆಗಳು, ಮನುಷ್ಯರು ಅವನನ್ನು ಸ್ತುತಿಸುತ್ತಿದ್ದರು. ದೊಡ್ಡ-ದೊಡ್ಡ ಋಷಿ-ಮುನಿಗಳು, ಸಿದ್ಧರು-ಗಂಧರ್ವರು, ವಿದ್ಯಾಧರರು ಮತ್ತು ವಾಸುಕಿಯೇ ಮೊದಲಾದ ನಾಗರು, ಅಪ್ಸರೆಯರು, ಪಿತೃಗಳೂ, ಯಕ್ಷರು, ಕಿನ್ನರರು, ಚಾರಣರೂ ಅವನ ಮೇಲೆ ಹೂವಿನ ಮಳೆಗರೆಯುತ್ತಾ, ಅವನ ವಿಜಯ ಕೀರ್ತನೆಗಳನ್ನು ಹಾಡುತ್ತಿದ್ದರು.

ಉಪಗೀಯಮಾನವಿಜಯಃ ಕುಸುಮೈರಭಿವರ್ಷಿತಃ ।
ವೃತಶ್ಚ ವೃಷ್ಣಿಪ್ರವರೈರ್ವಿವೇಶಾಲಂಕೃತಾಂ ಪುರೀಮ್
॥ ೧೫ ॥

ಏವಂ ಯೋಗೇಶ್ವರಃ ಕೃಷ್ಣೋ ಭಗವಾನ್ ಜಗದೀಶ್ವರಃ ।
ಈಯತೇ ಪಶುದೃಷ್ಟೀನಾಂ ನಿರ್ಜಿತೋ ಜಯತೀತಿ ಸಃ
॥ ೧೬ ॥

ಶ್ರುತ್ವಾಯುದ್ಧೋದ್ಯಮಂ ರಾಮಃ ಕುರೂಣಾಂ ಸಹ ಪಾಂಡವೈಃ ।
ತೀರ್ಥಾಭಿಷೇಕವ್ಯಾಜೇನ ಮಧ್ಯಸ್ಥಃ ಪ್ರಯಯೌ ಕಿಲ
॥ ೧೭ ॥

ಸ್ನಾತ್ವಾ ಪ್ರಭಾಸೇ ಸಂತರ್ಪ್ಯ ದೇವರ್ಷಿಪಿತೃಮಾನವಾನ್ ।
ಸರಸ್ವತೀಂ ಪ್ರತಿಸ್ರೋತಂ ಯಯೌ ಬ್ರಾಹ್ಮಣಸಂವೃತಃ
॥ ೧೮ ॥

ಪೃಥೂದಕಂ ಬಿಂದುಸರಸ್ತ್ರಿತಕೂಪಂ ಸುದರ್ಶನಮ್ ।
ವಿಶಾಲಂ ಬ್ರಹ್ಮತೀರ್ಥಂ ಚ ಚಕ್ರಂ ಪ್ರಾಚೀಂ ಸರಸ್ವತೀಮ್
॥ ೧೯ ॥

ಯಮುನಾಮನು ಯಾನ್ಯೇವ ಗಂಗಾಮನು ಚ ಭಾರತ ।
ಜಗಾಮ ನೈಮಿಷಂ ಯತ್ರ ಋಷಯಃ ಸತ್ರಮಾಸತೇ
॥ ೨೦ ॥

ತಮಾಗತಮಭಿಪ್ರೇತ್ಯ ಮುನಯೋ ದೀರ್ಘಸತ್ರಿಣಃ ।
ಅಭಿನಂದ್ಯ ಯಥಾನ್ಯಾಯಂ ಪ್ರಣಮ್ಯೋತ್ಥಾಯ ಚಾರ್ಚಯನ್
॥ ೨೧ ॥

ಸೋಽರ್ಚಿತಃ ಸಪರೀವಾರಃ ಕೃತಾಸನಪರಿಗ್ರಹಃ ।
ರೋಮಹರ್ಷಣಮಾಸೀನಂ ಮಹರ್ಷೇಃ ಶಿಷ್ಯಮೈಕ್ಷತ
॥ ೨೨ ॥

ಅಪ್ರತ್ಯುತ್ಥಾಯಿನಂ ಸೂತಮಕೃತಪ್ರಹ್ವಣಾಂಜಲಿಮ್ ।
ಅಧ್ಯಾಸೀನಂ ಚ ತಾನ್ವಿಪ್ರಾಂಶ್ಚುಕೋಪೋದ್ವೀಕ್ಷ್ಯ ಮಾಧವಃ
॥ ೨೩ ॥

ಕಸ್ಮಾದಸಾವಿಮಾನ್ ವಿಪ್ರಾನಧ್ಯಾಸ್ತೇ ಪ್ರತಿಲೋಮಜಃ ।
ಧರ್ಮಪಾಲಾಂಸ್ತಥೈವಾಸ್ಮಾನ್ ವಧಮರ್ಹತಿ ದುರ್ಮತಿಃ
॥ ೨೪ ॥

ಭಗವಂತನು ಪ್ರವೇಶಿಸುವಾಗ ದ್ವಾರಕೆಯು ಬಹಳ ಅಲಂಕೃತ ವಾಗಿತ್ತು. ಮಹಾ-ಮಹಾ ವೃಷ್ಣಿವಂಶೀ ಯಾದವ ವೀರರೂ ಅವ ನನ್ನೇ ಅನುಸರಿಸುತ್ತಿದ್ದರು. ॥ ೧೩-೧೫ ॥

ಪರೀಕ್ಷಿತನೇ! ಯೋಗೇಶ್ವರನೂ, ಜಗದೀಶ್ವರನೂ ಆದ ಭಗವಾನ್ ಶ್ರೀಕೃಷ್ಣನು ಹೀಗೆ ಅನೇಕ ಪ್ರಕಾರವಾದ ಲೀಲೆಗಳನ್ನು ಆಡುತ್ತಿದ್ದನು. ಇವನ ನಿಜಸ್ವರೂಪವನ್ನು ತಿಳಿಯದಿದ್ದ ಪಾಮರ ರಾದ ಅವಿವೇಕಿಗಳು ಕೆಲವು ಸಲ ಶ್ರೀಕೃಷ್ಣನು ಸೋತನೆಂದೂ, ಕೆಲವು ಸಲ ಜಯಗಳಿಸಿದನೆಂದೂ ಭಾವಿಸುತ್ತಿದ್ದರು. ಆದರೆ ವಾಸ್ತವ ವಾಗಿ ಅವನು ಸದಾಕಾಲ ವಿಜಯಿಯೇ ಆಗಿದ್ದಾನೆ. ಅವನಿಗೆ ಸೋಲೆಂಬುದೇ ಇಲ್ಲ. ಇದೆಲ್ಲವೂ ಲೀಲಾಮಾತ್ರ ಆಗಿದೆ. ॥ ೧೬ ॥

ಒಮ್ಮೆ ಬಲರಾಮನು ಕೌರವರಿಗೂ-ಪಾಂಡವರಿಗೂ ಯುದ್ಧ ಕ್ಕಾಗಿ ಸಿದ್ಧತೆಗಳು ಆಗುತ್ತಿರುವುದೆಂಬ ವಾರ್ತೆಯನ್ನು ಕೇಳಿದನು. ಯಾರೊಬ್ಬರ ಪಕ್ಷವನ್ನೂ ವಹಿಸುವುದು ಅವನಿಗೆ ಇಷ್ಟವಿರಲಿಲ್ಲ. ಅವನು ತಟಸ್ಥನಾಗಿದ್ದನು. ಅದಕ್ಕಾಗಿ ಅವನು ತೀರ್ಥಯಾತ್ರೆಯ ನೆಪದಿಂದ ದ್ವಾರಕೆಯಿಂದ ಹೊರಟು ಬಿಟ್ಟನು. ॥ ೧೭ ॥ ಅಲ್ಲಿಂದ ಹೊರಟು ಅವನು ಮೊದಲಿಗೆ ಪ್ರಭಾಸಕ್ಷೇತ್ರದಲ್ಲಿ ಸ್ನಾನ ತರ್ಪಣಾದಿಗಳನ್ನು ಮಾಡಿ, ಬ್ರಾಹ್ಮಣ ಭೋಜನದ ಮೂಲಕ ದೇವತೆಗಳನ್ನು, ಋಷಿಗಳನ್ನು, ಪಿತೃಗಳನ್ನು, ಮನುಷ್ಯರನ್ನು ಸಂತೃಪ್ತ ಗೊಳಿಸಿದನು. ಅನಂತರ ಅವನು ಕೆಲವು ಬ್ರಾಹ್ಮಣರೊಂದಿಗೆ ಪಶ್ಚಿಮವಾಹಿನಿಯಾದ ಸರಸ್ವತೀನದಿಯ ತೀರಕ್ಕೆ ಬಂದನು.॥೧೮॥ ಅಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡು ಕ್ರಮವಾಗಿ ಪೃಥೂದಕ, ಬಿಂದುಸರ, ತ್ರಿತಕೂಪ, ಸುದರ್ಶನತೀರ್ಥ, ವಿಶಾಲತೀರ್ಥ, ಬ್ರಹ್ಮತೀರ್ಥ ಚಕ್ರತೀರ್ಥ ಮತ್ತು ಪೂರ್ವವಾಹಿನಿಯಾದ ಸರಸ್ವತೀ ಮುಂತಾದ ತೀರ್ಥಗಳಿಗೆ ಹೋದನು. ॥ ೧೯ ॥ ಪರೀಕ್ಷಿತನೇ! ಅನಂತರ ಯಮುನಾತೀರದ ಮತ್ತು ಮುಖ್ಯ-ಮುಖ್ಯ ತೀರ್ಥ ಗಳನ್ನು ಸಂದರ್ಶಿಸುತ್ತಾ ದೊಡ್ಡ-ದೊಡ್ಡ ಋಷಿಗಳು ಸತ್ಸಂಗ ಸತ್ರವನ್ನು ನಡೆಸುತ್ತಿದ್ದ ನೈಮಿಷಾರಣ್ಯಕ್ಕೆ ಬಂದನು. ॥ ೨೦ ॥ ದೀರ್ಘಕಾಲ ನಡೆಯುವ ಸತ್ರಯಾಗದ ವ್ರತವನ್ನು ಕೈಗೊಂಡು ಕುಳಿತಿದ್ದ ಮಹರ್ಷಿಗಳು ಬಲರಾಮನು ಬಂದುದನ್ನು ನೋಡಿ ತಮ್ಮ ಆಸನಗಳಿಂದೆದ್ದು ಮುಂದೆ ಹೋಗಿ ಆತನನ್ನು ಸ್ವಾಗತಿಸಿ ಯಥಾಯೋಗ್ಯವಾಗಿ ಅಭಿನಂದಿಸಿ ಅವನನ್ನು ಪೂಜಿಸಿ ದರು. ॥ ೨೧ ॥ ತನ್ನ ಜೊತೆಯವರೊಡನೆ ಆಸನವನ್ನು ಸ್ವೀಕರಿಸಿ ಕುಳಿತು ಅವರಿಂದ ಸತ್ಕೃತನಾದ ಬಲರಾಮನು-ವ್ಯಾಸ-ಪೀಠದಲ್ಲಿ ಕುಳಿತಿದ್ದ ಭಗವಾನ್ ವ್ಯಾಸರ ಶಿಷ್ಯನಾದ ರೋಮಹರ್ಷಣನನ್ನು ನೋಡಿದನು. ॥ ೨೨ ॥ ರೋಮಹರ್ಷಣನು ಸೂತಜಾತಿಯಲ್ಲಿ ಹುಟ್ಟಿದವನಾಗಿದ್ದರೂ ಬ್ರಾಹ್ಮಣರು ಕುಳಿತಿದ್ದುದಕ್ಕಿಂತ ಎತ್ತರವಾದ ಆಸನದಲ್ಲಿ ಕುಳಿತಿದ್ದುದನ್ನು, ತಾನು ಆಗಮಿಸಿದರೂ ಮೇಲೆದ್ದು ಅಭಿನಂದಿಸದೇ ಇದ್ದುದನ್ನು ನೋಡಿ ಬಲರಾಮನು ಕುಪಿತನಾಗಿ ಗುಡುಗಿದನು - ॥ ೨೩ ॥ "ಈ ರೋಮಹರ್ಷಣನು ಪ್ರತಿ ಲೋಮ ಜಾತಿಯಲ್ಲಿ ಹುಟ್ಟಿದವನಾಗಿದ್ದರೂ ಈ ಶ್ರೇಷ್ಠರಾದ ಬ್ರಾಹ್ಮಣರು ಮತ್ತು ಧರ್ಮರಕ್ಷಕರಾದ ನಾವು ಕುಳಿತಿರುವುದಕ್ಕಿಂತ ಉನ್ನತವಾದ ಪೀಠದಲ್ಲಿ ಕುಳಿತಿರುವನು. ಆದುದರಿಂದ ಈ ದುರ್ಬುದ್ಧಿಯು ಮರಣದಂಡನೆಗೆ ಪಾತ್ರನಾಗಿದ್ದಾನೆ. ॥ ೨೪ ॥

ಋಷೇರ್ಭಗವತೋ ಭೂತ್ವಾ ಶಿಷ್ಯೋಽಧೀತ್ಯ ಬಹೂನಿ ಚ।
ಸೇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ
॥ ೨೫ ॥

ಅದಾಂತಸ್ಯಾವಿನೀತಸ್ಯ ವೃಥಾ ಪಂಡಿತಮಾನಿನಃ।
ನ ಗುಣಾಯ ಭವಂತಿ ಸ್ಮ ನಟಸ್ಯೇವಾಜಿತಾತ್ಮನಃ
॥ ೨೬ ॥

ಏತದರ್ಥೋ ಹಿ ಲೋಕೇಽಸ್ಮಿನ್ನವತಾರೋ ಮಯಾ ಕೃತಃ।
ವಧ್ಯಾ ಮೇ ಧರ್ಮಧ್ವಜಿನಸ್ತೇ ಹಿ ಪಾತಕಿನೋಽಧಿಕಾಃ
॥ ೨೭ ॥

ಏತಾವದುಕ್ತ್ವಾ ಭಗವಾನ್ ನಿವೃತ್ತೋಽಸದ್ವಧಾದಪಿ।
ಭಾವಿತ್ವಾತ್ತಂ ಕುಶಾಗ್ರೇಣ ಕರಸ್ಥೇನಾಹನತ್ ಪ್ರಭುಃ
॥ ೨೮ ॥

ಹಾಹೇತಿ ವಾದಿನಃ ಸರ್ವೇ ಮುನಯಃ ಖಿನ್ನ ಮಾನಸಾಃ।
ಊಚುಃ ಸಂಕರ್ಷಣಂ ದೇವಮಧರ್ಮಸ್ತೇ ಕೃತಃ ಪ್ರಭೋ
॥ ೨೯ ॥

ಅಸ್ಯ ಬ್ರಹ್ಮಾಸನಂ ದತ್ತಮಸ್ಮಾಭಿರ್ಯದುನಂದನ।
ಆಯುಶ್ಚಾತ್ಮಾಕ್ಲಮಂ ತಾವದ್ಯಾವತ್ಸತ್ರಂ ಸಮಾಪ್ಯತೇ
॥ ೩೦ ॥

ಅಜಾನತೈವಾಚರಿತಸ್ತ್ವಯಾ ಬ್ರಹ್ಮವಧೋ ಯಥಾ।
ಯೋಗೇಶ್ವರಸ್ಯ ಭವತೋ ನಾಮ್ನಾಯೋಽಪಿ ನಿಯಾಮಕಃ
॥ ೩೧ ॥

ಯದ್ಯೇತದ್ಬ್ರಹ್ಮಹತ್ಯಾಯಾಃ ಪಾವನಂ ಲೋಕಪಾವನ।
ಚರಿಷ್ಯತಿ ಭವಾನ್ಲೋಕಸಂಗ್ರಹೋಽನನ್ಯಚೋದಿತಃ
॥ ೩೨ ॥

*ಶ್ರೀಭಗವಾನುವಾಚ*

ಕರಿಷ್ಯೇ ವಧನಿರ್ವೇಶಂ ಲೋಕಾನುಗ್ರಹಕಾಮ್ಯಯಾ।
ನಿಯಮಃ ಪ್ರಥಮೇ ಕಲ್ಪೇ ಯಾವಾನ್ಸತು ವಿಧೀಯತಾಮ್
॥ ೩೩ ॥

ಈ ಮೂರ್ಖನು ಭಗವಾನ್ ವ್ಯಾಸಮಹರ್ಷಿಗಳ ಶಿಷ್ಯನಾಗಿ ಅವರಿಂದ ಇತಿಹಾಸ-ಪುರಾಣಗಳನ್ನು ಧರ್ಮಶಾಸ್ತ್ರವೇ ಮೊದಲಾದ ಹಲವಾರು ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವನು. ಆದರೆ ಇವನಿಗೆ ಮನಸ್ಸಿನ ಮೇಲೆ ಸಂಯಮವೇ ಇಲ್ಲ, ಇವನಲ್ಲಿ ವಿನಯವು ಇರದೆ, ಉದ್ದಂಡನಾಗಿದ್ದಾನೆ. ತಾನೇ ಮಹಾಪಂಡಿತನೆಂದು ಭಾವಿಸಿಕೊಂಡು ಬಿಟ್ಟಿದ್ದಾನೆ. ನಟನಾದವನ ಎಲ್ಲ ಚೇಷ್ಟೆಗಳೂ ಅಭಿನಯಮಾತ್ರವಾಗಿರುವಂತೆ ಇವನ ಅಧ್ಯಯನವೆಲ್ಲವೂ ಕೇವಲ ತೋರಿಕೆಗೆ ಮಾತ್ರವಾಗಿದೆ. ಇದರಿಂದ ಇವನಿಗಾಗಲೀ, ಇತರರಿಗಾಗಲೀ ಯಾವ ಪ್ರಯೋಜನವೂ ಇಲ್ಲ. ॥ ೨೫-೨೬ ॥ ಧರ್ಮದ ಲಾಂಛನಗಳನ್ನು ಧರಿಸಿಕೊಂಡು ಧರ್ಮವನ್ನು ಪಾಲಿಸದಿರುವವರು ಹೆಚ್ಚು ಪಾಪಿಗಳಾಗಿದ್ದಾರೆ. ಇವರು ವಧಿಸಲು ಯೋಗ್ಯರಾಗಿದ್ದಾರೆ. ಈ ಜಗತ್ತಿನಲ್ಲಿ ಇಂತಹ ಧರ್ಮಧ್ವಜಿಗಳನ್ನು ಶಿಕ್ಷಿಸುವ ಸಲುವಾಗಿಯೇ ನಾನು ಅವತಾರವೆತ್ತಿದ್ದೇನೆ.'' ॥ ೨೭ ॥

ಭಗವಾನ್ ಬಲರಾಮನು ತೀರ್ಥಯಾತ್ರೆಯ ಕಾರಣದಿಂದ ದುಷ್ಟರ ಸಂಹಾರವನ್ನು ನಿಲ್ಲಿಸಿಬಿಟ್ಟಿದ್ದರೂ ಹೀಗೆ ಹೇಳಿ ಅವನು ಕೈಯಲ್ಲಿದ್ದ ದರ್ಭೆಯ ಅಗ್ರಭಾಗದಿಂದ ರೋಮಹರ್ಷಣನನ್ನು ಪ್ರಹರಿಸಿದನು. ಕೂಡಲೇ ಅವನು ಅಸುನೀಗಿದನು. ಆಗಬೇಕಾಗಿದ್ದುದು ಆಗಿಯೇ ತೀರುವುದು. ॥ ೨೮ ॥ ಸೂತನು ಹತನಾದುದನ್ನು ಕಂಡು ಎಲ್ಲ ಋಷಿ-ಮುನಿಗಳು 'ಅಯ್ಯೋ! ಎಂತಹ ಅನಾಹುತವಾಯಿತು!' ಎಂದು ಕೂಗಿಕೊಳ್ಳುತ್ತಾ ಖಿನ್ನಮನಸ್ಕರಾದರು. ಅವರು ದೇವಾಧಿದೇವನಾದ ಭಗವಾನ್ ಬಲರಾಮನಲ್ಲಿ - 'ಪ್ರಭೋ! ನೀನು ಭಾರೀ ದೊಡ್ಡ ಅಧರ್ಮವನ್ನು ಮಾಡಿಬಿಟ್ಟೆ' ಎಂದು ಹೇಳಿದರು. ॥ ೨೯ ॥ ಯದುವಂಶ ಶಿರೋಮಣಿಯೇ! ರೋಮಹರ್ಷಣ ಸೂತನನ್ನು ಯಜ್ಞದಲ್ಲಿ ಪುರಾಣವನ್ನು ಹೇಳಲು ಬ್ರಹ್ಮನ ಆಸನದಲ್ಲಿ ನಾವೇ ಕುಳ್ಳಿರಿಸಿದ್ದೆವು. ನಾವು ಪ್ರಾರಂಭಿಸಿದ ಸತ್ರಯಾಗವು ಮುಗಿಯುವವರೆಗೆ ಈತನಿಗೆ ಶಾರೀರಿಕ ಕಷ್ಟಗಳಿಂದ ರಹಿತವಾದ ಆಯುಸ್ಸನ್ನೂ ಕೊಟ್ಟಿದ್ದೆವು. ॥ ೩೦ ॥ ಈ ವಿಷಯವನ್ನು ತಿಳಿಯದ ನೀನು ಬ್ರಹ್ಮಹತ್ಯೆಗೆ ಸಮಾನವಾದ ಕಾರ್ಯವನ್ನು ಮಾಡಿಬಿಟ್ಟಿರುವೆ. ಯೋಗೇಶ್ವರನಾದ ನಿನ್ನ ಮೇಲೆ ವೇದಗಳೂ ಕೂಡ ವಿಧಿ-ನಿಷೇಧಗಳನ್ನು ಹೇರಲಾರವು ಎಂಬುದನ್ನೂ ನಾವು ಅರಿತಿದ್ದೇವೆ. ಲೋಕವನ್ನು ಪವಿತ್ರಗೊಳಿಸುವ ಸಲುವಾಗಿಯೇ ನಿನ್ನ ಅವತಾರವಾಗಿದೆ. ಆದರೂ ನಮ್ಮದೊಂದು ಪ್ರಾರ್ಥನೆಯಿದೆ. ಯಾರ ಪ್ರೇರಣೆಯೂ ಇಲ್ಲದೆ ಸ್ವೇಚ್ಛೆಯಿಂದಲೇ ನೀನು ಬ್ರಹ್ಮಹತ್ಯಾ ದೋಷಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಇದರಿಂದ ಜನರಿಗೆ ದೊಡ್ಡ ಪಾಠಸಿಗಬಹುದು. ॥ ೩೧-೩೨ ॥

**ಭಗವಾನ್ ಬಲರಾಮನು ಹೇಳುತ್ತಾನೆ** - ನಾನು ಲೋಕಶಿಕ್ಷಣಕ್ಕಾಗಿ ಮತ್ತು ಲೊಕಾನುಗ್ರಹಕ್ಕಾಗಿ ಬ್ರಹ್ಮಹತ್ಯಾಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ. ಆದುದರಿಂದ ಪ್ರಥಮ ಶ್ರೇಣಿಯ ಪ್ರಾಯಶ್ಚಿತ್ತದ ವಿಧಿ-ವಿಧಾನಗಳನ್ನು ನೀವು ನನಗೆ ಹೇಳಿರಿ. ॥ ೩೩ ॥

ದೀರ್ಘಮಾಯುರ್ಬತೈತಸ್ಯ ಸತ್ತ್ವಮಿಂದ್ರಿಯಮೇವ ಚ ।
ಆಶಾಸಿತಂ ಯತ್ತದ್ ಬ್ರೂತ ಸಾಧಯೇ ಯೋಗಮಾಯಯಾ ॥ ೩೪ ॥

*ಋಷಯ ಊಚುಃ*

ಅಸ್ತ್ರಸ್ಯ ತವ ವೀರ್ಯಸ್ಯ ಮೃತ್ಯೋರಸ್ಮಾಕಮೇವ ಚ ।
ಯಥಾ ಭವೇದ್ವಚಃ ಸತ್ಯಂ ತಥಾ ರಾಮ ವಿಧೀಯತಾಮ್ ॥ ೩೫ ॥

*ಶ್ರೀಭಗವಾನುವಾಚ*

ಆತ್ಮಾ ವೈ ಪುತ್ರ ಉತ್ಪನ್ನ ಇತಿ ವೇದಾನುಶಾಸನಮ್ ।
ತಸ್ಮಾದಸ್ಯ ಭವೇದ್ವಕ್ತಾ ಆಯುರಿಂದ್ರಿಯಸತ್ತ್ವವಾನ್ ॥ ೩೬ ॥

ಕಿಂ ವಃ ಕಾಮೋ ಮುನಿಶ್ರೇಷ್ಠಾ ಬ್ರೂತಾಹಂ ಕರವಾಣ್ಯಥ ।
ಅಜಾನತಸ್ತ್ವಪಚಿತಿಂ ಯಥಾ ಮೇ ಚಿಂತ್ಯತಾಂ ಬುಧಾಃ ॥ ೩೭ ॥

*ಋಷಯ ಊಚುಃ*

ಇಲ್ವಲಸ್ಯ ಸುತೋ ಘೋರೋ ಬಲ್ವಲೋ ನಾಮ ದಾನವಃ ।
ಸ ದೂಷಯತಿ ನಃ ಸತ್ರಮೇತ್ಯ ಪರ್ವಣಿ ಪರ್ವಣಿ ॥ ೩೮ ॥

ತಂ ಪಾಪಂ ಜಹಿ ದಾಶಾರ್ಹ ತನ್ನಃ ಶುಶ್ರೂಷಣಂ ಪರಮ್ ।
ಪೂಯಶೋಣಿತವಿಣ್ಮೂತ್ರಸುರಾಮಾಂಸಾಭಿವರ್ಷಿಣಮ್ ॥ ೩೯ ॥

ತತಶ್ಚ ಭಾರತಂ ವರ್ಷಂ ಪರೀತ್ಯ ಸುಸಮಾಹಿತಃ ।
ಚರಿತ್ವಾ ದ್ವಾದಶ ಮಾಸಾಂಸ್ತೀರ್ಥಸ್ನಾಯೀ ವಿಶುದ್ಧ್ಯಸೇ ॥ ೪೦ ॥

ಈ ರೋಮಹರ್ಷನಿಗೆ ನೀವು ಕೊಡಲು ಬಯಸಿದ ದೀರ್ಘಾಯುಷ್ಯವನ್ನು, ಶರೀರ ಬಲವನ್ನೂ, ಇಂದ್ರಿಯಶಕ್ತಿಯನ್ನೂ ನನಗೆ ಹೇಳಿರಿ. ನನ್ನ ಯೋಗಮಾಯೆಯಿಂದ ಅವೆಲ್ಲವನ್ನು ಸಾಧಿಸಿಕೊಡುತ್ತೇನೆ. ॥ ೩೪ ॥

**ಋಷಿಗಳು ಹೇಳಿದರು** – ಬಲರಾಮನೇ! ನಿನ್ನ ಅಸ್ತ್ರ, ಪರಾಕ್ರಮ ಮತ್ತು ಇವನ ಮೃತ್ಯುವು ವ್ಯರ್ಥವಾಗಬಾರದು. ನಾವು ಇವನಿಗೆ ಕೊಟ್ಟವರದಾನವೂ ಸತ್ಯವಾಗಬೇಕು. ನಿನ್ನ ಯೋಗಮಾಯೆಯಿಂದ ಇದನ್ನು ಸಾಧಿಸಿಕೊಡು ಪ್ರಭುವೇ ! ॥ ೩೫ ॥

**ಭಗವಾನ್ ಬಲರಾಮನು ಹೇಳಿದನು** – ಋಷಿಗಳಿರಾ! ತಾನೇ (ಆತ್ಮನು) ಪುತ್ರನ ರೂಪದಲ್ಲಿ ಹುಟ್ಟುವನೆಂದು ವೇದವು ಹೇಳುತ್ತದೆ. ಆದಕ್ಕಾಗಿ ರೋಮಹರ್ಷಣನ ಸ್ಥಾನದಲ್ಲಿ ಅವನ ಮಗನು ನಿಮಗೆ ಪುರಾಣಕಥೆಗಳನ್ನು ಹೇಳುವನು. ಅವನಿಗೆ ನಾನು ನನ್ನ ಶಕ್ತಿಯಿಂದ ದೀರ್ಘಾಯುಸ್ಸು ಇಂದ್ರಿಯಪಟುತ್ವ ಮತ್ತು ಬಲವನ್ನು ಕರುಣಿಸುತ್ತೇನೆ. ॥ ೩೬ ॥ ಮಹರ್ಷಿಗಳೇ ! ಇದಲ್ಲದೆ ಇನ್ನೇನು ನೀವುಗಳು ಬಯಸುವಿರೋ ಅದನ್ನು ಹೇಳಿರಿ. ನಾನು ನಿಮ್ಮಗಳ ಇಚ್ಛೆಯನ್ನು ಪೂರ್ಣಗೊಳಿಸುವೆನು. ತಿಳಿಯದೆ ನನ್ನಿಂದಾದ ಅಪರಾಧಕ್ಕೆ ಪ್ರಾಯಶ್ಚಿತ್ತವನ್ನೂ ಹೇಳಿರಿ. ಏಕೆಂದರೆ, ತಾವು ಈ ವಿಷಯದಲ್ಲಿ ವಿದ್ವಾಂಸರಾಗಿದ್ದೀರಿ. ॥ ೩೭ ॥

**ಋಷಿಗಳು ಹೇಳಿದರು** – ಇಲ್ವಲನ ಮಗ ಬಲ್ವಲ ಎಂಬ ಭಯಂಕರನಾದ ದಾನವನಿರುವನು. ಅವನು ಪ್ರತಿಯೊಂದು ಪರ್ವಗಳಲ್ಲಿಯೂ (ಅಮಾವಾಸ್ಯೆ ಮತ್ತು ಪೌರ್ಣಿಮೆ) ಇಲ್ಲಿಗೆ ಬಂದು ನಮ್ಮ ಸತ್ರವನ್ನು ಕೆಡಿಸುತ್ತಾನೆ. ॥ ೩೮ ॥ ಯದುನಂದನನೇ ! ಅವನು ಇಲ್ಲಿಗೆ ಬಂದು ಕೀವು, ರಕ್ತ, ಅಮೇಧ್ಯ, ಮೂತ್ರ, ಮದ್ಯ, ಮಾಂಸ ಇವುಗಳನ್ನು ಯಜ್ಞವೇದಿಕೆಯಲ್ಲಿ ಸುರಿಯುತ್ತಾನೆ. ನೀನು ಆ ಪಾಪಿಯನ್ನು ಸಂಹರಿಸಿದರೆ ನಮ್ಮಗಳ ದೊಡ್ಡ ಸೇವೆ ಮಾಡಿದಂತಾಗುವುದು. ॥ ೩೯ ॥ ಅನಂತರ ನೀನು ಏಕಾಗ್ರ ಮನಸ್ಸಿನಿಂದ ತೀರ್ಥಗಳಲ್ಲಿ, ಸ್ನಾನ ಮಾಡುತ್ತಾ ಹನ್ನೆರಡು ತಿಂಗಳ ವರೆಗೆ ಭಾರತವರ್ಷವನ್ನು ಸಂಚರಿಸು. ಇದರಿಂದ ನಿನ್ನ ಶುದ್ಧಿಯಾಗುವುದು. ॥ ೪೦ ॥

*ಎಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೭೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಬಲದೇವಚರಿತ್ರೇ ಬಲ್ವಲವಧೋಪಕ್ರಮೋನಾಮಾಷ್ಟಸಪ್ತತಿತಮೋಽಧ್ಯಾಯಃ ॥ ೭೮ ॥

# ಎಪ್ಪತ್ತೊಂಭತ್ತನೆಯ ಅಧ್ಯಾಯ

## ಬಲರಾಮನಿಂದ ಬಲ್ವಲನ ಸಂಹಾರ - ತೀರ್ಥಯಾತ್ರೆ

ಶ್ರೀಶುಕ ಉವಾಚ

ತತಃ ಪರ್ವಣ್ಯುಪಾವೃತ್ತೇ ಪ್ರಚಂಡಃ ಪಾಂಸುವರ್ಷಣಃ ।
ಭೀಮೋ ವಾಯುರಭೂದ್ರಾಜನ್ ಪೂಯಗಂಧಸ್ತು ಸರ್ವಶಃ
॥ ೧ ॥

ತತೋಽಮೇಧ್ಯಮಯಂ ವರ್ಷಂ ಬಲ್ವಲೇನ ವಿನಿರ್ಮಿತಮ್ ।
ಅಭವದ್ಯಜ್ಞಶಾಲಾಯಾಂ ಸೋಽನ್ವದೃಶ್ಯತ ಶೂಲಧೃಕ್
॥ ೨ ॥

ತಂ ವಿಲೋಕ್ಯ ಬೃಹತ್ಕಾಯಂ ಭಿನ್ನಾಂಜನಚಯೋಪಮಮ್ ।
ತಪ್ತತಾಮ್ರಶಿಖಾಶ್ಮಶ್ರುಂ ದಂಷ್ಟ್ರೋಗ್ರಭ್ರುಕುಟೀಮುಖಮ್
॥ ೩ ॥

ಸಸ್ಮಾರ ಮುಸಲಂ ರಾಮಃ ಪರಸೈನ್ಯವಿದಾರಣಮ್ ।
ಹಲಂ ಚ ದೈತ್ಯದಮನಂ ತೇ ತೂರ್ಣಮುಪತಸ್ಥತುಃ
॥ ೪ ॥

ತಮಾಕೃಷ್ಯ ಹಲಾಗ್ರೇಣ ಬಲ್ವಲಂ ಗಗನೇಚರಮ್ ।
ಮುಸಲೇನಾಹನತ್ಕ್ರುದ್ಧೋ ಮೂರ್ಧ್ನಿ ಬ್ರಹ್ಮದ್ರುಹಂ ಬಲಃ
॥ ೫ ॥

ಸೋಽಪತದ್ಭುವಿ ನಿರ್ಭಿನ್ನ ಲಲಾಟೋಽಸೃಕ್ಸಮುತ್ಸೃಜನ್ ।
ಮುಂಚನ್ನಾರ್ತಸ್ವರಂ ಶೈಲೋ ಯಥಾ ವಜ್ರಹತೋಽರುಣಃ
॥ ೬ ॥

ಸಂಸ್ತುತ್ಯ ಮುನಯೋ ರಾಮಂ ಪ್ರಯುಜ್ಯಾವಿತಥಾಶಿಷಃ ।
ಅಭ್ಯಷಿಂಚನ್ಮಹಾಭಾಗಾ ವೃತ್ರಘ್ನಂ ವಿಬುಧಾ ಯಥಾ
॥ ೭ ॥

ವೈಜಯಂತೀಂ ದದುರ್ಮಾಲಾಂ ಶ್ರೀಧಾಮಾಮ್ಲಾನಪಂಕಜಾಮ್ ।
ರಾಮಾಯ ವಾಸಸೀ ದಿವ್ಯೇ ದಿವ್ಯಾನ್ಯಾಭರಣಾನಿ ಚ
॥ ೮ ॥

ಅಥ ತೈರಭ್ಯನುಜ್ಞಾತಃ ಕೌಶಿಕೀಮೇತ್ಯ ಬ್ರಾಹ್ಮಣೈಃ ।
ಸ್ನಾತ್ವಾ ಸರೋವರಮಗಾದ್ಯತಃ ಸರಯುರಾಸ್ರವತ್
॥ ೯ ॥

ಅನುಸ್ರೋತೇನ ಸರಯೂಂ ಪ್ರಯಾಗಮುಪಗಮ್ಯ ಸಃ ।
ಸ್ನಾತ್ವಾ ಸಂತರ್ಪ್ಯ ದೇವಾದೀನ್ಜಗಾಮ ಪುಲಹಾಶ್ರಮಮ್
॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಪರ್ವದಿವಸವು ಬಂದಾಗ ಭಯಂಕರ ಗಾಳಿಯು ಬೀಸ ತೊಡಗಿತು. ಧೂಳಿನ ಮಳೆಯು ಸುರಿಯತೊಡಗಿತು. ಎಲ್ಲ ಕಡೆಯಿಂದ ಕೀವಿನ ದುರ್ಗಂಧವು ಹರಡಿಕೊಂಡಿತು. ॥ ೧ ॥ ಬಳಿಕ ಬಲ್ವಲ ರಾಕ್ಷಸನು ಯಜ್ಞಶಾಲೆಯಲ್ಲಿ ಮಲ-ಮೂತ್ರಾದಿ ಅಪವಿತ್ರ ವಸ್ತುಗಳನ್ನು ಸುರಿಸಿದನು. ಅನಂತರ ಕೈಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡು ಕಾಣಿಸಿಕೊಂಡನು. ॥ ೨ ॥ ದೊಡ್ಡದಾದ ಶರೀರವನ್ನು ಹೊಂದಿದ್ದು ಅವನು ಕಾಡಿಗೆಯ ಬೆಟ್ಟದಂತೆ ಕಪ್ಪಾಗಿದ್ದು ಕಾಯಿಸಿದ ತಾಮ್ರದಂತೆ ಕೆಂಪಾದ ತಲೆದೂದಲು, ಗಡ್ಡ-ಮೀಸೆಗಳನ್ನು ಹೊಂದಿದ್ದನು. ದೊಡ್ಡ-ದೊಡ್ಡ ಕೋರೆದಾಡೆಗಳಿಂದಲೂ, ಗಂಟಿಕ್ಕಿದ ಹುಬ್ಬುಗಳಿಂದಲೂ ಅವನ ಮುಖವು ಭಯಂಕರವಾಗಿ ಕಾಣುತ್ತಿತ್ತು. ಅವನನ್ನು ನೋಡಿದೊಡನೆ ಬಲರಾಮನು ಶತ್ರುಸೈನ್ಯವನ್ನು ಧ್ವಂಸಗೊಳಿಸುವ ಮುಸಲಾಯುಧವನ್ನು, ದೈತ್ಯರನ್ನು ಸಂಹರಿಸುವ ಹಲಾಯುಧ ವನ್ನು ಸ್ಮರಿಸಿಕೊಂಡನು. ಸ್ಮರಿಸಿದಾಕ್ಷಣದಲ್ಲೇ ಆ ದಿವ್ಯಾಯುಧಗಳು ಬಲರಾಮನ ಕೈಗಳನ್ನು ಅಲಂಕರಿಸಿದುವು. ॥ ೩-೪ ॥ ಬಲರಾಮನು ಆಕಾಶದಲ್ಲಿ ಸಂಚರಿಸುವ ಬಲ್ವಲ ದೈತ್ಯನನ್ನು ತನ್ನ ಹಲಾಯುಧದಿಂದ ಸೆಳೆದುಕೊಂಡು ಆ ಬ್ರಹ್ಮದ್ರೋಹಿಯ ಶಿರಸ್ಸಿನಲ್ಲಿ ಅತ್ಯಂತ ಕ್ರೋಧಗೊಂಡು ಮುಸಲಾಯುಧದಿಂದ ಬಲವಾಗಿ ಹೊಡೆದನು. ಇದರಿಂದ ಅವನ ಹಣೆ ಒಡೆದು, ರಕ್ತವನ್ನು ಉಗುಳುತ್ತಾ ವಜ್ರಘಾತದಿಂದ ಗೈರಿಕಾದಿ ಧಾತುಗಳಿಂದ ಕೆಂಪಾದ ಪರ್ವತವು ಉರುಳುವಂತೆ ಆರ್ತಸ್ವರದಿಂದ ಬೊಬ್ಬಿರಿದು ಸತ್ತು ನೆಲಕ್ಕೆ ಉರುಳಿದನು. ॥ ೫-೬ ॥ ನೈಮಿಷಾರಣ್ಯ ನಿವಾಸಿಗಳಾದ ಮಹಾಭಾಗ್ಯ ಶಾಲಿಗಳಾದ ಮುನಿಗಳು ಬಲರಾಮನನ್ನು ಸ್ತುತಿಸಿ, ಎಂದೂ ವ್ಯರ್ಥವಾಗದಿರುವ ಆಶೀರ್ವಾದಗಳನ್ನು ಕೊಟ್ಟರು. ಮತ್ತೆ ದೇವತೆಗಳು ಇಂದ್ರನಿಗೆ ಅಭಿಷೇಕ ಮಾಡಿದಂತೆಯೇ ಬಲರಾಮನಿಗೆ ಅಭಿಷೇಕ ಮಾಡಿದರು. ॥ ೭ ॥ ಅನಂತರ ಋಷಿಗಳು ಬಲರಾಮನಿಗೆ ದಿವ್ಯವಾದ ವಸ್ತ್ರಾಭೂಷಣಗಳನ್ನು ಸಮರ್ಪಿಸಿ, ಎಂದೂ ಬಾಡದಿರುವ, ಸೌಂದರ್ಯಕ್ಕೆ ಆಶ್ರಯವಾದ ಕಮಲ ಪುಷ್ಪಗಳಿಂದ ಕೂಡಿದ ವೈಜಯಂತಿ ಮಾಲೆಯನ್ನು ಅರ್ಪಿಸಿದರು. ॥ ೮ ॥

ಅನಂತರ ನೈಮಿಷಾರಣ್ಯವಾಸಿಗಳಾದ ಋಷಿಗಳಿಂದ ಬೀಳ್ಕೊಂಡು, ಅವರ ಆಜ್ಞೆಯಂತೆ ಬಲರಾಮನು ಬ್ರಾಹ್ಮಣರೊಡನೆ ಕೌಶಿಕೀ ನದಿಯ ತೀರಕ್ಕೆ ಬಂದನು. ಅಲ್ಲಿ ಸ್ನಾನ ಮಾಡಿ, ಸರಯೂ ನದಿಯ ಉಗಮವಾದ ಮಾನಸ ಸರೋವರಕ್ಕೆ ಹೋದನು. ॥ ೯ ॥ ಅಲ್ಲಿಂದ ಸರಯೂ ತೀರದಲ್ಲೇ ಮುಂದರಿಯುತ್ತಾ ತೀರ್ಥರಾಜ ಪ್ರಯಾಗಕ್ಕೆ ಬಂದರು. ಅಲ್ಲಿ ಸ್ನಾನಮಾಡಿ, ದೇವ-ಋಷಿ ಪಿತೃ ತರ್ಪಣಗಳನ್ನು ಮಾಡಿ ಅಲ್ಲಿಂದ ಪುಲಹಾಶ್ರಮಕ್ಕೆ ಹೋದನು. ॥ ೧೦ ॥

ಗೋಮತೀಂ ಗಂಡಕೀಂ ಸ್ನಾತ್ವಾ ವಿಪಾಶಾಂ ಶೋಣ ಆಪ್ಲುತಃ ।
ಗಯಾಂ ಗತ್ವಾ ಪಿತೄನಿಷ್ಟ್ವಾ ಗಂಗಾಸಾಗರಸಂಗಮೇ
॥ ೧೧ ॥

ಉಪಸ್ಪೃಶ್ಯ ಮಹೇಂದ್ರಾದ್ರೌ ರಾಮಂ ದೃಷ್ಟ್ವಾಭಿವಾದ್ಯ ಚ ।
ಸಪ್ತಗೋದಾವರೀಂ ವೇಣಾಂ ಪಂಪಾಂ ಭೀಮರಥೀಂ ತತಃ
॥ ೧೨ ॥

ಸ್ಕಂದಂ ದೃಷ್ಟ್ವಾ ಯಯೌ ರಾಮಃ ಶ್ರೀಶೈಲಂ ಗಿರಿಶಾಲಯಮ್ ।
ದ್ರವಿಡೇಷು ಮಹಾಪುಣ್ಯಂ ದೃಷ್ಟ್ವಾದ್ರಿಂ ವೇಂಕಟಂ ಪ್ರಭುಃ
॥ ೧೩ ॥

ಕಾಮಕೋಷ್ಣೀಂ ಪುರೀಂ ಕಾಂಚೀಂ ಕಾವೇರೀಂ ಚ ಸರಿದ್ವರಾಮ್ ।
ಶ್ರೀರಂಗಾಖ್ಯಂ ಮಹಾಪುಣ್ಯಂ ಯತ್ರ ಸನ್ನಿಹಿತೋ ಹರಿಃ
॥ ೧೪ ॥

ಋಷಭಾದ್ರಿಂ ಹರೇಃ ಕ್ಷೇತ್ರಂ ದಕ್ಷಿಣಾಂ ಮಥುರಾಂ ತಥಾ ।
ಸಾಮುದ್ರಂ ಸೇತುಮಗಮನ್ಮಹಾಪಾತಕನಾಶನಮ್
॥ ೧೫ ॥

ತತ್ರಾಯುತಮದಾದ್ಧೇನೂರ್ಬ್ರಾಹ್ಮಣೇಭ್ಯೋ ಹಲಾಯುಧಃ ।
ಕೃತಮಾಲಾಂ ತಾಮ್ರಪರ್ಣೀಂ ಮಲಯಂ ಚ ಕುಲಾಚಲಮ್
॥ ೧೬ ॥

ತತ್ರಾಗಸ್ತ್ಯಂ ಸಮಾಸೀನಂ ನಮಸ್ಕೃತ್ಯಾಭಿವಾದ್ಯ ಚ ।
ಯೋಜಿತಸ್ತೇನ ಚಾಶೀರ್ಭಿರನುಜ್ಞಾತೋ ಗತೋಽರ್ಣವಮ್ ।
ದಕ್ಷಿಣಂ ತತ್ರ ಕನ್ಯಾಖ್ಯಾಂ ದುರ್ಗಾಂ ದೇವೀಂ ದದರ್ಶ ಸಃ
॥ ೧೭ ॥

ತತಃ ಫಾಲ್ಗುನಮಾಸಾದ್ಯ ಪಂಚಾಪ್ಸರಸಮುತ್ತಮಮ್ ।
ವಿಷ್ಣುಃ ಸನ್ನಿಹಿತೋ ಯತ್ರ ಸ್ನಾತ್ವಾಸ್ಪರ್ಶದ್ಗವಾಯುತಮ್
॥ ೧೮ ॥

ತತೋಽಭಿವ್ರಜ್ಯ ಭಗವಾನ್ ಕೇರಲಾಂಸ್ತು ತ್ರಿಗರ್ತಕಾನ್ ।
ಗೋಕರ್ಣಾಖ್ಯಂ ಶಿವಕ್ಷೇತ್ರಂ ಸಾನ್ನಿಧ್ಯಂ ಯತ್ರ ಧೂರ್ಜಟೇಃ
॥ ೧೯ ॥

ಆರ್ಯಾಂ ದ್ವೈಪಾಯನೀಂ ದೃಷ್ಟ್ವಾ ಶೂರ್ಪಾರಕಮಗಾದ್ಬಲಃ ।
ತಾಪೀಂ ಪಯೋಷ್ಣೀಂ ನಿರ್ವಿಂಧ್ಯಾಮುಪಸ್ಪೃಶ್ಯಾಥ ದಂಡಕಮ್
॥ ೨೦ ॥

ಅಲ್ಲಿಂದ ಮುಂದೆ ಗಂಡಕೀ, ಗೋಮತೀ, ವಿಪಾಶಾ, ಶೋಣಾ ಮುಂತಾದ ಪುಣ್ಯನದಿಗಳಲ್ಲಿ ಸ್ನಾನಮಾಡಿ, ಗಯಾ ಕ್ಷೇತ್ರಕ್ಕೆ ಬಂದು ಅಲ್ಲಿ ಪಿತೃಗಳಿಗೆ ಶ್ರಾದ್ಧಮಾಡಿ, ತರ್ಪಣಾದಿಗಳನ್ನಿತ್ತು ಮುಂದೆ ಪ್ರಯಾಣ ಮಾಡುತ್ತಾ ಗಂಗಾ-ಸಾಗರ ಸಂಗಮಕ್ಕೆ ಹೋಗಿ ಅಲ್ಲಿ ಸ್ನಾನಾದಿ ತೀರ್ಥಕರ್ಮಗಳನ್ನಾಚರಿಸಿ, ಮಹೇಂದ್ರ ಪರ್ವತಕ್ಕೆ ಹೋದನು. ಅಲ್ಲಿ ಪರಶುರಾಮರ ದರ್ಶನ ಮತ್ತು ಅಭಿವಾದನ ಮಾಡಿದನು. ಅನಂತರ ಸಪ್ತಗೋದಾವರೀ, ವೇಣಾ, ಪಂಪಾ ಭೀಮರಥೀ ಮುಂತಾದವುಗಳಲ್ಲಿ ಸ್ನಾನಮಾಡಿ, ಕಾರ್ತಿಕ ಸ್ವಾಮಿಯನ್ನು ದರ್ಶಿಸಿ ಪರಶಿವನ ನಿವಾಸವಾದ ಶ್ರೀಶೈಲಕ್ಕೆ ತಲುಪಿದನು. ಬಳಿಕ ಬಲರಾಮನು ದ್ರವಿಡ ದೇಶದ ಪರಮ ಪುಣ್ಯಮಯ ವೇಂಕಟಾದ್ರಿ ಕ್ಷೇತ್ರವನ್ನು ದರ್ಶನಮಾಡಿ ಅಲ್ಲಿಂದ ಅವನು ಕಂಚಿ ಕಾಮಾಕ್ಷಿ, ಶಿವಕಾಂಚಿ, ವಿಷ್ಣುಕಾಂಚಿ ದರ್ಶನ ಮಾಡುತ್ತಾ ಶ್ರೇಷ್ಠವಾದ ಕಾವೇರಿ ನದಿಯಲ್ಲಿ ಸ್ನಾನಮಾಡಿ, ಪುಣ್ಯಪ್ರದವಾದ, ಶ್ರೀಹರಿಯ ಸಾಕ್ಷಾತ್ ಸಾನ್ನಿಧ್ಯವಿರುವ ಶ್ರೀರಂಗಕ್ಷೇತ್ರಕ್ಕೆ ಆಗಮಿಸಿದನು. ॥ ೧೧-೧೪ ॥ ಅಲ್ಲಿ ರಂಗನಾಥ ಸ್ವಾಮಿಯನ್ನು ಸಂದರ್ಶಿಸಿ ಅಲ್ಲಿಂದ ಭಗವಾನ್ ವಿಷ್ಣುವಿನ ಮತ್ತೊಂದು ಕ್ಷೇತ್ರವಾದ ಋಷಭ ಪರ್ವತ, ದಕ್ಷಿಣ ಮಥುರೆ ಹಾಗೂ ಮಹಾ ಮಹಾ ಪಾಪಗಳನ್ನು ನಾಶಗೊಳಿಸುವ ಸೇತುಬಂಧದ ಯಾತ್ರೆ ಮಾಡಿದನು. ॥ ೧೫ ॥ ಅಲ್ಲಿ ಬಲರಾಮನು ಬ್ರಾಹ್ಮಣರಿಗೆ ಹತ್ತು ಸಾವಿರ ಗೋವುಗಳನ್ನು ದಾನಮಾಡಿದನು. ಪುನಃ ಅಲ್ಲಿಂದ ಕೃತಮಾಲಾ, ತಾಮ್ರಪರ್ಣೀ ನದಿಗಳಲ್ಲಿ ಸ್ನಾನಮಾಡಿ ಮತ್ತೆ ಮಲಯಾಚಲಕ್ಕೆ ಹೋದನು. ಆ ಪರ್ವತವು ಏಳು ಕುಲಪರ್ವತಗಳಲ್ಲಿ ಒಂದಾಗಿದೆ. ॥ ೧೬ ॥ ಅಲ್ಲಿ ವಿರಾಜಮಾನರಾದ ಅಗಸ್ತ್ಯ ಮುನಿಗಳನ್ನು ಅಭಿವಾದನ – ನಮಸ್ಕಾರಮಾಡಿ, ಅವರಿಂದ ಆಶೀರ್ವಾದ-ಅನುಜ್ಞೆಯನ್ನು ಪಡೆದು ಬಲರಾಮನು ದಕ್ಷಿಣ ಸಮುದ್ರದ ಯಾತ್ರೆ ಗೈದನು. ಅಲ್ಲಿ ಅವನು ದುರ್ಗಾದೇವಿಯನ್ನು ಕನ್ಯಾಕುಮಾರಿಯ ರೂಪದಲ್ಲಿ ದರ್ಶಿಸಿದನು. ॥ ೧೭ ॥ ಅನಂತರ ಅವನು ಫಾಲ್ಗುಣತೀರ್ಥವಾದ ಅನಂತಶಯನ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಪಂಚಾಪ್ಸರಸ ತೀರ್ಥದಲ್ಲಿ ಸ್ನಾನಮಾಡಿದನು. ಆ ತೀರ್ಥದಲ್ಲಿ ಭಗವಾನ್ ವಿಷ್ಣುವಿನ ಸದಾ ಸಾನ್ನಿಧ್ಯವಿರುತ್ತದೆ. ಅಲ್ಲಿ ಬಲರಾಮನು ಹತ್ತು ಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ॥ ೧೮ ॥

ಅನಂತರ ಭಗವಾನ್ ಬಲರಾಮನು ಅಲ್ಲಿಂದ ಹೊರಟು ಕೇರಳ ಮತ್ತು ತ್ರಿಗರ್ತದೇಶಗಳನ್ನು ಸಂಚರಿಸಿ ಸದಾ-ಸರ್ವದಾ ಶ್ರೀಶಂಕರನ ಸಾನ್ನಿಧ್ಯವಿರುವ ಗೋಕರ್ಣಕ್ಷೇತ್ರಕ್ಕೆ ಹೋಗಿ ಮಹಾಬಲೇಶ್ವರನದರ್ಶನ ಮಾಡಿದನು. ॥ ೧೯ ॥ ಅಲ್ಲಿಂದ ಮುಂದೆ ನೀರಿನಿಂದಾವೃತವಾದ ದ್ವೀಪದಲ್ಲಿ ನಿವಾಸ ಮಾಡಿದ್ದ ಆರ್ಯಾ ದುರ್ಗೆಯ ದರ್ಶನಮಾಡಲು ಕೊಂಕಣ ಪ್ರದೇಶಕ್ಕೆ ಹೋದನು ಮತ್ತೆ ಅಲ್ಲಿಂದ ಹೊರಟು ಶೂರ್ಪಾರಕ ಕ್ಷೇತ್ರದ ಯಾತ್ರೆ ಮಾಡಿದನು. ಬಳಿಕ ತಾಪೀ, ಪಯೋಷ್ಣಿ ಮತ್ತು ನಿರ್ವಿಂಧ್ಯಾ ನದಿಗಳಲ್ಲಿ ಸ್ನಾನಮಾಡಿ ದಂಡಕಾರಣ್ಯಕ್ಕೆ ಹೋದನು. ॥ ೨೦ ॥

ಪ್ರವಿಶ್ಯ ರೇವಾಮಗಮದ್ಯತ್ರ ಮಾಹಿಷ್ಮತೀ ಪುರೀ ।
ಮನುತೀರ್ಥಮುಪಸ್ಪೃಶ್ಯ ಪ್ರಭಾಸಂ ಪುನರಾಗಮತ್ ॥ ೨೧ ॥

ಶ್ರುತ್ವಾ ದ್ವಿಜೈಃ ಕಥ್ಯಮಾನಂ ಕುರುಪಾಂಡವಸಂಯುಗೇ ।
ಸರ್ವರಾಜನ್ಯನಿಧನಂ ಭಾರಂ ಮೇನೇ ಹೃತಂ ಭುವಃ ॥ ೨೨ ॥

ಸ ಭೀಮದುರ್ಯೋಧನಯೋರ್ಗದಾಭ್ಯಾಂ ಯುಧ್ಯತೋರ್ಮೃಧೇ ।
ವಾರಯಿಷ್ಯನ್ವಿನಶನಂ ಜಗಾಮ ಯದುನಂದನಃ ॥ ೨೩ ॥

ಯುಧಿಷ್ಠಿರಸ್ತು ತಂ ದೃಷ್ಟ್ವಾ ಯಮೌ ಕೃಷ್ಣಾರ್ಜುನಾವಪಿ ।
ಅಭಿವಾದ್ಯಾಭವಂಸ್ತೂಷ್ಣೀಂ ಕಿಂವಿವಕ್ಷುರಿಹಾಗತಃ ॥ ೨೪ ॥

ಗದಾಪಾಣೀ ಉಭೌ ದೃಷ್ಟ್ವಾ ಸಂರಬ್ಧೌ ವಿಜಯೈಷಿಣೌ ।
ಮಂಡಲಾನಿ ವಿಚಿತ್ರಾಣಿ ಚರಂತಾವಿದಮಬ್ರವೀತ್ ॥ ೨೫ ॥

ಯುವಾಂ ತುಲ್ಯಬಲೌ ವೀರೌ ಹೇ ರಾಜನ್ ಹೇ ವೃಕೋದರ ।
ಏಕಂ ಪ್ರಾಣಾಧಿಕಂ ಮನ್ಯೇ ಉತೈಕಂ ಶಿಕ್ಷಯಾಧಿಕಮ್ ॥ ೨೬ ॥

ತಸ್ಮಾದೇಕತರಸ್ಯೇಹ ಯುವಯೋಃ ಸಮವೀರ್ಯಯೋಃ ।
ನ ಲಕ್ಷ್ಯತೇ ಜಯೋಽನ್ಯೋ ವಾ ವಿರಮತ್ವಫಲೋ ರಣಃ ॥ ೨೭ ॥

ನ ತದ್ವಾಕ್ಯಂ ಜಗೃಹತುರ್ಬದ್ಧವೈರೌ ನೃಪಾರ್ಥವತ್ ।
ಅನುಸ್ಮರಂತಾವನ್ಯೋನ್ಯಂ ದುರುಕ್ತಂ ದುಷ್ಕೃತಾನಿ ಚ ॥ ೨೮ ॥

ದಿಷ್ಟಂ ತದನುಮನ್ವಾನೋ ರಾಮೋ ದ್ವಾರವತೀಂ ಯಯೌ ।
ಉಗ್ರಸೇನಾದಿಭಿಃ ಪ್ರೀತೈರ್ಜ್ಞಾತಿಭಿಃ ಸಮುಪಾಗತಃ ॥ ೨೯ ॥

ತಂ ಪುನರ್ನೈಮಿಷಂ ಪ್ರಾಪ್ತಮೃಷಯೋಽಯಾಜಯನ್ಮುದಾ ।
ಕ್ರತ್ವಂಗಂ ಕ್ರತುಭಿಃ ಸರ್ವೈರ್ನಿವೃತ್ತಾಖಿಲವಿಗ್ರಹಮ್ ॥ ೩೦ ॥

ಅಲ್ಲಿಂದ ನರ್ಮದಾ ತೀರದಲ್ಲಿರುವ ಮಾಹಿಷ್ಮತಿಪುರಿಗೆ ಹೋಗಿ ಅಲ್ಲಿ ಮನುತೀರ್ಥದಲ್ಲಿ ಸ್ನಾನಮಾಡಿ ಮತ್ತೆ ಪ್ರಭಾಸ ಕ್ಷೇತ್ರಕ್ಕೆ ಹೊರಟುಬಂದನು. ॥ ೨೧ ॥ ಅಲ್ಲಿ ಅವನು ಕೌರವ-ಪಾಂಡವರ ಯುದ್ಧದಲ್ಲಿ ಅಧಿಕಾಂಶ ಕ್ಷತ್ರಿಯರ ಸಂಹಾರವಾಗಿದೆ ಎಂದು ಬ್ರಾಹ್ಮಣರಿಂದ ಕೇಳಿದನು. ಈಗ ಬಹಳಷ್ಟು ಭೂಭಾರವು ತಗ್ಗಿತೆಂದು ಅವನು ಅಂದುಕೊಂಡನು. ॥ ೨೨ ॥ ಮಹಾಭಾರತ ಸಂಗ್ರಾಮದ ಕೊನೆಯ ದಿನ ರಣರಂಗದಲ್ಲಿ ಭೀಮಸೇನ ಮತ್ತು ದುರ್ಯೋಧನರ ಗದಾಯುದ್ಧ ನಡೆಯುತ್ತಿದ್ದಾಗಲೇ ಬಲರಾಮನು ಅವರನ್ನು ತಡೆಯಲು ಕುರುಕ್ಷೇತ್ರಕ್ಕೆ ಹೋದನು. ॥ ೨೩ ॥

ಬಲರಾಮನನ್ನು ನೋಡಿ ಮಹಾರಾಜಯುಧಿಷ್ಠಿರ, ನಕುಲ, ಸಹದೇವ, ಭಗವಾನ್ ಶ್ರೀಕೃಷ್ಣ ಅರ್ಜುನ - ಇವರೆಲ್ಲರೂ ಅವನಿಗೆ ನಮಸ್ಕಾರ ಮಾಡಿ ಸುಮ್ಮನೇ ಇದ್ದರು. ಇವನು ಏನು ಹೇಳಲು ಇಲ್ಲಿಗೆ ಬಂದಿರುವನೋ ಎಂದು ಹೆದರುತ್ತಲೇ ಮನಸ್ಸಿನಲ್ಲಿ ಯೋಚಿಸುತ್ತಿದ್ದರು. ॥ ೨೪ ॥ ಆ ಸಮಯದಲ್ಲಿ ಭೀಮಸೇನ ಮತ್ತು ದುರ್ಯೋಧನ ಇಬ್ಬರೂ ಕೈಗಳಲ್ಲಿ ಗದೆಗಳನ್ನು ಹಿಡಿದುಕೊಂಡು ಕ್ರೋಧಾಭಿಭೂತರಾಗಿ ಒಬ್ಬರು ಮತ್ತೊಬ್ಬರನ್ನು ಗೆಲ್ಲಬೇಕೆಂಬ ಆಶಯದಿಂದ ಮಂಡಲಾಕಾರವಾಗಿ ಹೆಜ್ಜೆಯ ನ್ನಿಡುತ್ತಾ ನಾನಾ ರೀತಿಯ ಪಟ್ಟುಗಳನ್ನು ಪ್ರಯೋಗಿಸುತ್ತಾ ಕಾದಾಡುತ್ತಿದ್ದರು. ಅವರನ್ನು ನೋಡಿ ಬಲರಾಮನು ಹೇಳಿದನು - ॥ ೨೫ ॥ ಭೀಮ ದುರ್ಯೋಧನರೇ! ನೀವಿಬ್ಬರು ವೀರರಿದ್ದೀರಿ. ನಿಮ್ಮಿಬ್ಬರಲ್ಲಿಯೂ ಬಲ-ಪೌರುಷಗಳು ಸಮಾನವಾಗಿವೆ. ಭೀಮಸೇನನಲ್ಲಿ ಬಲವು ಹೆಚ್ಚಾಗಿದೆ ಮತ್ತು ದುರ್ಯೋಧನನು ಗದಾಯುದ್ಧದಲ್ಲಿ ಹೆಚ್ಚಿನ ಶಿಕ್ಷಣ ಪಡೆದಿರುವನೆಂದು ನಾನು ತಿಳಿಯುತ್ತೇನೆ. ॥ ೨೬ ॥ ಆದ್ದರಿಂದ ನಿಮ್ಮಂತಹ ಸಮಾನ ಬಲಶಾಲಿಗಳಲ್ಲಿ ಯಾರೇ ಒಬ್ಬನ ವಿಜಯ ಅಥವಾ ಪರಾಜಯವಾಗುವುದು ಕಾಣುವುದಿಲ್ಲ. ಆದ್ದರಿಂದ ನೀವು ವ್ಯರ್ಥವಾಗಿ ಯುದ್ಧಮಾಡಬೇಡಿ. ಈಗ ಇದನ್ನು ನಿಲ್ಲಿಸಿ ಬಿಡಿರಿ. ॥ ೨೭ ॥ ಪರೀಕ್ಷಿತನೇ! ಬಲರಾಮನ ಮಾತು ಇಬ್ಬರಿಗೂ ಹಿತಕರವಾಗಿತ್ತು. ಆದರೆ ಅವರಿಬ್ಬರ ವೈರಭಾವವು ಅತೀವದೃಢವಾಗಿದ್ದರಿಂದ ಅವರು ಬಲರಾಮನ ಮಾತನ್ನು ಪುರಸ್ಕರಿಸಲಿಲ್ಲ. ಅವರು ಹಿಂದಿನ ದುರ್ವ್ಯವಹಾರಗಳನ್ನು ನೆನೆಯುತ್ತಾ ಕಟುಮಾತುಗಳನ್ನಾಡುತ್ತಾ ಉನ್ಮತ್ತರಾಗಿಯೇ ಇದ್ದರು. ॥ ೨೮ ॥ ಭಗವಾನ್ ಬಲರಾಮನು - 'ಇವರ ಪ್ರಾರಬ್ಧವೇ ಹೀಗಿದೆ' ಎಂದು ನಿಶ್ಚಯಿಸಿ, ಈ ವಿಷಯದಲ್ಲಿ ಆಗ್ರಹ ಮಾಡದೆ ದ್ವಾರಕೆಗೆ ಹೊರಟುಹೋದನು. ದ್ವಾರಕೆಯಲ್ಲಿ ಉಗ್ರಸೇನರೇ ಮುಂತಾದ ಹಿರಿಯರೂ ಹಾಗೂ ಇತರ ಸಂಬಂಧಿಗಳು ಅತ್ಯಂತ ಪ್ರೇಮದಿಂದ ಮುಂದೆ ಬಂದು ಬಲರಾಮನನ್ನು ಸ್ವಾಗತಿಸಿದರು. ॥ ೨೯ ॥ ಅಲ್ಲಿಂದ ಪುನಃ ಬಲರಾಮನು ನೈಮಿಷಾರಣ್ಯ ಕ್ಷೇತ್ರಕ್ಕೆ ಹೋದನು. ಅಲ್ಲಿಯ ಋಷಿಗಳು ಯುದ್ಧಾದಿಗಳಿಂದ ನಿವೃತ್ತನಾದ ಬಲರಾಮನಿಂದ ತುಂಬು ಪ್ರೇಮದಿಂದ ಎಲ್ಲ ಪ್ರಕಾರದ ಯಜ್ಞಗಳನ್ನು ಮಾಡಿಸಿದರು. ಪರೀಕ್ಷಿತನೇ! ನಿಜಹೇಳಬೇಕೆಂದರೆ, ಇರುವ ಎಲ್ಲ ಯಜ್ಞಗಳು ಬಲರಾಮನ ಅಂಗಭೂತವೇ ಆಗಿವೆ. ಅದಕ್ಕಾಗಿ ಅವನ ಈ ಯಜ್ಞಾನುಷ್ಠಾನವು ಕೇವಲ ಲೋಕಸಂಗ್ರಹಕ್ಕಾಗಿಯೇ ಇತ್ತು. ॥ ೩೦ ॥

ತೇಭ್ಯೋ ವಿಶುದ್ಧವಿಜ್ಞಾನಂ ಭಗವಾನ್ ವ್ಯತರದ್ವಿಭುಃ।
ಯೇನೈವಾತ್ಮನ್ಯದೋ ವಿಶ್ವಮಾತ್ಮಾನಂ ವಿಶ್ವಗಂ ವಿದುಃ
॥ ೩೧ ॥

ಸ್ವಪತ್ನ್ಯಾವಭೃಥಸ್ನಾತೋ ಜ್ಞಾತಿಬಂಧುಸುಹೃದ್ವೃತಃ।
ರೇಜೇ ಸ್ವಜ್ಯೋತ್ಸ್ನಯೇವೇಂದುಃ ಸುವಾಸಾಃ ಸುಷ್ಠ್ವಲಂಕೃತಃ
॥ ೩೨ ॥

ಈದೃಗ್ವಿಧಾನ್ಯಸಂಖ್ಯಾನಿ ಬಲಸ್ಯ ಬಲಶಾಲಿನಃ।
ಅನಂತಸ್ಯಾಪ್ರಮೇಯಸ್ಯ ಮಾಯಾಮರ್ತ್ಯಸ್ಯ ಸಂತಿ ಹಿ
॥ ೩೩ ॥

ಯೋಽನುಸ್ಮರೇತ ರಾಮಸ್ಯ ಕರ್ಮಾಣ್ಯದ್ಭುತಕರ್ಮಣಃ।
ಸಾಯಂ ಪ್ರಾತರನಂತಸ್ಯ ವಿಷ್ಣೋಃ ಸ ದಯಿತೋ ಭವೇತ್
॥ ೩೪ ॥

ಸರ್ವಸಮರ್ಥನಾದ ಬಲಭದ್ರನು ಆ ಋಷಿಗಳಿಗೆ ವಿಶುದ್ಧ ತತ್ತ್ವಜ್ಞಾನದ ಉಪದೇಶ ಮಾಡಿದನು. ಇದರಿಂದ ಆ ಜನರೆಲ್ಲರೂ ಈ ಸಮಸ್ತ ವಿಶ್ವವು ತನ್ನಲ್ಲಿ ಮತ್ತು ತನ್ನನ್ನು ಸಮಸ್ತ ವಿಶ್ವದಲ್ಲಿ ಅನುಭವಿಸತೊಡಗಿದರು. ॥ ೩೧ ॥ ಅನಂತರ ಬಲರಾಮನು ತನ್ನ ಪತ್ನೀ ರೇವತಿಯೊಂದಿಗೆ ಯಜ್ಞಾಂತಸ್ನಾನ (ಅವಭೃತ) ಮಾಡಿ, ಸುಂದರವಾದ ವಸ್ತ್ರಾಲಂಕಾರಗಳಿಂದ ವಿಭೂಷಿತನಾಗಿ ಸ್ವಜನ-ಸಂಬಂಧಿಗಳೊಡನೆ - ತನ್ನ ಬೆಳದಿಂಗಳಿಂದ ನಕ್ಷತ್ರಗಳೊಡನೆ ಬೆಳಗುವ ಚಂದ್ರನಂತೆ ಶೋಭಾಯಮಾನನಾದನು. ॥ ೩೨ ॥ ಪರೀಕ್ಷಿತನೇ! ಭಗವಾನ್ ಬಲರಾಮನು ಸಾಕ್ಷಾತ್ ಅನಂತನೇ ಆಗಿದ್ದಾನೆ. ಅವನ ಸ್ವರೂಪವು ಮನ-ವಚನಗಳಿಗೆ ಅತೀತವಾದುದು. ಅವನು ಲೀಲೆಗಾಗಿಯೆ ಮನುಷ್ಯ ಶರೀರವನ್ನು ಧರಿಸಿರುವನು. ಆ ಮಹಾಬಲಶಾಲಿಯಾದ ಬಲರಾಮನ ಇಂತಹ ಅನಂತ ಚರಿತ್ರೆಗಳನ್ನು ಯಾರು ತಾನೇ ಎಣಿಸಬಲ್ಲರು ? ॥ ೩೩ ॥ ಅನಂತನೂ, ಸರ್ವವ್ಯಾಪಕನೂ, ಅದ್ಭುತ ಕರ್ಮಗಳನ್ನು ಮಾಡಿದ ಭಗವಾನ್ ಬಲರಾಮನ ಚರಿತ್ರೆಗಳನ್ನು ಸಾಯಂಕಾಲ-ಪ್ರಾತಃಕಾಲಗಳಲ್ಲಿ ಸ್ಮರಿಸುವ ಮನುಷ್ಯನು ಭಗವಂತನಿಗೆ ಅತ್ಯಂತ ಪ್ರಿಯನೆನಿಸುವನು. ॥ ೩೪ ॥

ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೭೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಬಲದೇವತೀರ್ಥಯಾತ್ರಾ ನಿರೂಪಣಂ ನಾಮ ಏಕೋನಾಶೀತಿತಮೋಽಧ್ಯಾಯಃ ॥ ೭೯ ॥

# ಎಂಭತ್ತನೆಯ ಅಧ್ಯಾಯ

## ಶ್ರೀಕೃಷ್ಣನಿಂದ ಸುದಾಮನ ಸ್ವಾಗತ

ರಾಜೋವಾಚ

ಭಗವನ್ ಯಾನಿ ಚಾನ್ಯಾನಿ
ಮುಕುಂದಸ್ಯ ಮಹಾತ್ಮನಃ ।
ವೀರ್ಯಾಣ್ಯನಂತವೀರ್ಯಸ್ಯ
ಶ್ರೋತುಮಿಚ್ಛಾಮಹೇ ಪ್ರಭೋ ॥ ೧ ॥

ಕೋ ನು ಶ್ರುತ್ವಾಸಕೃದ್ ಬ್ರಹ್ಮನ್ನುತ್ತಮಶ್ಲೋಕಸತ್ಕಥಾಃ।
ವಿರಮೇತ ವಿಶೇಷಜ್ಞೋ ವಿಷಣ್ಣಃ ಕಾಮಮಾರ್ಗಣೈಃ
॥ ೨ ॥

ಸಾ ವಾಗ್ಯಯಾ ತಸ್ಯ ಗುಣಾನ್ ಗೃಣೀತೇ
ಕರೌ ಚ ತತ್ಕರ್ಮಕರೌ ಮನಶ್ಚ ।
ಸ್ಮರೇದ್ವಸಂತಂ ಸ್ಥಿರಜಂಗಮೇಷು
ಶೃಣೋತಿ ತತ್ಪುಣ್ಯಕಥಾಃ ಸ ಕರ್ಣಃ ॥ ೩ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾತ್ಮರೇ ! ಪ್ರೇಮ ಮತ್ತು ಮುಕ್ತಿಯನ್ನು ಕರುಣಿಸುವ ಪರಬ್ರಹ್ಮ ಪರಮಾತ್ಮನಾದ ಭಗವಾನ್ ಶ್ರೀಕೃಷ್ಣನ ಶಕ್ತಿಯು ಅನಂತವಾಗಿದೆ. ಅದಕ್ಕಾಗಿ ಮಾಧುರ್ಯ ಹಾಗೂ ಐಶ್ವರ್ಯಗಳಿಂದ ಕೂಡಿದ ಲೀಲೆಗಳೂ ಅನಂತವಾಗಿವೆ. ತಾವು ಇದುವರೆಗೂ ವರ್ಣಿಸದಿರುವ ಅವನ ಇತರ ಲೀಲೆಗಳನ್ನೂ ಕೇಳಲು ನಾವು ಬಯಸುತ್ತಿದ್ದೇವೆ. ॥ ೧ ॥ ಬ್ರಾಹ್ಮಣೋತ್ತಮರೇ ! ಈ ಜೀವನು ವಿಷಯ ಸುಖವನ್ನು ಅರಸುತ್ತಾ-ಅರಸುತ್ತಾ ಅತ್ಯಂತ ದುಃಖಿತನಾಗಿದ್ದಾನೆ. ಅವು ಬಾಣಗಳಂತೆ ಇವನ ಮನಸ್ಸಿಗೆ ನಾಟುತ್ತಾ ಇರುತ್ತವೆ. ಇಂತಹ ಸ್ಥಿತಿಯಲ್ಲಿ ಪವಿತ್ರಕೀರ್ತಿ ಭಗವಾನ್ ಶ್ರೀಕೃಷ್ಣನ ಮಂಗಳಮಯ ಲೀಲೆಗಳನ್ನು ಪದೇ-ಪದೇ ಶ್ರವಣಿಸಿದ ರಸಜ್ಞನಾದವನು ಅದರಿಂದ ಹೇಗೆ ತಾನೇ ವಿಮುಖನಾದಾನು ? ॥ ೨ ॥ ಭಗವಂತನ ಗುಣಗಳನ್ನು ಹಾಡುತ್ತಿರುವ ವಾಣಿಯೆ ನಿಜವಾದ ವಾಣಿಯು. ಭಗವಂತನ ಸೇವೆಗಾಗಿ ದುಡಿಯುವ ಕೈಗಳೇ ನಿಜವಾದ ಕೈಗಳು. ಚರಾಚರ ಪ್ರಾಣಿಗಳಲ್ಲಿ ವಾಸಿಸುವ ಭಗವಂತನನ್ನು ಸ್ಮರಿಸುವ ಮನಸ್ಸೇ ನಿಜವಾದ ಮನಸ್ಸು. ಭಗವಂತನ ಪುಣ್ಯಮಯ ಕಥೆಗಳನ್ನು ಕೇಳುವ ಕಿವಿಗಳೇ ನಿಜವಾದ ಕಿವಿಗಳೆಂದು ಕರೆಯಲ್ಪಡುವವು. ॥ ೩ ॥

ಶಿರಸ್ತು ತಸ್ಯೋಭಯಲಿಂಗಮಾನಮೇ-
ತ್ತದೇವ ಯತ್ಪಶ್ಯತಿ ತದ್ಧಿ ಚಕ್ಷುಃ ।
ಅಂಗಾನಿ ವಿಷ್ಣೋರಥ ತಜ್ಜನಾನಾಂ
ಪಾದೋದಕಂ ಯಾನಿ ಭಜಂತಿ ನಿತ್ಯಮ್ ॥ ೪ ॥

ಚರಾಚರ ಜಗತ್ತನ್ನು ಭಗವಂತನ ಅಚಲ ಪ್ರತಿಮೆ ಎಂದು ಅರಿತು ನಮಸ್ಕರಿಸುವ ತಲೆಯೇ ಸಾರ್ಥಕವಾದ ತಲೆಯು. ಸರ್ವತ್ರ ಭಗವದ್ವಿಹಗ್ರವನ್ನು ದರ್ಶಿಸುವ ಕಣ್ಣುಗಳೇ ವಾಸ್ತವವಾದ ಕಣ್ಣುಗಳು. ಭಗವಂತನ ಮತ್ತು ಅವನ ಭಕ್ತರ ಚರಣೋದಕವನ್ನು ಸೇವಿಸುವ ಅಂಗಗಳೇ ನಿಜವಾದ ಅಂಗಗಳು. ನಿಜಹೇಳ ಬೇಕೆಂದರೆ ಅವನವರಾಗುವುದೇ ಸಾರ್ಥಕ ಜೀವನವು. ಆದುದ ರಿಂದ ಅವನ ಕಥಾಮೃತವನ್ನು ವರ್ಣಿಸಿರಿ. ॥ ೪ ॥

*ಸೂತ ಉವಾಚ*

ವಿಷ್ಣುರಾತೇನ ಸಂಪೃಷ್ಟೋ ಭಗವಾನ್ ಬಾದರಾಯಣಿಃ ।
ವಾಸುದೇವೇ ಭಗವತಿ ನಿಮಗ್ನಹೃದಯೋಽಬ್ರವೀತ್ ॥ ೫ ॥

**ಸೂತ ಪುರಾಣಿಕರು ಹೇಳುತ್ತಾರೆ –** ಶೌನಕಾದಿ ಋಷಿಗಳಿರಾ ! ಪರೀಕ್ಷಿದ್ರಾಜನು ಹೀಗೆ ಪ್ರಶ್ನಿಸಿದಾಗ ಪೂಜ್ಯರಾದ ಭಕ್ತಶಿರೋಮಣಿ ಗಳಾದ ಶ್ರೀಶುಕಮುನಿಗಳ ಮನಸ್ಸು ಶ್ರೀಕೃಷ್ಣನಲ್ಲೇ ತಲ್ಲೀನವಾಗಿ ಹೋಯಿತು. ಸ್ವಲ್ಪ ಹೊತ್ತು ತಡೆದು ಅವರು ಪರೀಕ್ಷಿತನಿಗೆ ಹೇಳತೊಡಗಿದರು. ॥ ೫ ॥

*ಶ್ರೀಶುಕ ಉವಾಚ*

ಕೃಷ್ಣಸ್ಯಾಸೀತ್ಸಖಾ ಕಶ್ಚಿದ್ ಬ್ರಾಹ್ಮಣೋ ಬ್ರಹ್ಮವಿತ್ತಮಃ ।
ವಿರಕ್ತ ಇಂದ್ರಿಯಾರ್ಥೇಷು ಪ್ರಶಾಂತಾತ್ಮಾ ಜಿತೇಂದ್ರಿಯಃ ॥ ೬ ॥

**ಶ್ರೀಶುಕಮಹಾಮುನಿಗಳು ಹೇಳಿದರು –** ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನಿಗೆ ಪರಮಮಿತ್ರನಾದ ಬ್ರಾಹ್ಮಣನೊಬ್ಬನಿದ್ದನು. ಅವನು ಮಹಾಬ್ರಹ್ಮಜ್ಞಾನಿಯೂ, ವಿಷಯಗಳಿಂದ ವಿರಕ್ತನೂ, ಶಾಂತಚಿತ್ತನೂ, ಜಿತೇಂದ್ರಿಯನೂ ಆಗಿದ್ದನು. ॥ ೬ ॥ ಅವನು ಗೃಹಸ್ಥನಾಗಿದ್ದರೂ ಯಾವುದೇ ಪ್ರಕಾರದ ಸಂಗ್ರಹ- ಪರಿಗ್ರಹ ವಿಲ್ಲದೆ ಪ್ರಾರಬ್ಧಕ್ಕನುಸಾರ ದೊರೆತುದರಲ್ಲಿ ಸಂತುಷ್ಟನಾಗಿರುತ್ತಿ ದ್ದನು. ಅವನ ವಸ್ತ್ರಗಳು ಹರಿದು – ಹಳೆಯದಾಗಿದ್ದು ಕುಚೇಲ ನೆಂದೇ ಜನರು ಅವನನ್ನು ಕರೆಯುತ್ತಿದ್ದರು. ಅವನ ಪತ್ನಿಯೂ ಅವನಂತೇ ಇದ್ದು ಪತಿಯಂತೆ–ಹಸಿವೆಯಿಂದ ಕೃಶಳಾಗಿದ್ದಳು.॥ ೭ ॥

ಯದೃಚ್ಛಯೋಪಪನ್ನೇನ ವರ್ತಮಾನೋ ಗೃಹಾಶ್ರಮೀ ।
ತಸ್ಯ ಭಾರ್ಯಾ ಕುಚೈಲಸ್ಯ ಕ್ಷುತ್ಕ್ಷಾಮಾ ಚ ತಥಾವಿಧಾ ॥ ೭ ॥

ಪತಿವ್ರತಾ ಪತಿಂ ಪ್ರಾಹ ಮ್ಲಾಯತಾ ವದನೇನ ಸಾ ।
ದರಿದ್ರಾ ಸೀದಮಾನಾ ಸಾ ವೇಪಮಾನಾಭಿಗಮ್ಯ ಚ ॥ ೮ ॥

ದರಿದ್ರತೆಯ ಪ್ರತಿಮೂರ್ತಿಯಂತಿದ್ದ ದುಃಖಿತಳಾದ ಪತಿವ್ರತೆ ಯಾದ ಆಕೆಯು ಹಸಿವಿನಿಂದ ಕಂಗೆಟ್ಟು ಒಂದು ದಿನ ತನ್ನ ಪತಿಯ ಬಳಿಗೆ ಹೋಗಿ ಬಾಡಿದ ಮುಖದಿಂದ ಸಂಕೋಚದಿಂದಲೇ ಹೀಗೆಂದಳು – ॥ ೮ ॥ ಬ್ರಾಹ್ಮಣೋತ್ತಮರೇ ! ಸಾಕ್ಷಾತ್ ಲಕ್ಷ್ಮೀಪತಿ ಯಾದ ಭಗವಾನ್ ಶ್ರೀಕೃಷ್ಣನು ನಿಮಗೆ ಸ್ನೇಹಿತನಾಗಿರುವನು. ಅವನು ವಾಂಛಾಕಲ್ಪತರುವೂ, ಶರಣಾಗತವತ್ಸಲನೂ, ಬ್ರಾಹ್ಮಣರ ಪರಮಭಕ್ತನೂ ಆಗಿರುವನು. ॥ ೯ ॥ ಪರಮಭಾಗ್ಯಶಾಲಿಗಳಾದ ಆರ್ಯಪುತ್ರರೇ ! ಆ ಭಗವಂತನು ಸಂತರ ಏಕಮಾತ್ರ ಆಶ್ರಯ ನಾಗಿರುವನು. ತಾವು ದಯವಿಟ್ಟು ಅವನ ಬಳಿಗೆ ಹೋಗಿರಿ. ನೀವು ಕುಟುಂಬಿಗಳಾಗಿದ್ದೀರಿ, ಅನ್ನವಿಲ್ಲದೆ ದುಃಖಿತರಾಗಿರುವಿರಿ ಎಂದು ತಿಳಿದಾಗ ಅವನು ನಿಮಗೆ ಬಹಳಷ್ಟು ಧನವನ್ನು ಕೊಡುವನು. ॥ ೧೦ ॥

ನನು ಬ್ರಹ್ಮನ್ ಭಗವತಃ ಸಖಾ ಸಾಕ್ಷಾಚ್ಛ್ರಿಯಃ ಪತಿಃ ।
ಬ್ರಹ್ಮಣ್ಯಶ್ಚ ಶರಣ್ಯಶ್ಚ ಭಗವಾನ್ ಸಾತ್ವತರ್ಷಭಃ ॥ ೯ ॥

ತಮುಪೈಹಿ ಮಹಾಭಾಗ ಸಾಧೂನಾಂ ಚ ಪರಾಯಣಮ್ ।
ದಾಸ್ಯತಿ ದ್ರವಿಣಂ ಭೂರಿ ಸೀದತೇ ತೇ ಕುಟುಂಬಿನೇ ॥ ೧೦ ॥

ಭೋಜ, ವೃಷ್ಣಿ ಅಂಧಕ ಇವರೇ ಮೊದಲಾದ ಯಾದವರಿಗೆ ಸ್ವಾಮಿಯಾಗಿ ಶ್ರೀಕೃಷ್ಣನು ಈಗ ದ್ವಾರಕೆಯಲ್ಲೇ ಇದ್ದಾನೆ. ತನ್ನ ಚರಣಕಮಲಗಳನ್ನು ಸ್ಮರಿಸುವ ಭಕ್ತರಿಗೆ ಅವನು ತನ್ನನ್ನೇ ಕೊಟ್ಟು ಕೊಂಡು ಬಿಡುತ್ತಾನೆ. ಹೀಗಿರುವಾಗ ಜಗದ್ಗುರುವಾದ ಶ್ರೀಕೃಷ್ಣನು ತನ್ನ ಭಕ್ತರಿಗೆ ಲೆಕ್ಕಕ್ಕಿಲ್ಲದ (ಭಕ್ತಿಯ ಹೊರತಾಗಿ ಬೇರೇನೂ ಬೇಕಿಲ್ಲ) ಪ್ರಾಪಂಚಿಕ ಸುಖಗಳನ್ನು, ಐಶ್ವರ್ಯವನ್ನು ದಯ ಪಾಲಿಸುವುದರಲ್ಲಿ ಆಶ್ಚರ್ಯವೇನಿದೆ ? ॥ ೧೧ ॥ ಹೀಗೆ ಆ ಪತಿ ವ್ರತೆಯು ತನ್ನ ಪತಿಯಲ್ಲಿ ಹಲವುಬಾರಿ ನಮ್ರತೆಯಿಂದ ಪ್ರಾರ್ಥಿಸಿ ದಾಗ, ಸುದಾಮನೂ – ಧನದ ಮಾತಿರಲಿ, ಆದರೆ ಭಗವಾನ್ ಶ್ರೀಕೃಷ್ಣನ ದರ್ಶನವಾಗುವುದೇ ! ಇಡೀ ಜೀವನದ ಬಹಳ ದೊಡ್ಡ ಲಾಭವಾಗಿದೆ ಎಂದು ಯೋಚಿಸಿದನು. ॥ ೧೨ ॥

ಆಸ್ತೇಽಧುನಾ ದ್ವಾರವತ್ಯಾಂ ಭೋಜವೃಷ್ಣ್ಯಂಧಕೇಶ್ವರಃ ।
ಸ್ಮರತಃ ಪಾದಕಮಲಮಾತ್ಮಾನಮಪಿ ಯಚ್ಛತಿ ।
ಕಿಂನ್ವರ್ಥಕಾಮಾನ್ಭಜತೋ ನಾತ್ಯಭೀಷ್ಟಾನ್ ಜಗದ್ಗುರುಃ ॥ ೧೧ ॥

ಸ ಏವಂ ಭಾರ್ಯಯಾ ವಿಪ್ರೋ ಬಹುಶಃ ಪ್ರಾರ್ಥಿತೋ ಮೃದು ।
ಅಯಂ ಹಿ ಪರಮೋ ಲಾಭ ಉತ್ತಮಶ್ಲೋಕದರ್ಶನಮ್ ॥ ೧೨ ॥

ಇತಿ ಸಂಚಿಂತ್ಯ ಮನಸಾ ಗಮನಾಯ ಮತಿಂ ದಧೇ ।
ಅಪ್ಯಸ್ತ್ಯುಪಾಯನಂ ಕಿಂಚಿದ್ಗೃಹೇ ಕಲ್ಯಾಣಿ ದೀಯತಾಮ್
॥ ೧೩ ॥

ಯಾಚಿತ್ವಾ ಚತುರೋ ಮುಷ್ಟೀನ್ ವಿಪ್ರಾನ್ ಪೃಥುಕತಂಡುಲಾನ್ ।
ಚೈಲಖಂಡೇನ ತಾನ್ಬದ್ಧ್ವಾ ಭರ್ತ್ರೇ ಪ್ರಾದಾದುಪಾಯನಮ್
॥ ೧೪ ॥

ಸ ತಾನಾದಾಯ ವಿಪ್ರಾಗ್ರ್ಯಃ ಪ್ರಯಯೌ ದ್ವಾರಕಾಂ ಕಿಲ ।
ಕೃಷ್ಣಸಂದರ್ಶನಂ ಮಹ್ಯಂ ಕಥಂ ಸ್ಯಾದಿತಿ ಚಿಂತಯನ್
॥ ೧೫ ॥

ತ್ರೀಣಿ ಗುಲ್ಮಾನ್ಯತೀಯಾಯ ತಿಸ್ರಃ ಕಕ್ಷಾಶ್ಚ ಸ ದ್ವಿಜಃ ।
ವಿಪ್ರೋಽಗಮ್ಯಾಂಧಕವೃಷ್ಣೀನಾಂ ಗೃಹೇಷ್ವಚ್ಯುತಧರ್ಮಿಣಾಮ್
॥ ೧೬ ॥

ಗೃಹಂ ದ್ವ್ಯಷ್ಟಸಹಸ್ರಾಣಾಂ ಮಹಿಷೀಣಾಂ ಹರೇರ್ದ್ವಿಜಃ ।
ವಿವೇಶೈಕತಮಂ ಶ್ರೀಮದ್ಬ್ರಹ್ಮಾನಂದಂ ಗತೋ ಯಥಾ
॥ ೧೭ ॥

ತಂ ವಿಲೋಕ್ಯಾಚ್ಯುತೋ ದೂರಾತ್ ಪ್ರಿಯಾಪರ್ಯಂಕಮಾಸ್ಥಿತಃ ।
ಸಹಸೋತ್ಥಾಯ ಚಾಭ್ಯೇತ್ಯ ದೋರ್ಭ್ಯಾಂ ಪರ್ಯಗ್ರಹೀನ್ಮುದಾ
॥ ೧೮ ॥

ಸಖ್ಯುಃ ಪ್ರಿಯಸ್ಯ ವಿಪ್ರರ್ಷೇರಂಗಸಂಗಾತಿನಿರ್ವೃತಃ ।
ಪ್ರೀತೋ ವ್ಯಮುಂಚದಬ್ಬಿಂದೂನ್ನೇತ್ರಾಭ್ಯಾಂ ಪುಷ್ಕರೇಕ್ಷಣಃ
॥ ೧೯ ॥

ಅಥೋಪವೇಶ್ಯ ಪರ್ಯಂಕೇ ಸ್ವಯಂ ಸಖ್ಯುಃ ಸಮರ್ಹಣಮ್ ।
ಉಪಹೃತ್ಯಾವನಿಜ್ಯಾಸ್ಯ ಪಾದೌ ಪಾದಾವನೇಜನೀಃ
॥ ೨೦ ॥

ಅಗ್ರಹೀಚ್ಛಿರಸಾ ರಾಜನ್ ಭಗವಾನ್ ಲೋಕಪಾವನಃ ।
ವ್ಯಲಿಂಪದ್ದಿವ್ಯಗಂಧೇನ ಚಂದನಾಗುರುಕುಂಕುಮೈಃ
॥ ೨೧ ॥

ಧೂಪೈಃ ಸುರಭಿಭಿರ್ಮಿತ್ರಂ ಪ್ರದೀಪಾವಲಿಭಿರ್ಮುದಾ ।
ಅರ್ಚಿತ್ವಾಽಽವೇದ್ಯ ತಾಂಬೂಲಂ ಗಾಂ ಚ ಸ್ವಾಗತಮಬ್ರವೀತ್
॥ ೨೨ ॥

ಹೀಗೆ ವಿಚಾರಮಾಡಿ ಅವನು ದ್ವಾರಕೆಗೆ ಹೋಗಲು ನಿಶ್ಚಯಿಸಿದನು ಮತ್ತು ಪತ್ನಿಯಲ್ಲಿ ಕೇಳಿದನು - ಕಲ್ಯಾಣೀ! ಶ್ರೀಕೃಷ್ಣನಿಗೆ ಕೊಡಲು ಯೋಗ್ಯವಾದ ಏನಾದರೂ ವಸ್ತು ಮನೆಯಲ್ಲಿದೆಯೇ? ಇದ್ದರೆ ಕೊಡು. ಸ್ನೇಹಿತನನ್ನು ಬರಿಗೈಯಿಂದ ಎಂತು ಕಾಣುವುದು? ॥ ೧೩ ॥ ಆಗ ಆ ಬ್ರಾಹ್ಮಣಿಯು ಅಕ್ಕ-ಪಕ್ಕದ ಬ್ರಾಹ್ಮಣರ ಮನೆಗಳಿಂದ ನಾಲ್ಕು ಮುಷ್ಟಿ ಅವಲಕ್ಕಿಯನ್ನು ಬೇಡಿ ತಂದು, ಒಂದು ಹರಕು ಬಟ್ಟೆಯಲ್ಲಿ ಕಟ್ಟಿ ಭಗವಂತನಿಗೆ ಕೊಡಲಿಕ್ಕಾಗಿ ಗಂಡನ ಕೈಯಲ್ಲಿಟ್ಟಳು. ॥ ೧೪ ॥ ಅನಂತರ ಆ ಅವಲಕ್ಕಿಯನ್ನು ಕಂಕುಳಲ್ಲಿಟ್ಟುಕೊಂಡು ಸುದಾಮನು ದ್ವಾರಕೆಗೆ ಹೊರಟನು. ನನಗೆ ಭಗವಾನ್ ಶ್ರೀಕೃಷ್ಣನ ದರ್ಶನ ಎಂತಾಗುವುದು ಎಂದು ದಾರಿಯಲ್ಲಿ ಯೋಚಿಸುತ್ತಾ ಹೋಗುತ್ತಿದ್ದನು. ॥ ೧೫ ॥

ಪರೀಕ್ಷಿತನೇ! ದ್ವಾರಕೆಯನ್ನು ತಲುಪಿದೊಡನೆ ಆ ಬ್ರಾಹ್ಮಣೋತ್ತಮನು ಇತರ ಬ್ರಾಹ್ಮಣರೊಂದಿಗೆ ಮೂರು ಸೇನಾ ತುಕಡಿಗಳನ್ನು, ಮೂರು ಪ್ರಾಕಾರವನ್ನು ದಾಟಿ, ಪ್ರವೇಶಿಸಲು ಅತ್ಯಂತ ಕಠಿಣವಾದ ಭಗವದ್ಧರ್ಮವನ್ನು ಪಾಲಿಸುವ ಅಂಧಕ, ವೃಷ್ಣಿ ವಂಶೀಯ ಯಾದವರ ಅರಮನೆಗಳನ್ನು ತಲುಪಿದನು. ॥ ೧೬ ॥ ಅವುಗಳ ನಡುವೆ ಭಗವಾನ್ ಶ್ರೀಕೃಷ್ಣನ ಹದಿನಾರು ಸಾವಿರ ರಾಣಿಯರ ಅರಮನೆಗಳಿದ್ದವು. ಅವುಗಳಲ್ಲಿ ಬಹಳವಾಗಿ ಅಲಂಕರಿಸಲ್ಪಟ್ಟು ಅತ್ಯಂತ ಶೋಭಾಯುಕ್ತವಾಗಿದ್ದ ಅರಮನೆಯೊಂದರೊಳಗೆ ಬ್ರಾಹ್ಮಣನು ಪ್ರವೇಶಿಸಿದನು. ಅದನ್ನು ಪ್ರವೇಶಿಸುತ್ತಲೇ ಅವನಿಗೆ ಬ್ರಹ್ಮಾನಂದದ ಸಮುದ್ರದಲ್ಲಿ ತೇಲಾಡಿದಂತೆ ಅನಿಸಿತು. ॥ ೧೭ ॥ ಆ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನು ತನ್ನ ಪ್ರಾಣಪ್ರಿಯಳಾದ ರುಕ್ಮಿಣಿಯ ಮಂಚದಲ್ಲಿ ವಿರಾಜಮಾನನಾಗಿದ್ದನು. ತನ್ನೆಡೆಗೆ ಬರುತ್ತಿದ್ದ ವಿಪ್ರೋತ್ತಮನನ್ನು ದೂರದಲ್ಲೇ ಕಂಡು ಮಂಚದಿಂದ ಇಳಿದು ಅವನ ಬಳಿಗೆ ತೆರಳಿ ಅತ್ಯಂತ ಆನಂದದಿಂದ ಅವನನ್ನು ಬಿಗಿದಪ್ಪಿಕೊಂಡನು. ॥ ೧೮ ॥ ಪರೀಕ್ಷಿತನೇ! ಪರಮಾನಂದಸ್ವರೂಪನಾದ ಶ್ರೀಕೃಷ್ಣನು ತನ್ನ ಪ್ರಿಯಸಖನಾದ ವಿಪ್ರೋತ್ತಮನ ಅಂಗಸಂಗದಿಂದ ಅತ್ಯಂತ ಆನಂದಿತನಾದನು. ಅವನ ಕಮಲದಂತಿರುವ ಕೋಮಲ ನೇತ್ರಗಳಿಂದ ಪ್ರೇಮಾಶ್ರುಗಳು ಸುರಿಯತೊಡಗಿದುವು. ॥ ೧೯ ॥ ಬಳಿಕ ಭಗವಾನ್ ಶ್ರೀಕೃಷ್ಣನು ಅವನನ್ನು ಕರೆತಂದು ತನ್ನ ಪರ್ಯಂಕದಲ್ಲಿ ಕುಳ್ಳಿರಿಸಿದನು. ಸ್ವತಃ ತಾನೇ ಪೂಜಾಸಾಮಗ್ರಿಗಳನ್ನು ತಂದು ಅವನನ್ನು ಪೂಜಿಸಿದನು. ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಎಲ್ಲರನ್ನು ಪವಿತ್ರಗೊಳಿಸುವವನಾಗಿದ್ದರೂ ಅವನು ತನ್ನ ಕೈಗಳಿಂದಲೇ ಬ್ರಾಹ್ಮಣೋತ್ತಮನ ಕಾಲುಗಳನ್ನು ತೊಳೆದು, ಆ ಚರಣೋದಕವನ್ನು ತನ್ನ ತಲೆಯಲ್ಲಿ ಧರಿಸಿಕೊಂಡನು ಹಾಗೂ ಅವನ ಶರೀರಕ್ಕೆ ಚಂದನ, ಅಗರು, ಕೇಸರಿ ಮುಂತಾದ ದಿವ್ಯ ಸುಗಂಧ ದ್ರವ್ಯಗಳನ್ನು ಲೇಪಿಸಿದನು. ॥ ೨೦-೨೧ ॥ ಮತ್ತೆ ಅವನು ಬಹಳ ಆನಂದದಿಂದ ಸುಗಂಧಿತ ಧೂಪದಿಂದ, ದೀಪಾವಳಿಗಳಿಂದ ಆರತಿಯನ್ನೆತ್ತಿ ಪೂಜೆಮಾಡಿ, ತಾಂಬೂಲ ಮತ್ತು ಗೋವನ್ನು ಕೊಟ್ಟು ಸುಮಧುರ ವಚನಗಳಿಂದ ಮಿತ್ರನೇ! ನೀನು ಬಂದುದು ಬಹಳ ಒಳ್ಳೆಯದಾಯಿತು ಎಂದು ಹೇಳುತ್ತಾ ಸ್ವಾಗತಿಸಿದನು. ॥ ೨೨ ॥

ಕುಚೈಲಂ ಮಲಿನಂ ಕ್ಷಾಮಂ ದ್ವಿಜಂ ಧಮನಿಸಂತತಮ್ ।
ದೇವೀ ಪರ್ಯಚರತ್ಸಾಕ್ಷಾಚ್ಚಾಮರವ್ಯಜನೇನ ವೈ ॥ ೨೩ ॥

ಅಂತಃಪುರಜನೋ ದೃಷ್ಟ್ವಾ ಕೃಷ್ಣೇನಾಮಲಕೀರ್ತಿನಾ ।
ವಿಸ್ಮಿತೋಽಭೂದತಿಪ್ರೀತ್ಯಾ ಅವಧೂತಂ ಸಭಾಜಿತಮ್ ॥ ೨೪ ॥

ಕಿಮನೇನ ಕೃತಂ ಪುಣ್ಯಮವಧೂತೇನ ಭಿಕ್ಷುಣಾ ।
ಶ್ರಿಯಾ ಹೀನೇನ ಲೋಕೇಽಸ್ಮಿನ್ ಗರ್ಹಿತೇನಾಧಮೇನ ಚ ॥ ೨೫ ॥

ಯೋಽಸೌ ತ್ರಿಲೋಕಗುರುಣಾ ಶ್ರೀನಿವಾಸೇನ ಸಂಭೃತಃ ।
ಪರ್ಯಂಕಸ್ಥಾಂ ಶ್ರಿಯಂ ಹಿತ್ವಾಪರಿಷ್ವಕ್ತೋಽಗ್ರಜೋ ಯಥಾ ॥ ೨೬ ॥

ಕಥಯಾಂಚಕ್ರತುರ್ಗಾಥಾಃ ಪೂರ್ವಾ ಗುರುಕುಲೇ ಸತೋಃ ।
ಆತ್ಮನೋ ಲಲಿತಾ ರಾಜನ್ಕರೌ ಗೃಹ್ಯ ಪರಸ್ಪರಮ್ ॥ ೨೭ ॥

ಶ್ರೀಭಗವಾನುವಾಚ

ಅಪಿ ಬ್ರಹ್ಮನ್ಗುರುಕುಲಾದ್ಭವತಾ ಲಬ್ಧದಕ್ಷಿಣಾತ್ ।
ಸಮಾವೃತ್ತೇನ ಧರ್ಮಜ್ಞ ಭಾರ್ಯೋಢಾ ಸದೃಶೀ ನ ವಾ ॥ ೨೮ ॥

ಪ್ರಾಯೋ ಗೃಹೇಷು ತೇ ಚಿತ್ತಮಕಾಮವಿಹತಂ ತಥಾ ।
ನೈವಾತಿಪ್ರೀಯಸೇ ವಿದ್ವನ್‌ಧನೇಷು ವಿದಿತಂ ಹಿ ಮೇ ॥ ೨೯ ॥

ಕೇಚಿತ್ಕುರ್ವಂತಿ ಕರ್ಮಾಣಿ ಕಾಮೈರಹತಚೇತಸಃ ।
ತ್ಯಜಂತಃ ಪ್ರಕೃತೀರ್ದೈವೀರ್ಯಥಾಹಂ ಲೋಕಸಂಗ್ರಹಮ್ ॥ ೩೦ ॥

ಕಚ್ಚಿದ್ಗುರುಕುಲೇ ವಾಸಂ ಬ್ರಹ್ಮನ್ಸ್ಮರಸಿ ನೌ ಯತಃ ।
ದ್ವಿಜೋ ವಿಜ್ಞಾಯ ವಿಜ್ಞೇಯಂ ತಮಸಃ ಪಾರಮಶ್ನುತೇ ॥ ೩೧ ॥

ಸ ವೈ ಸತ್ಕರ್ಮಣಾಂ ಸಾಕ್ಷಾತ್ ದ್ವಿಜಾತೇರಿಹ ಸಂಭವಃ ।
ಆದ್ಯೋಽಂಗ ಯತ್ರಾಶ್ರಮಿಣಾಂ ಯಥಾಹಂ ಜ್ಞಾನದೋ ಗುರುಃ ॥ ೩೨ ॥

ಕುಚೇಲನು ಹರಿದ-ಹಳೆಯ ವಸ್ತ್ರಗಳನ್ನುಟ್ಟಿದ್ದನು. ಅವನ ಶರೀರವು ದುರ್ಬಲವೂ ಮಲಿನವೂ ಆಗಿದ್ದಿತು. ಶರೀರದ ನರಗಳೆಲ್ಲ ಎದ್ದು ಕಾಣುತ್ತಿದ್ದವು. ಅಂತಹವನಿಗೆ ಸಾಕ್ಷಾತ್ ರುಕ್ಮಿಣೀ ದೇವಿಯೇ ಚಾಮರವನ್ನು ಬೀಸುತ್ತಾ ಸೇವೆ ಮಾಡುತ್ತಿದ್ದಳು. ॥ ೨೩ ॥ ಪವಿತ್ರ ಕೀರ್ತಿಯಾದ ಭಗವಾನ್ ಶ್ರೀಕೃಷ್ಣನು ಅತಿಶಯ ಪ್ರೀತ್ಯಾದರಗಳಿಂದ ಈ ಕುಚೇಲನಾದ ಅವಧೂತ ಬ್ರಾಹ್ಮಣನ ಸೇವೆ ಮಾಡುತ್ತಿರುವುದನ್ನು ಕಂಡು ಅಂತಃಪುರದ ಸ್ತ್ರೀಯರೆಲ್ಲ ಅಚ್ಚರಿಗೊಂಡರು. ॥ ೨೪ ॥ ಅವರು ಪರಸ್ಪರ ಹೇಳಿಕೊಂಡರು - 'ಈ ನಿರ್ಧನನೂ, ನಿಂದನೀಯನೂ, ನಿಕೃಷ್ಟನೂ, ಭಿಕ್ಷುಕನೂ ಆದ ಈ ಅವಧೂತ ಬ್ರಾಹ್ಮಣನು ಏನು ಪುಣ್ಯಮಾಡಿದ್ದನೋ! ಅದರಿಂದ ಮೂರುಲೋಕದ ಗುರುವಾದ ಶ್ರೀನಿವಾಸ ಶ್ರೀಕೃಷ್ಣನು ಸ್ವತಃ ಇವನ ಆದರ-ಸತ್ಕಾರವನ್ನು ಮಾಡುತ್ತಿರುವನಲ್ಲ! ನೋಡೇ! ಇವನು ತನ್ನ ಪರ್ಯಂಕದಲ್ಲಿ ಸೇವೆಮಾಡುತ್ತಿದ್ದ ಸಾಕ್ಷಾತ್ ಲಕ್ಷ್ಮೀರೂಪಳಾದ ರುಕ್ಮಿಣೀದೇವಿಯನ್ನು ಬಿಟ್ಟು ಈ ಬ್ರಾಹ್ಮಣನನ್ನು ತನ್ನಣ್ಣ ಬಲರಾಮನಂತೆ ಆಲಿಂಗಿಸಿಕೊಂಡನಲ್ಲ!' ॥ ೨೫-೨೬ ॥ ಪ್ರಿಯ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಮತ್ತು ಆ ಬ್ರಾಹ್ಮಣನು ಇಬ್ಬರೂ ಕೈ ಕೈಹಿಡಿದುಕೊಂಡು ತಮ್ಮ ಬಾಲ್ಯದ ಜೀವನದ ಆನಂದ ದಾಯಕ ಘಟನೆಗಳನ್ನು ಸ್ಮರಿಸಿಕೊಳ್ಳುತ್ತ, ಗುರುಕುಲದಲ್ಲಿದ್ದಾಗ ನಡೆದ ಘಟನೆಗಳನ್ನು ಮೆಲುಕುಹಾಕತೊಡಗಿದರು. ॥ ೨೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಧರ್ಮಜ್ಞನಾದ ಬ್ರಾಹ್ಮಣನೇ! ಗುರುದಕ್ಷಿಣೆಯನ್ನು ಸಮರ್ಪಿಸಿ ಗುರುಕುಲದಿಂದ ಹಿಂದಿರುಗಿದ ನಂತರ ನೀನು ತನಗೆ ಅನುರೂಪಳಾದ ಭಾರ್ಯೆಯನ್ನು ವಿವಾಹವಾದೆಯಲ್ಲವೇ? ॥ ೨೮ ॥ ವಿವಾಹಿತನಾಗಿ ಗೃಹಸ್ಥಧರ್ಮದಲ್ಲಿದ್ದರೂ ಕೂಡ ಪ್ರಾಯಶಃ ನಿನ್ನ ಮನಸ್ಸು ವಿಷಯ ಭೋಗಗಳಲ್ಲಿ ಆಸಕ್ತವಾಗಿಲ್ಲವೆಂದು ನಾನು ಭಾವಿಸಿದ್ದೇನೆ. ವಿದ್ವಾಂಸನೇ! ಧನಾದಿಗಳಲ್ಲಿಯೂ ಕೂಡ ನಿನಗೆ ಯಾವ ಪ್ರೀತಿಯು ಇಲ್ಲವೆಂಬುದು ನನಗೆ ತಿಳಿದಿದೆ. ॥ ೨೯ ॥ ಪ್ರಪಂಚದಲ್ಲಿ ಕೆಲವೇ ಜನರು ಮಾಯೆಯಿಂದ ನಿರ್ಮಿತವಾದ ವಿಷಯ ಸಂಬಂಧವಾದ ವಾಸನೆಗಳನ್ನು ದೂರಮಾಡಿ, ವಿಷಯ ವಾಸನೆಯು ಕಿಂಚಿತ್ತಾದರೂ ಮನಸ್ಸಿನಲ್ಲಿ ಇರದಿದ್ದರೂ ನನ್ನಂತೆ ಲೋಕಸಂಗ್ರಹಕ್ಕಾಗಿ ಕರ್ತವ್ಯ ಕರ್ಮಗಳನ್ನು ಮಾಡುತ್ತಿರುತ್ತಾರೆ. ॥ ೩೦ ॥ ಬ್ರಾಹ್ಮಣ ಶ್ರೇಷ್ಠನೇ! ನಾವಿಬ್ಬರೂ ಒಟ್ಟಿಗೆ ಗುರುಕುಲದಲ್ಲಿ ವಾಸಿಸುತ್ತಿದ್ದಾಗಿನ ಮಾತುಗಳು ನೆನಪಿದೆಯೆ? ನಿಜವಾಗಿ ಗುರುಕುಲದಲ್ಲೇ ದ್ವಿಜರಿಗೆ ತಾವು ತಿಳಿಯಬೇಕಾದ ಜ್ಞಾನವುಂಟಾಗುತ್ತದೆ. ಅದರ ಮೂಲಕ ಅವರು ಅಜ್ಞಾನಾಂಧಕಾರದಿಂದ ಪಾರಾಗಿ ಹೋಗುವರು. ॥ ೩೧ ॥ ಮಿತ್ರನೇ! ಈ ಪ್ರಪಂಚದಲ್ಲಿ ಶರೀರಕ್ಕೆ ಕಾರಣನಾದ ಜನ್ಮದಾತ ತಂದೆಯು ಮೊದಲನೆಯ ಗುರು. ಅನಂತರ ಉಪನಯನಾದಿ ಸಂಸ್ಕಾರಗಳನ್ನು ಮಾಡಿ ಸತ್ಕರ್ಮಗಳ ಶಿಕ್ಷಣವನ್ನು ಕೊಡುವವನು ಎರಡನೆಯ ಗುರುವು ಪೂಜ್ಯನೇ ಆಗಿರುವನು. ಬಳಿಕ ಜ್ಞಾನೋಪದೇಶವನ್ನು ಮಾಡಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಡುವ ಗುರುವು ಪರಮಾತ್ಮಸ್ವರೂಪನೇ ಆಗಿರುವನು. ವರ್ಣಾಶ್ರಮಿಗಳಿಗೆ ಹೀಗೆ ಮೂರು ಗುರುಗಳಿರುತ್ತಾರೆ. ॥ ೩೨ ॥

ನನ್ವರ್ಥಕೋವಿದಾ ಬ್ರಹ್ಮನ್ ವರ್ಣಾಶ್ರಮವತಾಮಿಹ ।
ಯೇ ಮಯಾ ಗುರುಣಾ ವಾಚಾ ತರಂತ್ಯಂಜೋ ಭವಾರ್ಣವಮ್
॥ ೩೩ ॥

ನಾಹಮಿಜ್ಯಾಪ್ರಜಾತಿಭ್ಯಾಂ ತಪಸೋಪಶಮೇನ ವಾ ।
ತುಷ್ಯೇಯಂ ಸರ್ವಭೂತಾತ್ಮಾ ಗುರುಶುಶ್ರೂಷಯಾ ಯಥಾ
॥ ೩೪ ॥

ಅಪಿ ನಃ ಸ್ಮರ್ಯತೇ ಬ್ರಹ್ಮನ್ವೃತ್ತಂ ನಿವಸತಾಂ ಗುರೌ ।
ಗುರುದಾರೈಶ್ಚೋದಿತಾನಾಮಿಂಧನಾನಯನೇ ಕ್ವಚಿತ್
॥ ೩೫ ॥

ಪ್ರವಿಷ್ಟಾನಾಂ ಮಹಾರಣ್ಯಮಪರ್ತೌ ಸುಮಹದ್ದ್ವಿಜ ।
ವಾತವರ್ಷಮಭೂತ್ತೀವ್ರಂ ನಿಷ್ಠುರಾಃ ಸ್ತನಯಿತ್ನವಃ
॥ ೩೬ ॥

ಸೂರ್ಯಶ್ಚಾಸ್ತಂ ಗತಸ್ತಾವತ್ತಮಸಾ ಚಾವೃತಾ ದಿಶಃ ।
ನಿಮ್ನಂ ಕೂಲಂ ಜಲಮಯಂ ನ ಪ್ರಾಜ್ಞಾಯತ ಕಿಂಚನ
॥ ೩೭ ॥

ವಯಂ ಭೃಶಂ ತತ್ರ ಮಹಾನಿಲಾಂಬುಭಿ-
ರ್ನಿಹನ್ಯಮಾನಾ ಮುಹುರಂಬುಸಂಪ್ಲವೇ ।
ದಿಶೋಽವಿದಂತೋಽಥ ಪರಸ್ಪರಂ ವನೇ
ಗೃಹೀತಹಸ್ತಾಃ ಪರಿಬಭ್ರಿಮಾತುರಾಃ ॥ ೩೮ ॥

ಏತದ್ವಿದಿತ್ವಾ ಉದಿತೇ ರವೌ ಸಾಂದೀಪನಿರ್ಗುರುಃ ।
ಅನ್ವೇಷಮಾಣೋ ನಃ ಶಿಷ್ಯಾನಾಚಾರ್ಯೋಽಪಶ್ಯದಾತುರಾನ್
॥ ೩೯ ॥

ಅಹೋ ಹೇ ಪುತ್ರಕಾ ಯೂಯಮಸ್ಮದರ್ಥೇಽತಿದುಃಖಿತಾಃ ।
ಆತ್ಮಾ ವೈ ಪ್ರಾಣಿನಾಂ ಪ್ರೇಷ್ಠಸ್ತಮನಾದೃತ್ಯ ಮತ್ಪರಾಃ
॥ ೪೦ ॥

ಏತದೇವ ಹಿ ಸಚ್ಛಿಷ್ಯೈಃ ಕರ್ತವ್ಯಂ ಗುರುನಿಷ್ಕೃತಮ್ ।
ಯದ್ವೈ ವಿಶುದ್ಧಭಾವೇನ ಸರ್ವಾರ್ಥಾತ್ಮಾರ್ಪಣಂ ಗುರೌ
॥ ೪೧ ॥

ತುಷ್ಟೋಽಹಂ ಭೋ ದ್ವಿಜಶ್ರೇಷ್ಠಾಃ ಸತ್ಯಾಃ ಸಂತು ಮನೋರಥಾಃ ।
ಛಂದಾಂಸ್ಯಯಾತಯಾಮಾನಿ ಭವನ್ತ್ವಿಹ ಪರತ್ರ ಚ
॥ ೪೨ ॥

ಪ್ರಿಯಸಖನೇ! ಗುರುವಿನ ಸ್ವರೂಪದಲ್ಲಿ ಸಾಕ್ಷಾತ್ ನಾನೇ ಆಗಿರುವೆನು. ಈ ಜಗತ್ತಿನ ವರ್ಣಾಶ್ರಮಿಗಳಲ್ಲಿ ತನ್ನ ಸದ್ಗುರುವಿನ ಉಪದೇಶದಂತೆ ಆಯಾಸವಿಲ್ಲದೆಯೇ ಭವಸಾಗರವನ್ನು ದಾಟುವವರೇ ತನ್ನ ಸ್ವಾರ್ಥ ಮತ್ತು ಪರಮಾರ್ಥದ ನಿಜವಾದ ಕೋವಿದರಲ್ಲವೇ? ॥ ೩೩ ॥ ಪ್ರಿಯ ಮಿತ್ರನೇ! ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿರೂಪದಿಂದ ಆತ್ಮನಾಗಿ ವಿರಾಜಿಸುತ್ತಿರುವೆನು. ಸದ್ಗುರುವಿನ ಸೇವಾ ಶುಶ್ರೂಷೆಗಳಿಂದ ನಾನು ಸಂತುಷ್ಟನಾಗುವಂತೆ, ಗೃಹಸ್ಥರ ಧರ್ಮವಾದ ಪಂಚಮಹಾಯಜ್ಞಾದಿಗಳನ್ನು ಮಾಡುವುದರಿಂದಾಗಲೀ, ಬ್ರಹ್ಮಚಾರಿಯ ಧರ್ಮವಾದ ವೇದಾಧ್ಯಯನದಿಂದಾಗಲೀ, ವಾನಪ್ರಸ್ಥಾಶ್ರಮದ ಧರ್ಮವಾದ ತಪಸ್ಸಿನಿಂದಾಗಲೀ, ಸಂನ್ಯಾಸೀಗಳ ಧರ್ಮವಾದ ವಿರಕ್ತತೆಯಿಂದಾಗಲೀ ನನಗೆ ತೃಪ್ತಿಯಾಗುವುದಿಲ್ಲ. ॥ ೩೪ ॥

ಬ್ರಾಹ್ಮಣೋತ್ತಮನೇ ! ನಾವಿಬ್ಬರೂ ಗುರುಕುಲದಲ್ಲಿದ್ದಾಗ ನಡೆದ ಒಂದು ಪ್ರಸಂಗವು ನಿನಗೆ ನೆನಪಿದೆಯೇ! ಒಂದು ದಿನ ನಮ್ಮಿಬ್ಬರಿಗೂ ಗುರುಪತ್ನೀಯರು ಸೌದೆಯನ್ನು ತರಲು ಕಾಡಿಗೆ ಕಳಿಸಿದ್ದರು. ॥ ೩೫ ॥ ಆಗ ನಾವುಗಳು ನಿಬಿಡವಾದ ಕಾಡೊಂದನ್ನು ಪ್ರವೇಶಿಸಿದೆವು. ಅದು ಮಳೆಗಾಲವಲ್ಲದಿದ್ದರೂ ಭಯಂಕರವಾದ ಬಿರುಗಾಳಿಯೊಂದಿಗೆ ಧಾರಾಕಾರ ಮಳೆಯು ಸುರಿಯತೊಡಗಿತು. ಆಕಾಶದಲ್ಲಿ ಗುಡುಗು-ಸಿಡಿಲುಗಳು ಆರ್ಭಟಿಸುತ್ತಿದ್ದವು. ॥ ೩೬ ॥ ಸೂರ್ಯನಾರಾಯಣನು ಅಸ್ತಮಿಸಿದನು. ಎಲ್ಲೆಡೆ ಗಾಢಾಂಧಕಾರವು ಕವಿಯಿತು. ಅತಿವೃಷ್ಟಿಯಿಂದಾಗಿ ಎಲ್ಲಾ ಕಡೆ ನೀರು ತುಂಬಿಹೋಗಿ ಹಳ್ಳವೆಲ್ಲಿದೆ? ತಿಟ್ಟೆಲ್ಲಿದೆ? ಎಂಬುದೇ ತಿಳಿಯುತ್ತಿರಲಿಲ್ಲ. ॥ ೩೭ ॥ ಅದೊಂದು ಸಣ್ಣ ಪ್ರಳಯದಂತೆ ಇತ್ತು. ಬಿರುಗಾಳಿಯ ಮತ್ತು ಮಳೆಯ ನೀರಿನ ಹೊಡೆತದಿಂದ ನಮಗೆ ಅತ್ಯಂತ ಪೀಡೆಯುಂಟಾಗಿ ದಿಕ್ಕುಗಾಣದೆ ಪರಸ್ಪರ ಕೈ ಕೈ ಹಿಡಿದುಕೊಂಡು ಭಯಗೊಂಡವರಾಗಿ ಅರಣ್ಯದಲ್ಲಿ ಅತ್ತ-ಇತ್ತ ಅಲೆಯುತ್ತಿದ್ದೆವು. ॥ ೩೮ ॥ ರಾತ್ರಿಯಲ್ಲಿ ನಾವು ಆಶ್ರಮಕ್ಕೆ ಹಿಂದಿರುಗಲಿಲ್ಲವೆಂದು ತಿಳಿದ ಸಾಂದೀಪನಿಮುನಿಗಳು ಸೂರ್ಯೋದಯವಾಗುತ್ತಲೇ ಶಿಷ್ಯರೊಡನೆ ನಮ್ಮನ್ನು ಹುಡುಕುತ್ತಾ ಬಂದು ಭಯಗೊಂಡಿದ್ದ ನಮ್ಮನ್ನು ನೋಡಿದರು. ॥ ೩೯॥ ಅವರು ಹೇಳಿದರು - ಆಶ್ಚರ್ಯ! ಏನಚ್ಚರಿ! ಮಕ್ಕಳೇ! ನೀವು ನಮ್ಮ ಸಲುವಾಗಿ ಬಹಳವಾಗಿ ಕಷ್ಟಪಡುತ್ತಿರುವಿರಿ. ಎಲ್ಲ ಪ್ರಾಣಿಗಳಿಗೂ ಅವರವರ ಶರೀರವು ಎಲ್ಲಕ್ಕಿಂತ ಹೆಚ್ಚು ಪ್ರಿಯವಾಗಿರುತ್ತದೆ. ಆದರೆ ನೀವಿಬ್ಬರೂ ಅದನ್ನು ಲೆಕ್ಕಿಸದೇ ನಮ್ಮ ಸೇವೆಯಲ್ಲಿ ತತ್ಪರರಾಗಿರುವಿರಿ. ॥ ೪೦ ॥ ಸತ್ ಶಿಷ್ಯರಿಗೆ ವಿಶುದ್ಧಭಾವದಿಂದ ತನ್ನ ಸಮಸ್ತವನ್ನೂ ಮತ್ತು ಶರೀರವನ್ನು ಗುರುಗಳ ಸೇವೆಯಲ್ಲಿ ಸಮರ್ಪಿಸುವುದೇ ಗುರುಗಳ ಋಣದಿಂದ ಮುಕ್ತರಾಗಲು ಇರುವ ಕರ್ತವ್ಯವಾಗಿದೆ. ॥ ೪೧ ॥ ದ್ವಿಜ ಶಿರೋಮಣಿಗಳೇ! ನಾನು ನಿಮ್ಮ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ನಿಮ್ಮ ಸಮಸ್ತ ಮನೋರಥಗಳು ಪೂರ್ಣಗೊಳ್ಳಲಿ. ನೀವುಗಳು ನಮ್ಮಿಂದ ಮಾಡಿರುವ ವೇದಾಧ್ಯಯನವು ನಿಮಗೆ ಸದಾಕಾಲ ಕಂಠಸ್ಥವಾಗಿದ್ದು ಈ ಲೋಕ-ಪರಲೋಕಗಳಲ್ಲಿ ಎಲ್ಲಿಯೂ ನಿಷ್ಫಲವಾಗದಿರಲಿ. ॥ ೪೨ ॥

ಇತ್ಥಂವಿಧಾನ್ಯನೇಕಾನಿ ವಸತಾಂ ಗುರುವೇಶ್ಮಸು ।
ಗುರೋರನುಗ್ರಹೇಣೈವ ಪುಮಾನ್ಪೂರ್ಣಃ ಪ್ರಶಾಂತಯೇ
॥ ೪೩ ॥

ಪ್ರಿಯಮಿತ್ರನೇ! ನಾವುಗಳು ಗುರುಕುಲದಲ್ಲಿ ವಾಸವಾಗಿದ್ದಾಗ ನಮ್ಮ ಜೀವನದಲ್ಲಿ ಇಂತಹ ಅನೇಕ ಘಟನೆಗಳು ಘಟಿಸಿದ್ದವು. ಸದ್ಗುರುವಿನ ಕೃಪೆಯಿಂದಲೇ ಮನುಷ್ಯನು ಶಾಂತಿಯ ಅಧಿಕಾರಿಯಾಗುತ್ತಾನೆ ಮತ್ತು ಪೂರ್ಣತೆಗೆ ತಲುಪುತ್ತಾನೆ ಇದರಲ್ಲಿ ಸಂದೇಹವೇ ಇಲ್ಲ. ॥ ೪೩ ॥

ಬ್ರಾಹ್ಮಣ ಉವಾಚ

ಕಿಮಸ್ಮಾಭಿರನಿರ್ವೃತ್ತಂ ದೇವದೇವ ಜಗದ್ಗುರೋ ।
ಭವತಾ ಸತ್ಯಕಾಮೇನ ಯೇಷಾಂ ವಾಸೋ ಗುರಾವಭೂತ್
॥ ೪೪ ॥

ಯಸ್ಯಚ್ಛಂದೋಮಯಂ ಬ್ರಹ್ಮ ದೇಹ ಆವಪನಂ ವಿಭೋ ।
ಶ್ರೇಯಸಾಂ ತಸ್ಯ ಗುರುಷು ವಾಸೋಽತ್ಯಂತವಿಡಂಬನಮ್
॥ ೪೫ ॥

**ಸುದಾಮ ಬ್ರಾಹ್ಮಣನು ಹೇಳಿದನು** – ದೇವ ದೇವನಾದ ಜಗದ್ಗುರು ಶ್ರೀಕೃಷ್ಣನೇ! ಸತ್ಯಸಂಕಲ್ಪನಾದ, ಪರಮಾತ್ಮನಾದ ನಿನ್ನೊಡನೆ ಗುರುಕುಲದಲ್ಲಿ ವಾಸಮಾಡುವ ಸೌಭಾಗ್ಯವು ಸಿಕ್ಕಿದ ನನಗೆ ಇನ್ನು ಏನು ತಾನೇ ಮಾಡಲು ಉಳಿದಿದೆ? ಎಲ್ಲ ಕರ್ತವ್ಯಗಳನ್ನು ಮುಗಿಸಿದಂತಾಗಿದೆ. ॥ ೪೪ ॥ ಪ್ರಭುವೇ! ಛಂದೋಮಯವಾದ ವೇದವು ಚತುರ್ವಿಧ ಪುರುಷಾರ್ಥಗಳಿಗೂ ಮೂಲಸ್ರೋತವಾಗಿದೆ ಹಾಗೂ ಅದು ನಿನ್ನ ಶರೀರವೇ ಆಗಿದೆ. ಅಂತಹ ನೀನು ವೇದಾಧ್ಯಯನಕ್ಕಾಗಿ ಗುರುಕುಲದಲ್ಲಿ ವಾಸಿಸುವುದು ಮನುಷ್ಯಲೀಲೆಯ ಅಭಿನಯವಲ್ಲದೆ ಮತ್ತೇನಿದೆ? ॥ ೪೫ ॥

ಎಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೮೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ಶ್ರೀದಾಮಚರಿತೇ ಅಶೀತಿತಮೋಽಧ್ಯಾಯಃ ॥ ೮೦ ॥

# ಎಂಭತ್ತೊಂದನೆಯ ಅಧ್ಯಾಯ

## ಸುದಾಮನಿಗೆ ಐಶ್ವರ್ಯದ ಪ್ರಾಪ್ತಿ

ಶ್ರೀಶುಕ ಉವಾಚ

ಸ ಇತ್ಥಂ ದ್ವಿಜಮುಖ್ಯೇನ ಸಹ ಸಂಕಥಯನ್ ಹರಿಃ ।
ಸರ್ವಭೂತಮನೋಽಭಿಜ್ಞಃ ಸ್ಮಯಮಾನ ಉವಾಚ ತಮ್
॥ ೧ ॥

ಬ್ರಹ್ಮಣ್ಯೋ ಬ್ರಾಹ್ಮಣಂ ಕೃಷ್ಣೋ ಭಗವಾನ್ಪ್ರಹಸನ್ಪ್ರಿಯಮ್ ।
ಪ್ರೇಮ್ಣಾ ನಿರೀಕ್ಷಣೇನೈವ ಪ್ರೇಕ್ಷನ್ ಖಲು ಸತಾಂ ಗತಿಃ
॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪ್ರಿಯಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸಮಸ್ತರ ಮನಸ್ಸಿನ ಮಾತನ್ನು ತಿಳಿದಿರುತ್ತಾನೆ. ಅವನು ಬ್ರಾಹ್ಮಣರ ಪರಮಭಕ್ತನಾಗಿದ್ದು, ಅವರ ಕ್ಲೇಶಗಳ ನಾಶಕನೂ, ಸಂತರ ಏಕಮಾತ್ರ ಆಶ್ರಯನೂ ಆಗಿರುವ ಶ್ರೀಕೃಷ್ಣನು ಹಿಂದೆ ಹೇಳಿದಂತೆ ತನ್ನ ಪ್ರಿಯಸಖನೊಂದಿಗೆ ಬಹಳ ಹೊತ್ತಿನವರೆಗೆ ಮಾತನಾಡುತ್ತಾ ಇದ್ದನು. ಅವನು ತನ್ನ ಪ್ರಿಯಸಖನಾದ ಸುದಾಮನನ್ನು ಪ್ರೇಮಪೂರ್ಣವಾದ ದೃಷ್ಟಿಯಿಂದ ನೋಡುತ್ತಾ ಸ್ವಲ್ಪ ಮುಗುಳ್ನಕ್ಕು ವಿನೋದದಿಂದ ಇಂತೆಂದನು. ॥ ೧-೨ ॥

ಶ್ರೀಭಗವಾನುವಾಚ

ಕಿಮುಪಾಯನಮಾನೀತಂ ಬ್ರಹ್ಮನ್ ಮೇ ಭವತಾ ಗೃಹಾತ್ ।
ಅಣ್ವಪ್ಯುಪಾಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್ ।
ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ
॥ ೩ ॥

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ
॥ ೪ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯಸಖನೇ! ನನಗಾಗಿ ನೀನು ಮನೆಯಿಂದ ಯಾವ ಉಪಹಾರವನ್ನು ತಂದಿರುವೆ? ನನ್ನ ಪ್ರಿಯಭಕ್ತರು ಪ್ರೇಮದಿಂದ ಸಣ್ಣದಾದ ವಸ್ತುವನ್ನು ಅರ್ಪಿಸಿದರೂ ನನಗೆ ಅದು ಬಹುದೊಡ್ಡದಾಗಿ ಹೋಗುತ್ತದೆ. ಆದರೆ ಭಕ್ತಿಯಿಲ್ಲದವರು ಬಹಳಷ್ಟು ವಸ್ತುಗಳನ್ನು ಕಾಣಿಕೆಯಾಗಿ ಕೊಟ್ಟರೂ ನಾನು ಅದರಿಂದ ಸಂತುಷ್ಟನಾಗುವುದಿಲ್ಲ. ॥ ೩ ॥ ಭಕ್ತಪರವಶನಾಗಿ ಫಲ, ಪುಷ್ಪ, ಪತ್ರೆ, ನೀರು – ಇವುಗಳಲ್ಲಿ ಯಾವುದೇ ವಸ್ತುವನ್ನು ನನಗೆ ಅರ್ಪಿಸುವ ಆ ಶುದ್ಧ ಹೃದಯದ ಭಕ್ತನ ಪ್ರೇಮೋಪಹಾರವನ್ನು ನಾನು ಸ್ವೀಕರಿಸುತ್ತೇನೆ ಮಾತ್ರವಲ್ಲ, ಅದನ್ನು ಆದರದಿಂದ ಸೇವಿಸುತ್ತೇನೆ. ॥ ೪ ॥

ಇತ್ಯುಕ್ತೋಽಪಿ ದ್ವಿಜಸ್ತಸ್ಮೈ ವ್ರೀಡಿತಃ ಪತಯೇ ಶ್ರಿಯಃ ।
ಪೃಥುಕಪ್ರಸೃತಿಂ ರಾಜನ್ ನ ಪ್ರಾಯಚ್ಛದವಾಙ್ಮುಖಃ
॥ ೫ ॥

ಸರ್ವಭೂತಾತ್ಮದೃಕ್ ಸಾಕ್ಷಾತ್ ತಸ್ಯಾಗಮನಕಾರಣಮ್ ।
ವಿಜ್ಞಾಯಾಚಿಂತಯನ್ನಾಯಂ ಶ್ರೀಕಾಮೋ ಮಾಭಜತ್ಪುರಾ
॥ ೬ ॥

ಪತ್ನ್ಯಾಃ ಪತಿವ್ರತಾಯಾಸ್ತು ಸಖಾ ಪ್ರಿಯಚಿಕೀರ್ಷಯಾ ।
ಪ್ರಾಪ್ತೋ ಮಾಮಸ್ಯ ದಾಸ್ಯಾಮಿ ಸಂಪದೋಽಮರ್ತ್ಯದುರ್ಲಭಾಃ
॥ ೭ ॥

ಇತ್ಥಂ ವಿಚಿಂತ್ಯ ವಸನಾಚ್ಚೀರಬದ್ಧಾನ್ ದ್ವಿಜನ್ಮನಃ ।
ಸ್ವಯಂ ಜಹಾರ ಕಿಮಿದಮಿತಿ ಪೃಥುಕತಂಡುಲಾನ್
॥ ೮ ॥

ನನ್ವೇತದುಪನೀತಂ ಮೇ ಪರಮಪ್ರೀಣನಂ ಸಖೇ ।
ತರ್ಪಯಂತ್ಯಂಗ ಮಾಂ ವಿಶ್ವಮೇತೇ ಪೃಥುಕತಂಡುಲಾಃ
॥ ೯ ॥

ಇತಿ ಮುಷ್ಟಿಂ ಸಕೃಜ್ಜಗ್ಧ್ವಾ ದ್ವಿತೀಯಾಂ ಜಗ್ಧುಮಾದದೇ ।
ತಾವಚ್ಛ್ರೀರ್ಜಗೃಹೇ ಹಸ್ತಂ ತತ್ಪರಾ ಪರಮೇಷ್ಠಿನಃ
॥ ೧೦ ॥

ಏತಾವತಾಲಂ ವಿಶ್ವಾತ್ಮನ್ಸರ್ವಸಂಪತ್ಸಮೃದ್ಧಯೇ ।
ಅಸ್ಮಿನ್ಲೋಕೇಽಥವಾಮುಷ್ಮಿನ್ಪುಂಸಸ್ತ್ವತ್ತೋಷಕಾರಣಮ್
॥ ೧೧ ॥

ಬ್ರಾಹ್ಮಣಸ್ತಾಂ ತು ರಜನೀಮುಷಿತ್ವಾಚ್ಯುತಮಂದಿರೇ ।
ಭುಕ್ತ್ವಾ ಪೀತ್ವಾ ಸುಖಂ ಮೇನೇ ಆತ್ಮಾನಂ ಸ್ವರ್ಗತಂ ಯಥಾ
॥ ೧೨ ॥

ಶ್ವೋಭೂತೇ ವಿಶ್ವಭಾವೇನ ಸ್ವಸುಖೇನಾಭಿವಂದಿತಃ ।
ಜಗಾಮ ಸ್ವಾಲಯಂ ತಾತ ಪಥ್ಯನುವ್ರಜ್ಯ ನಂದಿತಃ
॥ ೧೩ ॥

ಸ ಚಾಲಬ್ಧ್ವಾ ಧನಂ ಕೃಷ್ಣಾನ್ನ ತು ಯಾಚಿತವಾನ್ ಸ್ವಯಮ್ ।
ಸ್ವಗೃಹಾನ್ ವ್ರೀಡಿತೋಽಗಚ್ಛನ್ಮಹದ್ದರ್ಶನನಿರ್ವೃತಃ
॥ ೧೪ ॥

ಅಹೋ ಬ್ರಹ್ಮಣ್ಯದೇವಸ್ಯ ದೃಷ್ಟಾ ಬ್ರಹ್ಮಣ್ಯತಾ ಮಯಾ ।
ಯದ್ದರಿದ್ರತಮೋ ಲಕ್ಷ್ಮೀಮಾಶ್ಲಿಷ್ಟೋ ಬಿಭ್ರತೋರಸಿ
॥ ೧೫ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಹೇಳಿದ್ದರೂ ಆ ಬ್ರಾಹ್ಮಣನು ನಾಚಿಕೆಯಿಂದಾಗಿ ಶ್ರೀಯಃಪತಿಯಾದ ತನ್ನ ಮಿತ್ರನಿಗೆ ನಾಲ್ಕು ಮುಷ್ಟಿ ಅವಲಕ್ಕಿಯನ್ನು ಕೊಡಲಿಲ್ಲ. ಸಂಕೋಚದಿಂದ ತಲೆತಗ್ಗಿಸಿ ಕುಳಿತುಬಿಟ್ಟನು. ಪರೀಕ್ಷಿತ! ಶ್ರೀಕೃಷ್ಣನು ಸಮಸ್ತ ಪ್ರಾಣಿಗಳ ಮನಸ್ಸಿನಲ್ಲಿ ಏನಿರುವುದೆಂಬುದನ್ನು ಸಾಕ್ಷಾತ್ತಾಗಿ ಕಾಣುವ ಸಾಮರ್ಥ್ಯವನ್ನು ಹೊಂದಿದವನು. ಸುದಾಮನ ಆಗಮನದ ಕಾರಣವನ್ನು ತಿಳಿದುಕೊಂಡನು, ಅವನ ಹೃದಯದ ಮಾತೂ ಅರ್ಥವಾಗಿತ್ತು. 'ಇವನಾದರೋ ನನ್ನ ಪ್ರಿಯಮಿತ್ರನಾಗಿರುವನು. ಅಲ್ಲದೆ ಇವನು ಎಂದಿಗೂ ಶ್ರೀಕಾಮನಾಗಿ ನನ್ನನು ಭಜಿಸಲಿಲ್ಲ. ಈ ಸಮಯದಲ್ಲಿ ತನ್ನ ಪತಿವ್ರತೆಯಾದ ಪತ್ನಿಯ ಮನಃಸಂತೋಷಕ್ಕಾಗಿ, ಆಕೆಯ ಆಗ್ರಹದಿಂದ ಇಲ್ಲಿಗೆ ಬಂದಿರುವನು. ಈಗ ನಾನು ಇವನಿಗೆ ದೇವತೆಗಳಿಗೂ ಅತ್ಯಂತ ದುರ್ಲಭವಾದ ಸಂಪತ್ತನ್ನು ಅನುಗ್ರಹಿಸುವೆನು' ಎಂದು ಯೋಚಿಸಿದನು. ॥ ೫-೭ ॥ ಭಗವಾನ್ ಶ್ರೀಕೃಷ್ಣನು ಹೀಗೆ ವಿಚಾರಮಾಡಿ ಅವನ ಕಂಕುಳಲ್ಲಿದ್ದ ಅವಲಕ್ಕಿಯ ಬಟ್ಟೆ ಗಂಟನ್ನು 'ಇದೇನಿದು?' ಎಂದು ಹೇಳುತ್ತಾ ಕಸಿದುಕೊಂಡನು. ॥ ೮ ॥ ಪ್ರಿಯ ಮಿತ್ರನೇ! ನಾನಾದರೋ ನನಗೆ ಅತ್ಯಂತ ಪ್ರಿಯವಾದ ತಿಂಡಿಯನ್ನೇ ತಂದಿರುವೆಯಲ್ಲ! ಸುದಾಮಾ! ಈ ಅವಲಕ್ಕಿಯು ಕೇವಲ ನನ್ನನ್ನೇ ಅಲ್ಲ ಇಡೀ ಪ್ರಪಂಚವನ್ನೇ ತೃಪ್ತಿಪಡಿಸಲು ಸಾಕಾಗುವಷ್ಟಿದೆ ಎಂದು ಅತ್ಯಾದರದಿಂದ ನುಡಿದನು. ॥ ೯ ॥ ಹೀಗೆ ಹೇಳಿ ಶ್ರೀಕೃಷ್ಣನು ಅದರಲ್ಲಿ ಒಂದು ಮುಷ್ಟಿ ಅವಲಕ್ಕಿಯನ್ನು ತೆಗೆದು ತಿಂದುಬಿಟ್ಟನು ಮತ್ತು ಇನ್ನೊಂದು ಮುಷ್ಟಿಯನ್ನು ಎತ್ತಿಕೊಂಡಾಗ ಸಾಕ್ಷಾತ್ ಲಕ್ಷ್ಮೀದೇವಿಯಾದ ರುಕ್ಮಿಣೀಯು ಭಗವಾನ್ ಶ್ರೀಕೃಷ್ಣನ ಕೈಯನ್ನು ಹಿಡಿದುಕೊಂಡಳು. ಏಕೆಂದರೆ, ಆಕೆಯು ಏಕಮಾತ್ರ ಭಗವಂತನಲ್ಲೇ ಪರಾಯಣಳಾಗಿದ್ದಳು. ಅವನನ್ನು ಬಿಟ್ಟು ಬೇರೆಲ್ಲಿಗೂ ಹೋಗಲಾರಳು. ॥ ೧೦ ॥ ರುಕ್ಮಿಣಿಯು ಹೇಳಿದಳು - ವಿಶ್ವಾತ್ಮನೇ! ಸಾಕು, ಸಾಕು! ಮನುಷ್ಯನಿಗೆ ಈ ಲೋಕದಲ್ಲಿ ಹಾಗೂ ಪರಲೋಕದಲ್ಲಿ ಸಮಸ್ತ ಸಂಪತ್ಸಮೃದ್ಧಿಯನ್ನು ಹೊಂದಲು ನೀನು ತಿಂದಿರುವ ಈ ಒಂದು ಮುಷ್ಟಿ ಅವಲಕ್ಕಿಯೇ ಹೆಚ್ಚಾಗಿದೆ. ಏಕೆಂದರೆ, ಇಷ್ಟರಿಂದಲೇ ನೀನು ಸಂತುಷ್ಟನಾಗಿರುವೆ. ॥ ೧೧ ॥

ಪರೀಕ್ಷಿತನೇ! ಸುದಾಮನು ಅಂದಿನ ಇರುಳನ್ನು ಭಗವಾನ್ ಶ್ರೀಕೃಷ್ಣನ ಅರಮನೆಯಲ್ಲೇ ಕಳೆದನು. ಆದರ ಪೂರ್ವಕವಾಗಿ ಶ್ರೀಕೃಷ್ಣನಿತ್ತ ಮೃಷ್ಟಾನ್ನವನ್ನು ತಿಂದು, ಪಾನೀಯಗಳನ್ನು ಕುಡಿದು, ನಾನು ವೈಕುಂಠವನ್ನೇ ಸೇರಿರುವೆನೋ ಎಂಬಂತೆ ಅನುಭವಿಸಿದನು. ॥ ೧೨ ॥ ಪರೀಕ್ಷಿತನೇ! ಶ್ರೀಕೃಷ್ಣನಿಂದ ಸುದಾಮನಿಗೆ ಪ್ರತ್ಯಕ್ಷವಾಗಿ ಏನೂ ಸಿಗದಿದ್ದರೂ ಅವನು ಮಿತ್ರನಲ್ಲಿ ಏನನ್ನೂ ಬೇಡಲಿಲ್ಲ. ಅವನು ತನ್ನ ಚಿತ್ತದ ಕಾರ್ಯದ ಬಗ್ಗೆ ಸ್ವಲ್ಪ ಲಜ್ಜಿತನಾಗಿ ಭಗವಂತನ ದರ್ಶನದಿಂದ ಉಂಟಾದ ಆನಂದಾಂಬುಧಿಯಲ್ಲಿ ಮುಳುಗಿ, ತೇಲುತ್ತಾ ತನ್ನ ಮನೆಯ ಕಡೆಗೆ ಹೊರಟನು. ॥ ೧೩-೧೪ ॥ ಅವನು ಮನಸ್ಸಿನಲ್ಲೇ ಯೋಚಿಸತೊಡಗಿದನು - ಆಹಾ! ಎಂತಹ ಆನಂದದ ಮತ್ತು ಆಶ್ಚರ್ಯದ ಮಾತಾಗಿದೆ! ಬ್ರಾಹ್ಮಣರನ್ನು ತನ್ನ ಇಷ್ಟದೇವರೆಂದು ತಿಳಿಯುವ ಭಗವಾನ್ ಶ್ರೀಕೃಷ್ಣನ ಬ್ರಾಹ್ಮಣ ಭಕ್ತಿಯನ್ನು ಇಂದು ನಾನು ಕಣ್ಣಾರೆ ಕಂಡೆನು. ಧನ್ಯ, ಧನ್ಯನಿವನು! ವಕ್ಷಸ್ಥಳದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯನ್ನು ಧರಿಸಿದ್ದ ಶ್ರೀಕೃಷ್ಣನು ನನ್ನಂತಹ ಕಡುಬಡವನನ್ನು ಆಲಿಂಗಿಸಿಕೊಂಡುಬಿಟ್ಟನಲ್ಲ! ॥ ೧೫ ॥

ಕ್ವಾಹಂ ದರಿದ್ರಃ ಪಾಪೀಯಾನ್ ಕ್ವ ಕೃಷ್ಣಃ ಶ್ರೀನಿಕೇತನಃ ।
ಬ್ರಹ್ಮಬಂಧುರಿತಿ ಸ್ಮಾಹಂ ಬಾಹುಭ್ಯಾಂ ಪರಿರಂಭಿತಃ
॥ ೧೬ ॥

ನಿವಾಸಿತಃ ಪ್ರಿಯಾಜುಷ್ಟೇ ಪರ್ಯಂಕೇ ಭ್ರಾತರೋ ಯಥಾ ।
ಮಹಿಷ್ಯಾ ವೀಜಿತಃ ಶ್ರಾಂತೋ ವಾಲವ್ಯಜನಹಸ್ತಯಾ
॥ ೧೭ ॥

ಶುಶ್ರೂಷಯಾ ಪರಮಯಾ ಪಾದಸಂವಾಹನಾದಿಭಿಃ ।
ಪೂಜಿತೋ ದೇವದೇವೇನ ವಿಪ್ರದೇವೇನ ದೇವವತ್
॥ ೧೮ ॥

ಸ್ವರ್ಗಾಪವರ್ಗಯೋಃ ಪುಂಸಾಂ ರಸಾಯಾಂ ಭುವಿ ಸಂಪದಾಮ್ ।
ಸರ್ವಾಸಾಮಪಿ ಸಿದ್ಧೀನಾಂ ಮೂಲಂ ತಚ್ಚರಣಾರ್ಚನಮ್
॥ ೧೯ ॥

ಅಧನೋಽಯಂ ಧನಂ ಪ್ರಾಪ್ಯ ಮಾದ್ಯನ್ನುಚ್ಚೈರ್ನ ಮಾಂ ಸ್ಮರೇತ್ ।
ಇತಿ ಕಾರುಣಿಕೋ ನೂನಂ ಧನಂ ಮೇಽಭೂರಿ ನಾದದಾತ್
॥ ೨೦ ॥

ಇತಿ ತಚ್ಚಿಂತಯನ್ನಂತಃ ಪ್ರಾಪ್ತೋ ನಿಜಗೃಹಾಂತಿಕಮ್ ।
ಸೂರ್ಯಾನಲೇಂದು ಸಂಕಾಶೈರ್ವಿಮಾನೈಃ ಸರ್ವತೋ ವೃತಮ್
॥ ೨೧ ॥

ವಿಚಿತ್ರೋಪವನೋದ್ಯಾನೈಃ ಕೂಜದ್ದ್ವಿಜಕುಲಾಕುಲೈಃ ।
ಪ್ರೋತ್ಫುಲ್ಲಕುಮುದಾಂಭೋಜಕಹ್ಲಾರೋತ್ಪಲವಾರಿಭಿಃ
॥ ೨೨ ॥

ಜುಷ್ಟಂ ಸ್ವಲಂಕೃತೈಃ ಪುಂಭಿಃ ಸ್ತ್ರೀಭಿಶ್ಚ ಹರಿಣಾಕ್ಷಿಭಿಃ ।
ಕಿಮಿದಂ ಕಸ್ಯ ವಾ ಸ್ಥಾನಂ ಕಥಂ ತದಿದಮಿತ್ಯಭೂತ್
॥ ೨೩ ॥

ಏವಂ ಮೀಮಾಂಸಮಾನಂ ತಂ ನರಾ ನಾರ್ಯೋಽಮರಪ್ರಭಾಃ ।
ಪ್ರತ್ಯಗೃಹ್ಣನ್ಮಹಾಭಾಗಂ ಗೀತವಾದ್ಯೇನ ಭೂಯಸಾ
॥ ೨೪ ॥

ಪತಿಮಾಗತಮಾಕರ್ಣ್ಯ ಪತ್ನ್ಯುದ್ಧರ್ಷಾತಿಸಂಭ್ರಮಾ ।
ನಿಶ್ಚಕ್ರಾಮ ಗೃಹಾತ್ತೂರ್ಣಂ ರೂಪಿಣೀ ಶ್ರೀರಿವಾಲಯಾತ್
॥ ೨೫ ॥

ಅತ್ಯಂತ ಪಾಪಿಯೂ, ದರಿದ್ರನೂ ಆದ ನಾನೆಲ್ಲಿ! ಲಕ್ಷ್ಮೀದೇವಿಯ ಏಕಮಾತ್ರ ಆಶ್ರಯನಾದ ಭಗವಾನ್ ಶ್ರೀಕೃಷ್ಣನೆಲ್ಲಿ! ಆದರೂ ಅವನು 'ಇವನು ಬ್ರಾಹ್ಮಣ' ಎಂದು ಭಾವಿಸಿ ನನ್ನನ್ನು ತನ್ನ ನಳಿತೋಳುಗಳಿಂದ ಅಪ್ಪಿಕೊಂಡನು. ॥ ೧೬ ॥ ಇಷ್ಟೇ ಅಲ್ಲ, ತನ್ನ ಪ್ರಾಣಪ್ರಿಯಳಾದ ರುಕ್ಮಿಣೀ ದೇವಿಯು ಮಲಗುವ ಶ್ರೇಷ್ಠವಾದ ಮಂಚದಲ್ಲಿ ತನ್ನ ನಿಜ ಸಹೋದರನಂತೆ ನನ್ನನ್ನು ಮಲಗಿಸಿದನು. ಪರ್ಯಂಕದಲ್ಲಿ ಎಷ್ಟೊಂದು ಹೇಳಲೀ ! ಬಳಲಿದ್ದ ನನಗೆ ಸಾಕ್ಷಾತ್ ಅವನ ಪಟ್ಟದರಸಿಯಾದ ರುಕ್ಮಿಣಿಯೇ ತನ್ನ ಕೈಯಾರೆ ಚಾಮರಬೀಸಿ ನನ್ನ ಸೇವೆಮಾಡಿದಳು. ॥ ೧೭ ॥ ಆಹಾ ! ದೇವತೆಗಳಿಗೆ ಆರಾಧ್ಯನಾಗಿದ್ದರೂ ಬ್ರಾಹ್ಮಣರನ್ನು ತನ್ನ ಇಷ್ಟದೇವರೆಂದು ಭಾವಿಸಿರುವ ಪ್ರಭುವು ನನ್ನ ಕಾಲನ್ನೊತ್ತಿ, ತನ್ನ ಕೈಯಿಂದ ಊಟೋಪಚಾರ ಮಾಡಿಸಿ ಅತ್ಯಂತ ಆದರದಿಂದ ದೇವತೆಯಂತೆ ಪೂಜಿಸಿ ಸೇವೆ ಮಾಡಿದನು. ॥ ೧೮ ॥ ಸ್ವರ್ಗ, ಮೋಕ್ಷ, ಪೃಥಿವಿ ಮತ್ತು ರಸಾತಲದ ಸಮಸ್ತ ಸಂಪತ್ತು ಹಾಗೂ ಸಮಸ್ತ ಯೋಗ ಸಿದ್ಧಿಗಳ ಪ್ರಾಪ್ತಿಯ ಮೂಲಸಾಧನೆ ಶ್ರೀಕೃಷ್ಣನ ಚರಣ ಕಮಲಗಳ ಪೂಜೆಯೇ ಆಗಿದೆ. ॥ ೧೯ ॥ ಹೀಗಿದ್ದರೂ ಪರಮ ದಯಾಳುವಾದ ಶ್ರೀಕೃಷ್ಣನು – ಎಲ್ಲಾದರೂ ಈ ದರಿದ್ರನು ಧನವನ್ನು ಪಡೆದು ಧನಮದದಿಂದ ತನ್ನನ್ನು ಮರೆಯದಿರಲಿ ಎಂದು ಭಾವಿಸಿಯೇ ನನಗೆ ಸ್ವಲ್ಪವೂ ಧನವನ್ನು ಕೊಡಲಿಲ್ಲ. ॥ ೨೦ ॥

ಸುದಾಮನು ಹೀಗೆ ಆನಂದ ಮಗ್ನನಾಗಿ ಯೋಚಿಸುತ್ತಾ ಶ್ರೀಕೃಷ್ಣನ ಆತಿಥ್ಯವನ್ನು ಬಾರಿ-ಬಾರಿಗೂ ಸ್ಮರಿಸುತ್ತಾ ತನ್ನ ಮನೆಯ ಬಳಿಗೆ ಬಂದನು. ಅಲ್ಲಿ ತಾನು ಹಿಂದೆ ವಾಸವಾಗಿದ್ದ ಜೋಪಡಿಯು ಕಾಣಿಸಲೇ ಇಲ್ಲ. ಸೂರ್ಯಾಗ್ನಿ-ಚಂದ್ರರ ತೇಜಸ್ಸಿಗೆ ಸಮಾನವಾದ ತೇಜಸ್ಸಿನ ರತ್ನಗಳಿಂದ ನಿರ್ಮಿತವಾದ ಗೋಪುರಗಳಿಂದ ಆ ಸ್ಥಳವು ಸಮಾವೃತವಾಗಿತ್ತು. ಆ ಅರಮನೆಯ ಸುತ್ತಲೂ ಉಪವನಗಳೂ, ಉದ್ಯಾನಗಳೂ ಕಂಗೊಳಿಸುತ್ತಿದ್ದು, ಅಲ್ಲಿದ್ದ ಮರಗಳ ಮೇಲೆ ವಿಧ-ವಿಧವಾದ ಬಣ್ಣದ ಪಕ್ಷಿಗಳು ಗುಂಪು-ಗುಂಪಾಗಿ ಚಿಲಿ-ಪಿಲಿಗುಟ್ಟುತ್ತಿದ್ದವು. ಆ ಉದ್ಯಾನಗಳಲ್ಲಿನ ಸರೋವರಗಳಲ್ಲಿ ಅರಳಿದ ಕನ್ನೈದಿಲೆ, ತಾವರೆ, ಕೆಂದಾವರೆಗಳೂ ಇದ್ದು ಅವು ಅತ್ಯಂತ ಶೋಭಾಯಮಾನವಾಗಿದ್ದವು. ಹರಿಣಾಕ್ಷಿಯರೂ, ಪುರುಷ ಸಿಂಹರೂ ಸುಂದರವಾದ ವಸ್ತ್ರಾಭರಣಗಳಿಂದ ಸಮಲಂಕೃತರಾಗಿ ಅಲ್ಲಲ್ಲಿ ಓಡುತ್ತಿದ್ದರು. ಆ ಸ್ಥಾನವನ್ನು ನೋಡಿ ಸುದಾಮನು ಇದೇನಿದು ? ಇದು ಯಾರ ನಿವಾಸ ? ನಾನಿದ್ದ ಮನೆಯೇ ಇದಾಗಿದ್ದರೆ ಇದು ಹೇಗಾಯಿತು ? ಹೀಗೆ ಪರಿ-ಪರಿಯಾಗಿ ಯೋಚಿಸಿದನು. ॥೨೧-೨೩ ॥ ಹೀಗೆ ಚಿಂತಿಸುತ್ತಿರುವಾಗಲೇ ಅಲ್ಲಿದ್ದ ದೇವತೆಗಳಂತೆಯೇ ಪ್ರಕಾಶಮಾನರಾಗಿದ್ದ ನರ-ನಾರಿಯರು ಮಂಗಳ ಗೀತ-ವಾದ್ಯಗಳೊಂದಿಗೆ ಬಂದು ಮಹಾಭಾಗ್ಯಶಾಲಿ ಯಾದ ಸುದಾಮನನ್ನು ಸ್ವಾಗತಿಸಿದರು. ॥ ೨೪ ॥ ಪತಿದೇವನ ಆಗಮನದಿಂದ ಸುದಾಮನ ಪತ್ನಿಗೆ ಪರಮಾನಂದವಾಯಿತು. ಆಕೆಯು ಪತಿಯನ್ನು ಸ್ವಾಗತಿಸಲು ಸಂಭ್ರಮದಿಂದಲೂ, ಲಗು-ಬಗೆಯಿಂದಲೂ ಮೇಲೆದ್ದು ಹೊರಗೆ ಬಂದಳು. ಅವಳಾಗ ಕಮಲ ವನದಿಂದ ಆಗಮಿಸಿದ್ದ ಸಾಕ್ಷಾತ್ ಲಕ್ಷ್ಮೀದೇವಿಯಂತೆ ಕಾಣುತ್ತಿದ್ದಳು. ॥ ೨೫ ॥

ಪತಿವ್ರತಾ ಪತಿಂ ದೃಷ್ಟ್ವಾ ಪ್ರೇಮೋತ್ಕಂಠಾಶ್ರುಲೋಚನಾ ।
ಮೀಲಿತಾಕ್ಷ್ಯನಮದ್ಬುದ್ಧ್ಯಾ ಮನಸಾ ಪರಿಷಸ್ವಜೇ ॥ ೨೬ ॥

ಪತ್ನೀಂ ವೀಕ್ಷ್ಯ ವಿಸ್ಫುರಂತೀಂ ದೇವೀಂ ವೈಮಾನಿಕೀಮಿವ ।
ದಾಸೀನಾಂ ನಿಷ್ಕಕಂಠೀನಾಂ ಮಧ್ಯೇ ಭಾಂತೀಂ ಸ ವಿಸ್ಮಿತಃ ॥ ೨೭ ॥

ಪ್ರೀತಃ ಸ್ವಯಂ ತಯಾ ಯುಕ್ತಃ ಪ್ರವಿಷ್ಟೋ ನಿಜಮಂದಿರಮ್ ।
ಮಣಿಸ್ತಂಭಶತೋಪೇತಂ ಮಹೇಂದ್ರಭವನಂ ಯಥಾ ॥ ೨೮ ॥

ಪಯಃಫೇನನಿಭಾಃ ಶಯ್ಯಾ ದಾಂತಾ ರುಕ್ಮಪರಿಚ್ಛದಾಃ ।
ಪರ್ಯಂಕಾ ಹೇಮದಂಡಾನಿ ಚಾಮರವ್ಯಜನಾನಿ ಚ ॥ ೨೯ ॥

ಆಸನಾನಿ ಚ ಹೈಮಾನಿ ಮೃದೂಪಸ್ತರಣಾನಿ ಚ ।
ಮುಕ್ತಾದಾಮವಿಲಂಬೀನಿ ವಿತಾನಾನಿ ದ್ಯುಮಂತಿ ಚ ॥ ೩೦ ॥

ಸ್ವಚ್ಛಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ ।
ರತ್ನದೀಪಾ ಭ್ರಾಜಮಾನಾ ಲಲನಾರತ್ನ ಸಂಯುತಾಃ ॥ ೩೧ ॥

ವಿಲೋಕ್ಯ ಬ್ರಾಹ್ಮಣಸ್ತತ್ರ ಸಮೃದ್ಧೀಃ ಸರ್ವಸಂಪದಾಮ್ ।
ತರ್ಕಯಾಮಾಸ ನಿರ್ವ್ಯಗ್ರಃ ಸ್ವಸಮೃದ್ಧಿಮಹೈತುಕೀಮ್ ॥ ೩೨ ॥

ನೂನಂ ಬತೈತನ್ಮಮ ದುರ್ಭಗಸ್ಯ
ಶಶ್ವದ್ದರಿದ್ರಸ್ಯ ಸಮೃದ್ಧಿಹೇತುಃ ।
ಮಹಾವಿಭೂತೇರವಲೋಕತೋಽನ್ಯೋ
ನೈವೋಪಪದ್ಯೇತ ಯದೂತ್ತಮಸ್ಯ ॥ ೩೩ ॥

ನನ್ವಬ್ರುವಾಣೋ ದಿಶತೇ ಸಮಕ್ಷಂ
ಯಾಚಿಷ್ಣವೇ ಭೂರ್ಯಪಿ ಭೂರಿಭೋಜಃ ।
ಪರ್ಜನ್ಯವತ್ತತ್ಸ್ವಯಮೀಕ್ಷಮಾಣೋ
ದಾಶಾರ್ಹಕಾಣಾಮೃಷಭಃ ಸಖಾ ಮೇ ॥ ೩೪ ॥

ಪತಿದೇವನನ್ನು ನೋಡುತ್ತಲೇ ಪ್ರೇಮದ ಔತ್ಸುಕ್ಯದಿಂದ ಆಕೆಯ ಕಣ್ಣುಗಳಲ್ಲಿ ಆನಂದಬಾಷ್ಪಗಳು ಚಿಮ್ಮಿದುವು. ಕಣ್ಣುಗಳನ್ನು ಮುಚ್ಚಿಕೊಂಡು ಆಕೆಯು ಪತಿದೇವನಿಗೆ ನಮಸ್ಕರಿಸಿ, ಮನಸ್ಸಿನಿಂದಲೇ ಅವನನ್ನು ಆಲಿಂಗಿಸಿಕೊಂಡಳು. ॥ ೨೬ ॥

ಪ್ರಿಯ ಪರೀಕ್ಷಿತನೇ! ಬ್ರಾಹ್ಮಣನ ಪತ್ನಿಯು ಚಿನ್ನದ ಹಾರಗಳನ್ನು ಧರಿಸಿದ್ದ ಸೇವಕಿಯರ ಮಧ್ಯದಲ್ಲಿ ವಿಮಾನಸ್ಥಳಾದ ದೇವಾಂಗನೆಯಂತೆಯೇ ಅತ್ಯಂತ ಶೋಭಾಯಮಾನಳಾಗಿ ಕಾಣುತ್ತಿದ್ದಳು. ಆಕೆಯನ್ನು ಈ ರೂಪದಲ್ಲಿ ನೋಡಿದ ಸುದಾಮನು ವಿಸ್ಮಿತನಾದನು. ॥ ೨೭ ॥ ಅವನು ತನ್ನ ಪತ್ನಿಯೊಂದಿಗೆ ದೇವೇಂದ್ರನ ನಿವಾಸಸ್ಥಾನದಂತಿರುವ ಸಾವಿರಾರು ಮಣಿಮಯ ಕಂಬಗಳಿಂದ ಕೂಡಿದ ಆ ಸರ್ವಾಂಗ ಸುಂದರವಾದ ಅರಮನೆಯನ್ನು ಪರಮ ಪ್ರೀತನಾಗಿ ಪ್ರವೇಶಿಸಿದನು. ॥ ೨೮ ॥ ಅಲ್ಲಿ ಹಸ್ತಿದಂತಗಳಿಂದ ನಿರ್ಮಿತವಾಗಿದ್ದ ಸ್ವರ್ಣ ಖಚಿತವಾದ ಮಂಚಗಳಲ್ಲಿ ಹಾಲಿನ ನೊರೆಯಂತಿದ್ದ ಬಿಳಿಯ ಹಂಸತೂಲಿಕಾ ತಲ್ಪಗಳು ಹಾಸಿದ್ದವು. ಚಿನ್ನದ ಹಿಡಿಗಳಿದ್ದ ಛತ್ರ-ಚಾಮರಗಳು ಅಲ್ಲಿ ಇಡಲ್ಪಟ್ಟಿದ್ದವು. ॥ ೨೯॥ ಸ್ವರ್ಣ ಸಿಂಹಾಸನದಲ್ಲಿ ಮೃದುವಾದ ಮೆತ್ತೆಗಳು, ಮೇಲ್ಭಾಗದಲ್ಲಿ ತೂಗುಹಾಕಿದ್ದ ಮುತ್ತಿನ ಗೊಂಚಲುಗಳಿಂದ ಅಲಂಕೃತವಾದ ಮೇಲ್ಕಟ್ಟುಗಳೂ ಇದ್ದವು. ॥ ೩೦ ॥ ಆ ಅರಮನೆಯಲ್ಲಿ ಸ್ವಚ್ಛವಾದ ಸ್ಫಟಿಕದ ಗೋಡೆಗಳು ಮರಕತ ಮಣಿಗಳಿಂದ ಚಿತ್ರಿತವಾಗಿದ್ದವು. ರತ್ನನಿರ್ಮಿತವಾದ ಸ್ತ್ರೀವಿಗ್ರಹಗಳ ಕೈಗಳಲ್ಲಿ ರತ್ನಮಣಿ ದೀಪಗಳು ಬೆಳಗುತ್ತಿದ್ದವು. ॥ ೩೧ ॥ ಹೀಗೆ ಸಮಸ್ತ ಸಂಪತ್ತುಗಳ ಸಮೃದ್ಧಿಯನ್ನು ನೋಡಿ, ಅದರ ಪ್ರತ್ಯಕ್ಷವಾದ ಯಾವ ಕಾರಣವನ್ನು ಕಾಣದೆ ಬ್ರಾಹ್ಮಣ ಸುದಾಮನು – ನನ್ನ ಬಳಿ ಇಷ್ಟೊಂದು ಸಂಪತ್ತು ಹೇಗೆ ಬಂತು ? ಎಂದು ಗಹನವಾಗಿ ಯೋಚಿಸತೊಡಗಿದನು. ॥ ೩೨ ॥ ನಾನು ಹುಟ್ಟಿನಿಂದಲೇ ಭಾಗ್ಯಹೀನನಾದ ದರಿದ್ರನು. ಹೀಗಿದ್ದರೂ ನನ್ನ ಸಂಪತ್ತಿನ ಸಮೃದ್ಧಿಗೆ ಕಾರಣವೇನಿರಬಹುದು ಎಂದು ಮನಸ್ಸಿನಲ್ಲೆ ಅಂದುಕೊಂಡನು. ಪರಮೈಶ್ವರ್ಯಶಾಲಿಯಾದ ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನ ಕೃಪಾಕಟಾಕ್ಷವಲ್ಲದೆ ಬೇರೆ ಯಾವ ಕಾರಣವೂ ಖಂಡಿತವಾಗಿಯೂ ಇರಲಾರದು. ॥ ೩೩ ॥ ಇದೆಲ್ಲವೂ ಅವನ ಕರುಣಾ ಪ್ರಸಾದವೇ ಆಗಿದೆ. ಸಾಕ್ಷಾತ್ ಭಗವಾನ್ ಶ್ರೀಕೃಷ್ಣನು ಪೂರ್ಣಕಾಮನೂ, ಲಕ್ಷ್ಮೀಪತಿಯೂ ಆಗಿರುವುದರಿಂದಲೇ ಅನಂತ ಭೋಗ ಸಾಮಗ್ರಿಗಳಿಂದ ಕೂಡಿರುವನು. ಅದಕ್ಕಾಗಿ ಅವನು ಬೇಡುವ ಭಕ್ತನಿಗೆ ಅವನ ಮನಸ್ಸಿನ ಭಾವವನ್ನರಿತು ಬಹಳಷ್ಟು ಕೊಡುತ್ತಾನೆ; ಆದರೆ ಕೊಟ್ಟಿದ್ದು ಸ್ವಲ್ಪವೇ ಎಂದು ಭಾವಿಸಿ ಮುಂದುಗಡೆ ಏನನ್ನೂ ಆಡುವುದಿಲ್ಲ. ನನ್ನ ಮಿತ್ರನಾದ ಯದುವಂಶಭೂಷಣ ಶ್ಯಾಮ ಸುಂದರನು ನಿಜವಾಗಿ – ಸಮುದ್ರವನ್ನೇ ತುಂಬುವ ಸಾಮರ್ಥ್ಯವಿದ್ದರೂ ಮೇಘಗಳು ರೈತನಿಗೆ ಕಾಣಿಸದೆ ಅವನು ಮಲಗಿದಾಗ ರಾತ್ರಿಯಲ್ಲ ಮಳೆಸುರಿಸಿದರೂ ನಾನು ಸ್ವಲ್ಪವೇ ಕೊಟ್ಟಿರುವೆನು ಎಂದುತಿಳಿಯುವಂತೆ, ಆ ಮೇಘಗಳಿಂದಲೂ ಮಿಗಿಲಾದ ಉದಾರನಾಗಿದ್ದಾನೆ. ॥ ೩೪ ॥

ಕಿಂಚಿತ್ಕರೋತ್ಯುರ್ವಪಿ ಯತ್ಸ್ವದತ್ತಂ
ಸುಹೃತ್ಕೃತಂ ಫಲ್ಗ್ವಪಿ ಭೂರಿಕಾರೀ ।
ಮಯೋಪನೀತಾಂ ಪೃಥುಕೈಕಮುಷ್ಟಿಂ
ಪ್ರತ್ಯಗ್ರಹೀತ್ ಪ್ರೀತಿಯುತೋ ಮಹಾತ್ಮಾ ॥ ೩೫ ॥

ತಸ್ಯೈವ ಮೇ ಸೌಹೃದಸಖ್ಯಮೈತ್ರೀ
ದಾಸ್ಯಂ ಪುನರ್ಜನ್ಮನಿ ಜನ್ಮನಿ ಸ್ಯಾತ್ ।
ಮಹಾನುಭಾವೇನ ಗುಣಾಲಯೇನ
ವಿಷಜ್ಜತಸ್ತತ್ಪುರುಷಪ್ರಸಂಗಃ ॥ ೩೬ ॥

ಭಕ್ತಾಯ ಚಿತ್ರಾ ಭಗವಾನ್ ಹಿ ಸಂಪದೋ
ರಾಜ್ಯಂ ವಿಭೂತೀರ್ನ ಸಮರ್ಥಯತ್ಯಜಃ ।
ಅದೀರ್ಘಬೋಧಾಯ ವಿಚಕ್ಷಣಃ ಸ್ವಯಂ
ಪಶ್ಯನ್ನಿಪಾತಂ ಧನಿನಾಂ ಮದೋದ್ಭವಮ್ ॥ ೩೭ ॥

ಇತ್ಥಂ ವ್ಯವಸಿತೋ ಬುದ್ಧ್ಯಾ ಭಕ್ತೋಽತೀವ ಜನಾರ್ದನೇ ।
ವಿಷಯಾನ್ ಜಾಯಯಾ ತ್ಯಕ್ಷ್ಯನ್ ಬುಭುಜೇ ನಾತಿಲಂಪಟಃ ॥ ೩೮ ॥

ತಸ್ಯ ವೈ ದೇವದೇವಸ್ಯ ಹರೇರ್ಯಜ್ಞಪತೇಃ ಪ್ರಭೋಃ ।
ಬ್ರಾಹ್ಮಣಾಃ ಪ್ರಭವೋ ದೈವಂ ನ ತೇಭ್ಯೋ ವಿದ್ಯತೇ ಪರಮ್ ॥ ೩೯ ॥

ಏವಂ ಸ ವಿಪ್ರೋ ಭಗವತ್ಸುಹೃತ್ತದಾ
ದೃಷ್ಟ್ವಾ ಸ್ವಭೃತ್ಯೈರಜಿತಂ ಪರಾಜಿತಮ್ ।
ತದ್ಧ್ಯಾನವೇಗೋದ್ಗ್ರಥಿತಾತ್ಮಬಂಧನ-
ಸ್ತದ್ಧಾಮ ಲೇಭೇಽಚಿರತಃ ಸತಾಂ ಗತಿಮ್ ॥ ೪೦ ॥

ಏತದ್ಬ್ರಹ್ಮಣ್ಯದೇವಸ್ಯ ಶ್ರುತ್ವಾ ಬ್ರಹ್ಮಣ್ಯತಾಂ ನರಃ ।
ಲಬ್ಧಭಾವೋ ಭಗವತಿ ಕರ್ಮಬಂಧಾದ್ವಿಮುಚ್ಯತೇ ॥ ೪೧ ॥

ನನ್ನ ಪ್ರಿಯ ಸಖನಾದ ಶ್ರೀಕೃಷ್ಣನು ಅನಂತವಾಗಿ ಕರುಣಿಸಿದರೂ ಅಲ್ಪವೆಂದೇ ಭಾವಿಸುವನು. ಅವನ ಪ್ರೇಮಿಭಕ್ತರು ಅವನಿಗಾಗಿ ಏನಾದರೂ ಕಿಂಚಿತ್ ಕೊಟ್ಟರೂ ಅವನು ಅಪಾರವೆಂದು ಭಾವಿಸಿಕೊಳ್ಳುತ್ತಾನೆ. ನಾನು ಅವನಿಗೆ ಕೇವಲ ಒಂದು ಹಿಡಿ ಅವಲಕ್ಕಿಯನ್ನು ಕೊಟ್ಟಿದ್ದು; ಆದರೆ ಉದಾರಶಿರೋಮಣಿಯಾದ ಶ್ರೀಕೃಷ್ಣನು ಅದನ್ನು ಅತಿದೊಡ್ಡ ಕಾಣಿಕೆ ಎಂದು ಭಾವಿಸಿ ಅತ್ಯಂತ ಆದರ ಪ್ರೀತಿಯಿಂದ ತಿಂದುಬಿಟ್ಟನಲ್ಲ! ॥ ೩೫ ॥ ಜನ್ಮ-ಜನ್ಮಗಳಲ್ಲಿಯೂ ನನಗೆ ನನ್ನ ಪ್ರಿಯಸಖನಾದ, ಮಹಾನುಭಾವನಾದ, ಸಮಸ್ತ ಗುಣಗಳಿಗೂ ಏಕಮಾತ್ರ ನಿವಾಸಸ್ಥಾನನಾದ ಶ್ರೀಕೃಷ್ಣನೊಬ್ಬನ ಸೌಹೃದ, ಸಖ್ಯ, ಮೈತ್ರಿ, ದಾಸ್ಯಗಳು ಲಭಿಸಲಿ. ಭಗವಾನ್ ಶ್ರೀಕೃಷ್ಣನ ಪಾದಾರವಿಂದಗಳಲ್ಲಿಯೇ ನನ್ನ ಅನುರಾಗವು ಬೆಳೆಯುತ್ತಾ ಇರಲಿ. ಅವನ ಪ್ರೇಮಿ ಭಕ್ತರ ಸತ್ಸಂಗ ದೊರೆಯುತ್ತಾ ಇರಲಿ. ॥ ೩೬ ॥ ಅಜನ್ಮನಾದ ಭಗವಾನ್ ಶ್ರೀಕೃಷ್ಣನು ಸಂಪತ್ತು ಮುಂತಾದವುಗಳ ದೋಷವನ್ನು ತಿಳಿದಿರುವನು. ದೊಡ್ಡ ದೊಡ್ಡ ಶ್ರೀಮಂತರಿಗೆ ಧನಮದದಿಂದ ಉಂಟಾಗುವ ಅಧಃಪತನವನ್ನು ನೋಡುತ್ತಾನೆ. ಅದಕ್ಕಾಗಿ ಅವನು ದೂರದೃಷ್ಟಿಯಿಲ್ಲದ ತನ್ನ ಭಕ್ತನು ಬಯಸಿದರೂ ನಾನಾ ರೀತಿಯ ರಾಜ್ಯ, ಸಂಪತ್ತು, ಐಶ್ವರ್ಯ ಮುಂತಾದವುಗಳನ್ನು ಅವನಿಗೆ ಕೊಡುವುದಿಲ್ಲ. ಇದು ಅವನ ಪರಮ ಕರುಣೆಯೇ ಆಗಿದೆ. ॥ ೩೭ ॥ ಪರೀಕ್ಷಿತನೇ! ಸುದಾಮನು ಹೀಗೆ ತನ್ನ ಬುದ್ಧಿಯಿಂದ ನಿಶ್ಚಯಿಸಿ, ತ್ಯಾಗಪೂರ್ವಕ ಅನಾಸಕ್ತಿ ಭಾವದಿಂದ ತನ್ನ ಪತ್ನಿಯೊಂದಿಗೆ ಭಗವತ್ಪ್ರಸಾದ ರೂಪವಾಗಿ ದೊರೆತ ವಿಷಯಗಳನ್ನು ಅನುಭವಿಸತೊಡಗಿದನು. ಹೀಗೆ ದಿನದಿಂದ ದಿನಕ್ಕೆ ಅವನ ಪ್ರೇಮ-ಭಕ್ತಿಗಳು ಹೆಚ್ಚುತ್ತಲೇ ಹೋದವು. ॥ ೩೮ ॥

ಪ್ರಿಯ ಪರೀಕ್ಷಿತನೇ! ದೇವದೇವನೂ, ಭಕ್ತಭಯಹಾರಿಯೂ, ಯಜ್ಞಪತಿಯೂ ಆದ ಪ್ರಭುವು ಬ್ರಾಹ್ಮಣರನ್ನು ಸಾಕ್ಷಾತ್ ತನ್ನ ಇಷ್ಟದೇವರೆಂದು ಭಾವಿಸುತ್ತಾನೆ. ಅದಕ್ಕಾಗಿ ಬ್ರಾಹ್ಮಣರಿಗಿಂತ ಮಿಗಿಲಾದ ಯಾವುದೇ ಪ್ರಾಣಿಯು ಜಗತ್ತಿನಲ್ಲಿ ಇಲ್ಲ. ॥ ೩೯ ॥ ಹೀಗೆ ಭಗವಂತನ ಪ್ರಿಯಮಿತ್ರನಾದ ಸುದಾಮನು-ಯಾರಿಂದಲೂ ಜಯಿಸಲ್ಪಡದ ಭಗವಂತನು ತನ್ನ ಸೇವಕರಾದ ಭಕ್ತರಿಂದ ಜಯಿಸಲ್ಪಟ್ಟಿರುವುದನ್ನು ಕಂಡು ಅವನ ಧ್ಯಾನದಲ್ಲಿಯೇ ಸದಾ ನಿರತನಾಗಿರುತ್ತಿದ್ದನು. ಧ್ಯಾನದ ಆವೇಗದಿಂದ ಅವಿದ್ಯೆಯ ಗಂಟು ಕಳಚಿಹೋಗಿ, ಅತ್ಯಲ್ಪ ಸಮಯದಲ್ಲೇ ಸಂತರಿಗೆ ಏಕಮಾತ್ರ ಆಶ್ರಯನಾದ ಭಗವಂತನ ಧಾಮವನ್ನು ಸೇರಿದನು. ॥ ೪೦ ॥

ಪರೀಕ್ಷಿತನೇ! ಬ್ರಾಹ್ಮಣರನ್ನು ತನ್ನ ಇಷ್ಟದೇವರೆಂದು ಭಾವಿಸುವ ಭಗವಾನ್ ಶ್ರೀಕೃಷ್ಣನ ಈ ಬ್ರಾಹ್ಮಣಭಕ್ತಿಯನ್ನು ಕೇಳುವವನಿಗೆ ಭಗವಂತನ ಚರಣಗಳಲ್ಲಿ ಪ್ರೇಮಭಾವವು ಉಂಟಾಗಿ, ಅವನು ಕರ್ಮಬಂಧನದಿಂದ ಬಿಡುಗಡೆ ಹೊಂದುವನು. ॥ ೪೧ ॥

ಎಂಭತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೮೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಪೃಥುಕೋಪಾಖ್ಯಾನಂ ನಾಮ ಏಕಾಶೀತಿತಮೋಽಧ್ಯಾಯಃ ॥ ೮೧ ॥

# ಎಂಭತ್ತೆರಡನೆಯ ಅಧ್ಯಾಯ

## ಬಲರಾಮ ಕೃಷ್ಣರು ಗೋಪ-ಗೋಪಿಯರನ್ನು ಸಂಧಿಸಿದುದು

*ಶ್ರೀಶುಕ ಉವಾಚ*

ಅಥೈಕದಾ ದ್ವಾರವತ್ಯಾಂ ವಸತೋ ರಾಮಕೃಷ್ಣಯೋಃ ।
ಸೂರ್ಯೋಪರಾಗಃ ಸುಮಹಾನಾಸೀತ್ಕಲ್ಪಕ್ಷಯೇ ಯಥಾ
॥ ೧ ॥

ತಂ ಜ್ಞಾತ್ವಾ ಮನುಜಾ ರಾಜನ್ ಪುರಸ್ತಾದೇವ ಸರ್ವತಃ ।
ಸಮಂತಪಂಚಕಂ ಕ್ಷೇತ್ರಂ ಯಯುಃ ಶ್ರೇಯೋವಿಧಿತ್ಸಯಾ
॥ ೨ ॥

ನಿಃಕ್ಷತ್ರಿಯಾಂ ಮಹೀಂ ಕುರ್ವನ್ರಾಮಃ ಶಸ್ತ್ರಭೃತಾಂ ವರಃ ।
ನೃಪಾಣಾಂ ರುಧಿರೌಘೇಣ ಯತ್ರ ಚಕ್ರೇ ಮಹಾಹ್ರದಾನ್
॥ ೩ ॥

ಈಜೇ ಚ ಭಗವಾನ್ರಾಮೋ ಯತ್ರಾಸ್ಪೃಷ್ಟೋಽಪಿ ಕರ್ಮಣಾ ।
ಲೋಕಸ್ಯ ಗ್ರಾಹಯನ್ನೀಶೋ ಯಥಾನ್ಯೋಽಘಾಪನುತ್ತಯೇ
॥ ೪ ॥

ಮಹತ್ಯಾಂ ತೀರ್ಥಯಾತ್ರಾಯಾಂ ತತ್ರಾಗನ್ ಭಾರತೀಃ ಪ್ರಜಾಃ ।
ವೃಷ್ಣಯಶ್ಚ ತಥಾಕ್ರೂರವಸುದೇವಾಹುಕಾದಯಃ
॥ ೫ ॥

ಯಯುರ್ಭಾರತ ತತ್ ಕ್ಷೇತ್ರಂ ಸ್ವಮಘಂ ಕ್ಷಪಯಿಷ್ಣವಃ ।
ಗದಪ್ರದ್ಯುಮ್ನಸಾಂಬಾದ್ಯಾಃ ಸುಚಂದ್ರಶುಕಸಾರಣೈಃ
॥ ೬ ॥

ಆಸ್ತೇಽನಿರುದ್ಧೋ ರಕ್ಷಾಯಾಂ ಕೃತವರ್ಮಾ ಚ ಯೂಥಪಃ ।
ತೇ ರಥೈರ್ದೇವಧಿಷ್ಣ್ಯಾಭೈರ್ಹಯೈಶ್ಚ ತರಲಪ್ಲವೈಃ
॥ ೭ ॥

ಗಜೈರ್ನದದ್ಭಿರಭ್ರಾಭೈರ್ನೃಭಿರ್ವಿದ್ಯಾಧರದ್ಯುಭಿಃ ।
ವ್ಯರೋಚಂತ ಮಹಾತೇಜಾಃ ಪಥಿ ಕಾಂಚನಮಾಲಿನಃ
॥ ೮ ॥

ದಿವ್ಯಸ್ರಗ್ವಸ್ತ್ರ ಸನ್ನಾಹಾಃ ಕಲತ್ರೈಃ ಖೇಚರಾ ಇವ ।
ತತ್ರ ಸ್ನಾತ್ವಾ ಮಹಾಭಾಗಾ ಉಪೋಷ್ಯ ಸುಸಮಾಹಿತಾಃ
॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ ! ಹೀಗೆ ಬಲರಾಮ-ಶ್ರೀಕೃಷ್ಣರು ದ್ವಾರಕೆಯಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ಪ್ರಳಯಕಾಲದೋಪಾದಿಯಲ್ಲಿ ಮಹತ್ತರವಾದ ಪೂರ್ಣಗ್ರಾಸ ಸೂರ್ಯಗ್ರಹಣವು ಉಂಟಾಗಿತ್ತು. ॥ ೧ ॥ ಪರೀಕ್ಷಿತನೇ ! ಇದನ್ನು ಮೊದಲೇ ತಿಳಿದ ಜನರು ತಮ್ಮ ಶ್ರೇಯಃ ಪ್ರಾಪ್ತಿಗಾಗಿ ಎಲ್ಲ ಕಡೆಗಳಿಂದಲೂ ಸ್ಯಮಂತಪಂಚಕ ಕ್ಷೇತ್ರಕ್ಕೆ (ಕುರುಕ್ಷೇತ್ರ)ಕ್ಕೆ ಧಾವಿಸಿದರು. ॥ ೨ ॥ ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಪರಶುರಾಮನು ಭೂಮಂಡಲವನ್ನೇ ಕ್ಷತ್ರಿಯರಿಂದ ರಹಿತವಾಗಿಸಿ ರಾಜರ ರಕ್ತದ ಕೋಡಿಯಿಂದಲೇ ದೊಡ್ಡ-ದೊಡ್ಡ ಕುಂಡಗಳನ್ನು ನಿರ್ಮಿಸಿದನು. ಅದೇ ಸ್ಯಮಂತಪಂಚಕ ಕ್ಷೇತ್ರವು. ॥ ೩ ॥ ಸಾಧಾರಣ ಮನುಷ್ಯನು ತನ್ನ ಪಾಪಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವಂತೆಯೇ ಸರ್ವಶಕ್ತನಾದ ಭಗವಾನ್ ಪರಶುರಾಮನು – ತನಗೂ, ತಾನು ಮಾಡಿದ ಕರ್ಮಕ್ಕೂ ಸಂಬಂಧವಿಲ್ಲದಿದ್ದರೂ ಲೋಕಮರ್ಯಾದೆಯನ್ನು ರಕ್ಷಿಸಲಿಕ್ಕಾಗಿ ಅಲ್ಲಿಯೇ ಮಹಾಯಜ್ಞವನ್ನು ಮಾಡಿದ್ದನು. ॥ ೪ ॥

ಪರೀಕ್ಷಿತನೇ ! ಮಹತ್ವಪೂರ್ಣವಾದ ಆ ತೀರ್ಥಯಾತ್ರೆಯ ಸಮಯದಲ್ಲಿ ಭಾರತವರ್ಷದ ಎಲ್ಲ ಪ್ರಾಂತಗಳ ಪ್ರಜೆಗಳು ಕುರುಕ್ಷೇತ್ರಕ್ಕೆ ಆಗಮಿಸಿದರು. ಅವರಲ್ಲಿ ಅಕ್ರೂರ, ವಸುದೇವ, ಉಗ್ರಸೇನನೇ ಮೊದಲಾದ ಹಿರಿಯರೂ, ಗದ, ಪ್ರದ್ಯುಮ್ನ ಸಾಂಬರೇ ಮೊದಲಾದ ಬೇರೆ ಯದುವಂಶೀಯರೂ ತಮ್ಮ-ತಮ್ಮ ಪಾಪಗಳನ್ನು ನಾಶಮಾಡಿಕೊಳ್ಳಲು ಕುರುಕ್ಷೇತ್ರಕ್ಕೆ ಬಂದಿದ್ದರು. ಪ್ರದ್ಯುಮ್ನನಂದನ ಅನಿರುದ್ಧ ಮತ್ತು ಯಾದವ ಸೇನಾಪತಿ ಕೃತವರ್ಮ ಇವರಿಬ್ಬರೂ ಸುಚಂದ್ರ, ಶುಕ, ಸಾರಣ ಮೊದಲಾದವರೊಡನೆ ನಗರದ ರಕ್ಷಣೆಗಾಗಿ ದ್ವಾರಕೆಯಲ್ಲೇ ಉಳಿದರು. ಯಾದವರು ಮೊದಲೇ ಸ್ವಭಾವದಿಂದ ಪರಮ ತೇಜಸ್ವಿಗಳಾಗಿದ್ದರು. ಈಗ ಕೊರಳಲ್ಲಿ ಚಿನ್ನದ ಸರಗಳನ್ನು, ಪುಷ್ಪಹಾರಗಳನ್ನೂ ಬಹುಮೂಲ್ಯ ವಸ್ತ್ರಗಳನ್ನು, ಕವಚಗಳನ್ನು ಧರಿಸಿ ಅವರ ಶೋಭೆ ಇನ್ನೂ ಹೆಚ್ಚಾಗಿತ್ತು. ಅವರೆಲ್ಲರೂ ದೇವತೆಗಳ ವಿಮಾನಕ್ಕೆ ಸದೃಶವಾದ ರಥಗಳಲ್ಲಿಯೂ, ಸಮುದ್ರದ ಅಲೆಗಳಂತೆ ಚಲಿಸುವ ಕುದುರೆಗಳ ಮೇಲೆಯೂ, ಮೇಘಸದೃಶವಾದ ಘೀಳಿಡುತ್ತಿದ್ದ ಆನೆಗಳ ಮೇಲೆಯೂ, ವಿದ್ಯಾಧರರಿಗೆ ಸದೃಶರಾದ ಮನುಷ್ಯರಿಂದ ಒಯ್ಯಲ್ಪಡುತ್ತಿದ್ದ ಪಲ್ಲಕ್ಕಿಗಳ ಮೇಲೆಯೂ ತಮ್ಮ-ತಮ್ಮ ಮಡದಿಯರೊಂದಿಗೆ ಕುಳಿತು ಸ್ವರ್ಗದ ದೇವತೆಗಳಂತೆಯೇ ಯಾತ್ರೆ ಮಾಡಿದರು. ಮಹಾಭಾಗ್ಯಶಾಲಿಗಳಾದ ಯದುವಂಶೀಯರು ಕುರುಕ್ಷೇತ್ರಕ್ಕೆ ತಲುಪಿ ಏಕಾಗ್ರತೆಯಿಂದ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಉಪವಾಸದಿಂದಿದ್ದು ಗ್ರಹಣದ ಪರ್ವಕಾಲವನ್ನು ನಿರೀಕ್ಷಿಸುತ್ತಿದ್ದರು. ॥ ೫-೯ ॥

ಬ್ರಾಹ್ಮಣೇಭ್ಯೋ ದದುರ್ಧೇನೂರ್ವಾಸಃಸ್ರಗ್ರುಕ್ಮಮಾಲಿನೀಃ ।
ರಾಮಹ್ರದೇಷು ವಿಧಿವತ್ಪುನರಾಪ್ಲುತ್ಯ ವೃಷ್ಣಯಃ ॥ ೧೦ ॥

ದದುಃ ಸ್ವನ್ನಂ ದ್ವಿಜಾಗ್ರ್ಯೇಭ್ಯಃ ಕೃಷ್ಣೇ ನೋ ಭಕ್ತಿರಸ್ತ್ವಿತಿ ।
ಸ್ವಯಂ ಚ ತದನುಜ್ಞಾತಾ ವೃಷ್ಣಯಃ ಕೃಷ್ಣದೇವತಾಃ ॥ ೧೧ ॥

ಭುಕ್ತ್ವೋಪವಿವಿಶುಃ ಕಾಮಂ ಸ್ನಿಗ್ಧಚ್ಛಾಯಾಂಘ್ರಿಪಾಂಘ್ರಿಪು ।
ತತ್ರಾಗತಾಂಸ್ತೇ ದದೃಶುಃ ಸುಹೃತ್ಸಂಬಂಧಿನೋ ನೃಪಾನ್ ॥ ೧೨ ॥

ಮತ್ಸ್ಯೋಶೀನರಕೌಸಲ್ಯವಿದರ್ಭಕುರುಸೃಂಜಯಾನ್ ।
ಕಾಂಭೋಜಕೈಕಯಾನ್ಮದ್ರಾನ್ ಕುಂತೀನಾನರ್ತಕೇರಲಾನ್ ॥ ೧೩ ॥

ಅನ್ಯಾಂಶ್ಚೈವಾತ್ಮಪಕ್ಷೀಯಾನ್ ಪರಾಂಶ್ಚ ಶತಶೋ ನೃಪ ।
ನಂದಾದೀನ್ಸುಹೃದೋ ಗೋಪಾನ್ ಗೋಪೀಶ್ಚೋತ್ಕಂಠಿತಾಶ್ಚಿರಮ್ ॥ ೧೪ ॥

ಅನ್ಯೋನ್ಯಸಂದರ್ಶನಹರ್ಷರಂಹಸಾ
ಪ್ರೋತ್ಫುಲ್ಲಹೃದ್ವಕ್ತ್ರಸರೋರುಹಶ್ರಿಯಃ ।
ಆಶ್ಲಿಷ್ಯ ಗಾಢಂ ನಯನೈಃ ಸ್ರವಜ್ಜಲಾ
ಹೃಷ್ಯತ್ತ್ವಚೋ ರುದ್ಧಗಿರೋ ಯಯುರ್ಮುದಮ್ ॥ ೧೫ ॥

ಸ್ತ್ರಿಯಶ್ಚ ಸಂವೀಕ್ಷ್ಯ ಮಿಥೋಽತಿಸೌಹೃದ-
ಸ್ಮಿತಾಮಲಾಪಾಂಗದೃಶೋಽಭಿರೇಭಿರೇ ।
ಸ್ತನೈಃ ಸ್ತನಾನ್ಕುಂಕುಮಪಂಕರೂಷಿತಾನ್
ನಿಹತ್ಯ ದೋರ್ಭಿಃ ಪ್ರಣಯಾಶ್ರುಲೋಚನಾಃ ॥ ೧೬ ॥

ತತೋಽಭಿವಾದ್ಯ ತೇ ವೃದ್ಧಾನ್ಯವಿಷ್ಠೈರಭಿವಾದಿತಾಃ ।
ಸ್ವಾಗತಂ ಕುಶಲಂ ಪೃಷ್ಟ್ವಾ ಚಕ್ರುಃ ಕೃಷ್ಣಕಥಾ ಮಿಥಃ ॥ ೧೭ ॥

ಸೂರ್ಯಗ್ರಹಣವು ಪ್ರಾರಂಭವಾಗುತ್ತಲೇ ವಸ್ತ್ರಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಮತ್ತು ಚಿನ್ನದ ಸರಗಳಿಂದಲೂ ಸಮಲಂಕೃತವಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದರು. ಗ್ರಹಣದ ಮೋಕ್ಷವಾಗುತ್ತಲೇ ಅವರು ಪರಶುರಾಮನಿಂದ ನಿರ್ಮಿತವಾದ ಕುಂಡಗಳಲ್ಲಿ ಯಾದವರು ವಿಧಿವತ್ತಾಗಿ ಸ್ನಾನ ಮಾಡಿದರು ಹಾಗೂ ಸತ್ಪಾತ್ರರಾದ ಬ್ರಾಹ್ಮಣರಿಗೆ ಮೃಷ್ಟಾನ್ನವನ್ನು ಭೋಜನ ಮಾಡಿಸಿ, ಶ್ರೀಕೃಷ್ಣನಲ್ಲಿ ತಮಗೆ ಅಚಲವಾದ ಭಕ್ತಿ ಇರುವಂತೆ ಆಶೀರ್ವದಿಸಬೇಕೆಂದು ಬ್ರಾಹ್ಮಣರಲ್ಲಿ ಪ್ರಾರ್ಥಿಸಿದರು. ಭಗವಾನ್ ಶ್ರೀಕೃಷ್ಣನನ್ನೇ ತಮ್ಮ ಆದರ್ಶ ಮತ್ತು ಇಷ್ಟದೇವನೆಂದು ತಿಳಿದಿರುವ ಯದುವಂಶೀಯರು ಬ್ರಾಹ್ಮಣರಿಂದ ಅನುಮತಿ ಪಡೆದು ಭೋಜನಮಾಡಿದರು. ಮತ್ತೆ ದಟ್ಟವಾದ ಮರಗಳ ಕೆಳಗೆ ತಂಪಾದ ನೆರಳಲ್ಲಿ ತಮ್ಮ-ತಮ್ಮ ಇಚ್ಛಾನುಸಾರವಾಗಿ ಬಿಡಾರಗಳನ್ನು ನಿರ್ಮಿಸಿಕೊಂಡು ವಿಶ್ರಮಿಸಿದರು. ಪರೀಕ್ಷಿತನೇ! ಹೀಗೆ ವಿಶ್ರಾಂತಿ ಪಡೆದು ಯಾದವರು ಅಲ್ಲಿಗೆ ಬಂದಿದ್ದ ತಮ್ಮ ಸುಹೃದರನ್ನು, ಸಂಬಂಧಿಗಳನ್ನು ಸಂದರ್ಶಿಸತೊಡಗಿದರು. ॥ ೧೦-೧೨ ॥ ಅಲ್ಲಿಗೆ ಮತ್ಸ್ಯ, ಉಶೀನರ, ಕೋಸಲ, ವಿದರ್ಭ, ಕುರು, ಸೃಂಜಯ, ಕಾಂಭೋಜ, ಕೈಕಯ, ಮದ್ರ, ಕುಂತಿ, ಆನರ್ತ, ಕೇರಳ, ಹಾಗೆಯೇ ಬೇರೆ ಅನೇಕ ದೇಶದ ತಮ್ಮ ಪಕ್ಷದ ಮತ್ತು ಶತ್ರುಪಕ್ಷದ ನೂರಾರು ರಾಜರು ಬಂದಿದ್ದರು. ಪರೀಕ್ಷಿತನೇ! ಇದಲ್ಲದೆ ಪರಮ ಹಿತೈಷಿ ನಂದರಾಜ ಮೊದಲಾದ ಗೋಪಾಲಕರೂ ಮತ್ತು ಭಗವಂತನ ದರ್ಶನಕ್ಕಾಗಿ ಎಷ್ಟೋ ಕಾಲದಿಂದ ಉತ್ಕಂಠಿತರಾದ ಗೋಪಿಯರೂ ಅಲ್ಲಿಗೆ ಬಂದಿದ್ದರು. ಯಾದವರು ಇವರೆಲ್ಲರನ್ನೂ ನೋಡಿದರು. ॥ ೧೩-೧೪ ॥ ಪರೀಕ್ಷಿತನೇ! ಪರಸ್ಪರ ದರ್ಶನ, ಮಿಲನ, ವಾರ್ತಾಲಾಪದಿಂದ ಎಲ್ಲರಿಗೂ ಬಹಳ ಆನಂದವಾಯಿತು. ಎಲ್ಲರ ಹೃದಯ-ಕಮಲ ಹಾಗೂ ಮುಖ-ಕಮಲಗಳು ಅರಳಿದವು. ಒಬ್ಬರು ಮತ್ತೊಬ್ಬರನ್ನು ಬರಸೆಳೆದು ಅಪ್ಪಿಕೊಳ್ಳುವರು, ಅವರ ಕಣ್ಣುಗಳಲ್ಲಿ ಆನಂದಾಶ್ರುಗಳು ಸುರಿಯುತ್ತಿದ್ದವು. ರೋಮಾಂಚನವುಂಟಾಗಿ ಪ್ರೇಮೋದ್ರೇಕದಿಂದ ಗಂಟಲು ಬಿಗಿದುಕೊಂಡಿತು. ಸಮಸ್ತರೂ ಆನಂದ ಸಾಗರದಲ್ಲಿ ಮುಳುಗಿಹೋದರು. ॥ ೧೫ ॥ ಪುರುಷರಂತೆಯೇ ಸ್ತ್ರೀಯರೂ ಪರಸ್ಪರ ಒಬ್ಬರನ್ನೊಬ್ಬರನ್ನು ನೋಡಿ ಪ್ರೇಮಾನಂದಭರಿತರಾದರು. ಅವರು ಅತ್ಯಂತ ಸೌಹಾರ್ದಭಾವವನ್ನು ಸೂಚಿಸುತ್ತಾ ಮಂದಹಾಸವನ್ನು ಬೀರುತ್ತಾ ಕಡೆಗಣ್ಣನೋಟದಿಂದ ಅನುರಾಗವನ್ನು ವ್ಯಕ್ತಪಡಿಸುತ್ತಾ ಆನಂದಿಸಿದರು. ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡಾಗ ಕುಂಕುಮ ಲಿಪ್ತವಾದ ಕುಚಗಳಿಂದ ಕುಚಗಳನ್ನು ಸಂಘಟಿಸುತ್ತಾ, ಆನಂದ ಬಾಷ್ಪವನ್ನು ಸುರಿಸುತ್ತಾ ನಲಿದಾಡಿದರು. ॥ ೧೬ ॥ ಅನಂತರ ತಮಗಿಂತ ಹಿರಿಯರಿಗೆ ನಮಸ್ಕರಿಸಿದರು ಮತ್ತು ತಮಗಿಂತ ಕಿರಿಯವರಿಂದ ನಮಸ್ಕಾರ ಸ್ವೀಕರಿಸಿದರು. ಅವರು ಪರಸ್ಪರ ಸ್ವಾಗತಿಸುತ್ತಾ, ಕ್ಷೇಮಸಮಾಚಾರವನ್ನು ಕೇಳಿಕೊಂಡು ಮತ್ತೆ ಶ್ರೀಕೃಷ್ಣನ ಮಧುರ ಲೀಲೆಗಳನ್ನು ಒಬ್ಬರು ಮತ್ತೊಬ್ಬರಿಗೆ ಹೇಳಿಕೊಳ್ಳತೊಡಗಿದರು. ॥ ೧೭ ॥

ಪೃಥಾ ಭ್ರಾತೄನ್ ಸ್ವಸೄರ್ವೀಕ್ಷ್ಯ ತತ್ಪುತ್ರಾನ್ಪಿತರಾವಪಿ ।
ಭ್ರಾತೃಪತ್ನೀರ್ಮುಕುಂದಂ ಚ ಜಹೌ ಸಂಕಥಯಾ ಶುಚಃ ॥ ೧೮ ॥

ಕುಂತ್ಯುವಾಚ

ಆರ್ಯ ಭ್ರಾತರಹಂ ಮನ್ಯೇ ಆತ್ಮಾನಮಕೃತಾಶಿಷಮ್ ।
ಯದ್ವಾ ಆಪತ್ಸು ಮದ್ವಾರ್ತಾಂ ನಾನುಸ್ಮರಥ ಸತ್ತಮಾಃ ॥ ೧೯ ॥

ಸುಹೃದೋ ಜ್ಞಾತಯಃ ಪುತ್ರಾ ಭ್ರಾತರಃ ಪಿತರಾವಪಿ ।
ನಾನುಸ್ಮರಂತಿ ಸ್ವಜನಂ ಯಸ್ಯ ದೈವಮದಕ್ಷಿಣಮ್ ॥ ೨೦ ॥

ವಸುದೇವ ಉವಾಚ

ಅಂಬ ಮಾಸ್ಮಾನಸೂಯೇಥಾ ದೈವಕ್ರೀಡನಕಾನ್ನರಾನ್ ।
ಈಶಸ್ಯ ಹಿ ವಶೇ ಲೋಕಃ ಕುರುತೇ ಕಾರ್ಯತೇಽಥವಾ ॥ ೨೧ ॥

ಕಂಸಪ್ರತಾಪಿತಾಃ ಸರ್ವೇ ವಯಂ ಯಾತಾ ದಿಶಂ ದಿಶಮ್ ।
ಏತರ್ಹ್ಯೇವ ಪುನಃ ಸ್ಥಾನಂ ದೈವೇನಾಸಾದಿತಾಃ ಸ್ವಸಃ ॥ ೨೨ ॥

ಶ್ರೀಶುಕ ಉವಾಚ

ವಸುದೇವೋಗ್ರಸೇನಾದ್ಯೈರ್ಯದುಭಿಸ್ತೇಽರ್ಚಿತಾ ನೃಪಾಃ ।
ಆಸನ್ನಚ್ಯುತಸಂದರ್ಶಪರಮಾನಂದನಿರ್ವೃತಾಃ ॥ ೨೩ ॥

ಭೀಷ್ಮೋ ದ್ರೋಣೋಽಂಬಿಕಾಪುತ್ರೋ ಗಾಂಧಾರೀ ಸಸುತಾ ತಥಾ ।
ಸದಾರಾಃ ಪಾಂಡವಾಃ ಕುಂತೀ ಸೃಂಜಯೋ ವಿದುರಃ ಕೃಪಃ ॥ ೨೪ ॥

ಕುಂತಿಭೋಜೋ ವಿರಾಟಶ್ಚ ಭೀಷ್ಮಕೋ ನಗ್ನಜಿನ್ಮಹಾನ್ ।
ಪುರುಜಿದ್ದ್ರುಪದಃ ಶಲ್ಯೋ ಧೃಷ್ಟಕೇತುಃ ಸ ಕಾಶಿರಾಟ್ ॥ ೨೫ ॥

ದಮಘೋಷೋ ವಿಶಾಲಾಕ್ಷೋ ಮೈಥಿಲೋ ಮದ್ರಕೇಕಯೌ ।
ಯುಧಾಮನ್ಯುಃ ಸುಶರ್ಮಾ ಚ ಸಸುತಾ ಬಾಹ್ಲಿಕಾದಯಃ ॥ ೨೬ ॥

ರಾಜಾನೋ ಯೇ ಚ ರಾಜೇಂದ್ರ ಯುಧಿಷ್ಠಿರಮನುವ್ರತಾಃ ।
ಶ್ರೀನಿಕೇತಂ ವಪುಃ ಶೌರೇಃ ಸಸ್ತ್ರೀಕಂ ವೀಕ್ಷ್ಯ ವಿಸ್ಮಿತಾಃ ॥ ೨೭ ॥

ಅಥ ತೇ ರಾಮಕೃಷ್ಣಾಭ್ಯಾಂ ಸಮ್ಯಕ್ ಪ್ರಾಪ್ತಸಮರ್ಹಣಾಃ ।
ಪ್ರಶಶಂಸುರ್ಮುದಾ ಯುಕ್ತಾ ವೃಷ್ಣೀನ್ಕೃಷ್ಣಪರಿಗ್ರಹಾನ್ ॥ ೨೮ ॥

ಪರೀಕ್ಷಿತನೇ! ಕುಂತಿಯು ವಸುದೇವನೇ ಮೊದಲಾದ ತನ್ನ ಸಹೋದರ-ಸಹೋದರಿಯರನ್ನೂ, ಅವರ ಪುತ್ರರನ್ನೂ, ತಂದೆ ತಾಯಿ, ಅತ್ತಿಗೆಯರನ್ನು ಹಾಗೂ ಭಗವಾನ್ ಶ್ರೀಕೃಷ್ಣನನ್ನು ನೋಡಿ, ಅವರೊಂದಿಗೆ ಮಾತಾಡಿ ತನ್ನ ದುಃಖವೆಲ್ಲವನ್ನೂ ಮರೆತಳು.॥೧೮॥

**ಕುಂತಿಯು ವಸುದೇವನಲ್ಲಿ ಹೇಳಿದಳು** – ಅಣ್ಣಾ! ನಾನು ನಿಜವಾಗಿಯೂ ನಿರ್ಭಾಗ್ಯಳೇ ಸರಿ. ನನ್ನ ಒಂದೂ ಆಸೆ ಈಡೇರಲಿಲ್ಲ. ನಿಮ್ಮಂತಹ ಸಾಧು-ಸ್ವಭಾವದ ಸಜ್ಜನ ಸಹೋದರರೂ ಆಪತ್ತಿನಲ್ಲಿ ಸಿಕ್ಕಿಕೊಂಡ ನನ್ನ ಸಮಾಚಾರವನ್ನು ಸ್ಮರಿಸಲೇ ಇಲ್ಲ. ಇದಕ್ಕಿಂತ ಮಿಗಿಲಾದ ದುಃಖದ ಮಾತೇನಿರಬಹುದು? ॥ ೧೯ ॥ ಅಣ್ಣಾ! ದೈವವು ಪ್ರತಿಕೂಲವಾದಾಗ ಅಂತಹವರನ್ನು ಸ್ವಜನರು, ಸಂಬಂಧಿಗಳು, ಪುತ್ರರು, ತಂದೆ-ತಾಯಿಗಳು, ಸಹೋದರರು ಮರೆತು ಬಿಡುತ್ತಾರೆ. ಇದರಲ್ಲಿ ನಿಮ್ಮದೇನೂ ದೋಷವಿಲ್ಲ. ॥ ೨೦ ॥

**ವಸುದೇವನು ಹೇಳಿದನು** – ತಂಗೀ! ಬೇಸರಪಡಬೇಡ. ನಮ್ಮಿಂದ ಬೇರೆ ಎಂದು ಎಣಿಸಬೇಡ. ಮನುಷ್ಯರೆಲ್ಲರೂ ದೈವದ ಕೈಯ ಆಟದ ಗೊಂಬೆಗಳು. ಈ ಸಂಪೂರ್ಣ ಜಗತ್ತು ಈಶ್ವರನ ಅಧೀನದಲ್ಲಿದ್ದು ಕರ್ಮಮಾಡುತ್ತಾ ಅದರ ಫಲವನ್ನು ಅನುಭವಿಸುತ್ತಾರೆ. ॥ ೨೧॥ ಸಹೋದರಿ! ಕಂಸನ ಉಪಟಳದಿಂದ ನಾವೆಲ್ಲರೂ ದಿಕ್ಕಾಪಾಲಾಗಿ ಹೋಗಿದ್ದೆವು. ಈಶ ಕೃಪೆಯಿಂದ ನಾವೆಲ್ಲರೂ ಪುನಃ ನಮ್ಮ-ನಮ್ಮ ಸ್ಥಾನವನ್ನು ಹೊಂದಿ ಕೆಲವೇ ದಿನಗಳಾಗಿವೆ. ॥ ೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಸುದೇವ, ಉಗ್ರಸೇನರೇ ಮೊದಲಾದ ಯಾದವರು ಇಲ್ಲಿಗೆ ಬಂದಿರುವ ಎಲ್ಲ ರಾಜರನ್ನೂ ಯಥೋಚಿತ ನಮಸ್ಕಾರ ಮಾಡಿದರು. ಅವರೆಲ್ಲರೂ ಭಗವಾನ್ ಶ್ರೀಕೃಷ್ಣನ ದರ್ಶನವನ್ನು ಪಡೆದು ಪರಮಾನಂದಭರಿತರಾಗಿ ಶಾಂತಿಯನ್ನು ಅನುಭವಿಸಿದರು. ॥ ೨೩ ॥ ಪರೀಕ್ಷಿತನೇ! ಪಿತಾಮಹ ಭೀಷ್ಮರು, ದ್ರೋಣಾಚಾರ್ಯರು, ಧೃತರಾಷ್ಟ್ರ, ದುರ್ಯೋಧನಾದಿ ಪುತ್ರರೊಂದಿಗೆ ಗಾಂಧಾರಿ, ಪತ್ನಿಯರೊಂದಿಗೆ ಯುಧಿಷ್ಠಿರನೇ ಮೊದಲಾದ ಪಾಂಡವರು, ಕುಂತೀ, ಸೃಂಜಯ, ವಿದುರ, ಕೃಪಾಚಾರ್ಯರು, ಕುಂತಿಭೋಜ, ವಿರಾಟ, ಭೀಷ್ಮಕ, ಮಹಾರಾಜ ನಾಗ್ನಜಿತ್ತು, ಪುರುಜಿತ್ತು, ದ್ರುಪದ, ಶಲ್ಯ, ಧೃಷ್ಟಕೇತು, ಕಾಶೀರಾಜ, ದಮಘೋಷ, ವಿಶಾಲಾಕ್ಷ, ಮಿಥಿಲಾನರೇಶ, ಮದ್ರರಾಜ, ಕೇಕಯನರೇಶ, ಯುಧಾಮನ್ಯು, ಸುಶರ್ಮಾ, ತಮ್ಮ ಪುತ್ರರೊಂದಿಗೆ ಬಾಹ್ಲೀಕ ಹಾಗೂ ಇತರ ಯುಧಿಷ್ಠಿರನ ಅನುಯಾಯಿಗಳಾದ ರಾಜರು – ಹೀಗೆ ಇವರೆಲ್ಲರೂ ರಾಣಿಯರೊಡಗೂಡಿದ್ದ ಭಗವಾನ್ ಶ್ರೀಕೃಷ್ಣನ ಪರಮಸುಂದರ ಶ್ರೀನಿಕೇತನ ದಿವ್ಯಮಂಗಳ ವಿಗ್ರಹವನ್ನು ನೋಡಿ ಅತ್ಯಂತ ವಿಸ್ಮಿತರಾದರು. ॥ ೨೪-೨೭ ॥ ಈಗ ಅವರೆಲ್ಲರೂ ಬಲರಾಮ-ಶ್ರೀಕೃಷ್ಣರಿಂದ ಯಥೋಚಿತವಾದ ಸಮ್ಮಾನವನ್ನು ಪಡೆದು ಅತ್ಯಾನಂದದಿಂದ ಶ್ರೀಕೃಷ್ಣನನ್ನು, ಅವನ ಸ್ವಜನ ಯದುವಂಶೀಯರನ್ನೂ ಪ್ರಶಂಸಿತೊಡಗಿದರು. ॥ ೨೮ ॥

ಅಹೋ ಭೋಜಪತೇ ಯೂಯಂ ಜನ್ಮಭಾಜೋ ನೃಣಾಮಿಹ ।
ಯತ್ಪಶ್ಯಥಾಸಕೃತ್ಕೃಷ್ಣಂ ದುರ್ದರ್ಶಮಪಿ ಯೋಗಿನಾಮ್ ॥ ೨೯ ॥

ಯದ್ವಿಶ್ರುತಿಃ ಶ್ರುತಿನುತೇದಮಲಂ ಪುನಾತಿ
ಪಾದಾವನೇಜನಪಯಶ್ಚ ವಚಶ್ಚ ಶಾಸ್ತ್ರಮ್ ।
ಭೂಃ ಕಾಲಭರ್ಜಿತಭಗಾಪಿ ಯದಂಘ್ರಿಪದ್ಮ-
ಸ್ಪರ್ಶೋತ್ಥಶಕ್ತಿರಭಿವರ್ಷತಿ ನೋಽಖಿಲಾರ್ಥಾನ್ ॥ ೩೦ ॥

ತದ್ದರ್ಶನಸ್ಪರ್ಶನಾನುಪಥಪ್ರಜಲ್ಪ-
ಶಯ್ಯಾಸನಾಶನಸಯೌನಸಪಿಂಡಬಂಧಃ ।
ಯೇಷಾಂ ಗೃಹೇ ನಿರಯವರ್ತ್ಮನಿ ವರ್ತತಾಂ ವಃ
ಸ್ವರ್ಗಾಪವರ್ಗವಿರಮಃ ಸ್ವಯಮಾಸ ವಿಷ್ಣುಃ ॥ ೩೧ ॥

ಶ್ರೀ ಶುಕ ಉವಾಚ

ನಂದಸ್ತತ್ರ ಯದೂನ್ಪ್ರಾಪ್ತಾನ್ ಜ್ಞಾತ್ವಾ ಕೃಷ್ಣಪುರೋಗಮಾನ್ ।
ತತ್ರಾಗಮದ್ವೃತೋ ಗೋಪೈರನಃಸ್ಥಾರ್ಥೈರ್ದಿದೃಕ್ಷಯಾ ॥ ೩೨ ॥

ತಂ ದೃಷ್ಟ್ವಾ ವೃಷ್ಣಯೋ ಹೃಷ್ಟಾಸ್ತನ್ವಃ ಪ್ರಾಣಮಿವೋತ್ಥಿತಾಃ ।
ಪರಿಷಸ್ವಜಿರೇ ಗಾಢಂ ಚಿರದರ್ಶನಕಾತರಾಃ ॥ ೩೩ ॥

ವಸುದೇವಃ ಪರಿಷ್ವಜ್ಯ ಸಂಪ್ರೀತಃ ಪ್ರೇಮವಿಹ್ವಲಃ ।
ಸ್ಮರನ್ ಕಂಸಕೃತಾನ್ ಕ್ಲೇಶಾನ್ ಪುತ್ರನ್ಯಾಸಂ ಚ ಗೋಕುಲೇ ॥ ೩೪ ॥

ಅವರೆಲ್ಲರೂ ಪ್ರಧಾನವಾಗಿ ಉಗ್ರಸೇನನನ್ನು ಸಂಬೋಧಿಸುತ್ತಾ ಹೇಳತೊಡಗಿದರು - "ಭೋಜರಾಜ ಉಗ್ರಸೇನನೇ! ಮನುಷ್ಯ ಲೋಕದಲ್ಲಿ ಜನ್ಮತಾಳಿರುವ ನಿಮ್ಮ ಜೀವನವೇ ನಿಶ್ಚಯವಾಗಿ ಧನ್ಯವಾಗಿದೆ. ಸಾರ್ಥಕವಾಗಿದೆ. ಏಕೆಂದರೆ, ದೊಡ್ಡ-ದೊಡ್ಡ ಯೋಗಿಗಳಿಗೂ ದರ್ಶನಕ್ಕೆ ದುರ್ಲಭನಾದ ಶ್ರೀಕೃಷ್ಣನನ್ನು ನೀವೆಲ್ಲರೂ ನಿತ್ಯ-ನಿರಂತರವಾಗಿ ನೋಡುತ್ತಾ ಇದ್ದೀರಿ. ॥ ೨೯ ॥ ವೇದಗಳು ಅತ್ಯಾದರದಿಂದ ಭಗವಾನ್ ಶ್ರೀಕೃಷ್ಣನ ಕೀರ್ತಿಯನ್ನು ಕೊಂಡಾಡುತ್ತವೆ. ಅವನ ಚರಣೋದಕ ಗಂಗೆಯು, ಅವನ ವಾಣಿಯಾದ (ಗೀತೆಯು) ಶಾಸ್ತ್ರವು ಮತ್ತು ಅವನ ಮಂಗಳ ಕೀರ್ತಿಯು ಈ ಜಗತ್ತನ್ನು ಪಾವನಗೊಳಿಸುತ್ತಿದೆ. ಕಾಲಬಾಧಿತವಾಗಿ ಪೃಥಿವಿಯ ಸೌಭಾಗ್ಯವೆಲ್ಲವೂ ನಾಶವಾಗಿ ಹೋಗಿತ್ತು. ಆದರೆ ಅವನ ಚರಣಕಮಲಗಳ ಸ್ಪರ್ಶಸುಖವನ್ನು ಪಡೆದು ಭೂದೇವಿಯೂ ಸರ್ವಸಮರ್ಥಳಾಗಿ ನಾವು ಅಪೇಕ್ಷಿಸಿದುದೆಲ್ಲವನ್ನೂ ಮಳೆಗರೆಯುತ್ತಿದ್ದಾಳೆ. ॥ ೩೦ ॥ ಉಗ್ರಸೇನನೇ! ಅಂತಹ ದೇವ-ದೇವನಾದ ಶ್ರೀಕೃಷ್ಣನೊಡನೆ ನಿಮಗೆ ವಿವಾಹಸಂಬಂಧ ಹಾಗೂ ಗೋತ್ರ ಸಂಬಂಧವೂ ಇದೆ. ಇಷ್ಟೇ ಅಲ್ಲ; ನೀವೆಲ್ಲರೂ ಯಾವಾಗಲೂ ಅವನನ್ನು ದರ್ಶಿಸುತ್ತಾ, ಸ್ಪರ್ಶಿಸುತ್ತಾ ಇರುವಿರಿ. ಅವನೊಡನೆ ನಡೆಯುವಿರಿ, ಮಾತನಾಡುವಿರಿ, ಮಲಗುವಿರಿ, ಕುಳಿತುಕೊಳ್ಳುವಿರಿ, ಊಟ-ತಿಂಡಿಗಳನ್ನು ಮಾಡುತ್ತಿರುವಿರಿ. ನೀವು ನರಕಕ್ಕೆ ದಾರಿಯಾದ ಸಂಸಾರಸಾಗರದಲ್ಲಿ ಬಿದ್ದು ತೊಳಲುತ್ತಿದ್ದರೂ ನಿಮ್ಮ ಮನೆಯಲ್ಲಿ ಸರ್ವವ್ಯಾಪಕನಾದ ಭಗವಾನ್ ವಿಷ್ಣುವು ಮೂರ್ತಿಮಂತನಾಗಿ ನಿವಾಸಮಾಡಿದ್ದಾನೆ. ಅವನ ದರ್ಶನ ಮಾತ್ರದಿಂದಲೇ ಸ್ವರ್ಗ-ಮೋಕ್ಷಗಳ ಅಭಿಲಾಷೆಗಳೂ ಇಲ್ಲವಾಗುತ್ತವೆ." ॥ ೩೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಶ್ರೀಕೃಷ್ಣನೇ ಮೊದಲಾದ ಯಾದವರು ಕುರುಕ್ಷೇತ್ರಕ್ಕೆ ಆಗಮಿಸಿರುವರು ಎಂದು ಕೇಳಿದ ನಂದಗೋಪನು ಗೋಪಾಲರೊಂದಿಗೆ ತಮ್ಮ ಸಾಮಗ್ರಿಗಳನ್ನು ಎತ್ತಿನ ಗಾಡಿಗಳಲ್ಲಿ ಹೇರಿಕೊಂಡು ತಮ್ಮ ಪ್ರಿಯ ಪುತ್ರರಾದ ಶ್ರೀಕೃಷ್ಣ ಬಲರಾಮರನ್ನು ನೋಡಲಿಕ್ಕಾಗಿ ಅಲ್ಲಿಗೆ ಬಂದರು. ॥ ೩೨ ॥ ನಂದರಾಜ ಮೊದಲಾದ ಗೋಪಾಲರನ್ನು ನೋಡಿ ಸಮಸ್ತ ಯಾದವರು ಆನಂದತುಂದಿಲರಾದರು. ಮೃತ ಶರೀರದಲ್ಲಿ ಪ್ರಾಣಸಂಚಾರವಾದಂತೆ ಲಗುಬಗೆಯಿಂದ ಎದ್ದು ನಿಂತರು. ಪರಸ್ಪರ ಅವರು ಒಬ್ಬರನ್ನೊಬ್ಬರು ಭೇಟಿಯಾಗಲು ಬಹಳ ದಿನಗಳಿಂದ ಕಾತುರರಾಗಿದ್ದರು. ಆದರಿಂದ ಒಬ್ಬರನ್ನೊಬ್ಬರು ಬಹಳ ಹೊತ್ತಿನವರೆಗೆ ಗಾಢವಾಗಿ ಆಲಿಂಗಿಸಿಕೊಂಡೇ ಇದ್ದರು. ॥ ೩೩ ॥ ವಸುದೇವನು ಅತ್ಯಂತ ಪ್ರೇಮವಿಹ್ವಲನಾಗಿ ನಂದಗೋಪನನ್ನು ಅಪ್ಪಿಕೊಂಡನು. ಕಂಸನು ಯಾವ ರೀತಿಯಿಂದ ಸತಾಯಿಸುತ್ತಿದ್ದನು, ತನ್ನ ಪುತ್ರರನ್ನು ಗೋಕುಲಕ್ಕೆ ಕೊಂಡು ಹೋಗಿ ನಂದರಾಜನಲ್ಲಿ, ಹೇಗೆ ಇರಿಸಿದೆನು, ಹೀಗೆ ಎಲ್ಲ ಘಟನೆಗಳು ಒಂದೊಂದಾಗಿ ಅವನಿಗೆ ನೆನಪಾದುವು. ॥ ೩೪ ॥

ಕೃಷ್ಣರಾಮೌ ಪರಿಷ್ವಜ್ಯ ಪಿತರಾವಭಿವಾದ್ಯ ಚ ।
ನ ಕಿಂಚನೋಚತುಃ ಪ್ರೇಮ್ಣಾ ಸಾಶ್ರುಕಂಠೌ ಕುರೂದ್ವಹ
॥ ೩೫ ॥

ತಾವಾತ್ಮಾಸನಮಾರೋಪ್ಯ ಬಾಹುಭ್ಯಾಂ ಪರಿರಭ್ಯ ಚ ।
ಯಶೋದಾ ಚ ಮಹಾಭಾಗಾ ಸುತೌ ವಿಜಹತುಃ ಶುಚಃ
॥ ೩೬ ॥

ರೋಹಿಣೀ ದೇವಕೀ ಚಾಥ ಪರಿಷ್ವಜ್ಯ ವ್ರಜೇಶ್ವರೀಮ್ ।
ಸ್ಮರಂತ್ಯೌ ತತ್ಕೃತಾಂ ಮೈತ್ರಿಂ ಬಾಷ್ಪಕಂಠ್ಯೌ ಸಮೂಚತುಃ
॥ ೩೭ ॥

ಕಾ ವಿಸ್ಮರೇತ ವಾಂ ಮೈತ್ರೀಮನಿವೃತ್ತಾಂ ವ್ರಜೇಶ್ವರಿ ।
ಅವಾಪ್ಯಾಪ್ಯೈಂದ್ರಮೈಶ್ವರ್ಯಂ ಯಸ್ಯಾ ನೇಹ ಪ್ರತಿಕ್ರಿಯಾ
॥ ೩೮ ॥

ಏತಾವದೃಷ್ಟಪಿತರೌ ಯುವಯೋಃ ಸ್ಮ ಪಿತ್ರೋಃ
ಸಂಪ್ರೀಣನಾಭ್ಯುದಯಪೋಷಣಪಾಲನಾನಿ ।
ಪ್ರಾಪ್ಯೋಷತುರ್ಭವತಿ ಪಕ್ಷ್ಮ ಹ ಯದ್ವದಕ್ಷ್ಣೋ-
ರ್ನ್ಯಸ್ತಾವಕುತ್ರ ಚ ಭಯೌ ನ ಸತಾಂ ಪರಃ ಸ್ವ ॥ ೩೯ ॥

ಶ್ರೀಶುಕ ಉವಾಚ

ಗೋಪ್ಯಶ್ಚ ಕೃಷ್ಣಮುಪಲಭ್ಯ ಚಿರಾದಭೀಷ್ಟಂ-
ಯತ್ಪ್ರೇಕ್ಷಣೇ ದೃಶಿಷು ಪಕ್ಷ್ಮಕೃತಂ ಶಪಂತಿ ।
ದೃಗ್ಭಿರ್ಹೃದೀಕೃತಮಲಂ ಪರಿರಭ್ಯ ಸರ್ವಾಃ
ತದ್ಭಾವಮಾಪುರಪಿ ನಿತ್ಯಯುಜಾಂ ದುರಾಪಮ್ ॥ ೪೦ ॥

ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರು ತಾಯಿ ಯಶೋದೆಯನ್ನು ತಂದೆ ನಂದಗೋಪನನ್ನು ಪ್ರೇಮಾದರದಿಂದ ಅಪ್ಪಿಕೊಂಡು, ಚರಣಗಳಲ್ಲಿ ವಂದಿಸಿಕೊಂಡರು. ಪರೀಕ್ಷಿತನೇ! ಆ ಸಮಯದಲ್ಲಿ ಪ್ರೇಮೋದ್ರೇಕದಿಂದ ಸಹೋದರರಿಬ್ಬರ ಗಂಟಲು ಕಟ್ಟಿಕೊಂಡು ಏನನ್ನೂ ಮಾತನಾಡದಾದರು. ॥ ೩೫ ॥ ಮಹಾಭಾಗ್ಯಶಾಲಿಯಾದ ಯಶೋದೆ ಮತ್ತು ನಂದರಾಜನು ಪುತ್ರರಿಬ್ಬರನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು, ಗಾಢವಾಗಿ ಬಿಗಿದಪ್ಪಿಕೊಂಡರು. ಬಹಳ ಕಾಲದಿಂದ ಕಾಣದೇ ಇದ್ದ ಅವರ ಹೃದಯದ ದುಃಖವೆಲ್ಲವೂ ಅಳಿದುಹೋಯಿತು. ॥ ೩೬ ॥ ವಸುದೇವನ ಪತ್ನಿಯರಾದ ದೇವಕೀ-ರೋಹಿಣಿಯರು ವ್ರಜೇಶ್ವರಿಯಾದ ಯಶೋದೆಯನ್ನು ಗಾಢವಾಗಿ ಆಲಿಂಗಿಸಿಕೊಂಡು ಆನಂದ ಬಾಷ್ಪಗಳನ್ನು ಸುರಿಸಿದರು. ತಮ್ಮ ಹಿಂದಿನ ಮೈತ್ರಿಯನ್ನು ಮತ್ತು ಯಶೋದೆಯು ಮಾಡಿದ ಉಪಕಾರವನ್ನು ಜ್ಞಾಪಿಸಿಕೊಳ್ಳುತ್ತಾ ಅವರು ಯಶೋದೆಯ ಬಳಿ ಹೇಳಿದರು - ॥ ೩೭ ॥ ಯಶೋದಾ ದೇವಿಯೇ! ನಿನ್ನ ಮತ್ತು ವ್ರಜೇಶ್ವರನಾದ ನಂದಗೋಪನ ಸುಸ್ಥಿರವಾದ ಮೈತ್ರಿಯನ್ನು ಯಾವಳು ತಾನೇ ಮರೆಯಬಲ್ಲಳು ? ಇಂದ್ರನ ಐಶ್ವರ್ಯವನ್ನೇ ಪಡೆದುಕೊಂಡು ನಿಮಗೆ ಕೊಟ್ಟರೂ ನೀವು ಮಾಡಿದ ಉಪಕಾರವನ್ನು ತೀರಿಸಲಾಗದು. ॥ ೩೮ ॥ ದೇವಿ! ಬಲರಾಮ - ಶ್ರೀಕೃಷ್ಣರು ತಂದೆ-ತಾಯಿಯರನ್ನೇ ಕಾಣದ್ದಾಗ ಇವರ ತಂದೆಯು ಇವರನ್ನು ನ್ಯಾಸರೂಪವಾಗಿ ನಿಮ್ಮಲ್ಲಿ ಬಿಟ್ಟು ಬಂದರು. ಆ ಸಮಯದಲ್ಲಿ ನೀವು ಇವರಿಬ್ಬರನ್ನೂ ರೆಪ್ಪೆಗಳು ಕಣ್ಣನ್ನು ರಕ್ಷಿಸುವಂತೆ ರಕ್ಷಿಸಿದಿರಿ. ನೀವು ಈ ಮಕ್ಕಳನ್ನು ನಿಮ್ಮ ಮುದ್ದು ಮಕ್ಕಳೆಂದೇ ಭಾವಿಸಿ ಪ್ರೀತಿಸಿದಿರಿ, ಬೆಳೆಸಿದಿರಿ, ಲಾಲಿಸಿ ಪಾಲಿಸಿದಿರಿ, ಇವರ ಅಭ್ಯುದಯಕ್ಕಾಗಿ ಅನೇಕ ಮಾಂಗಲಿಕ ಉತ್ಸವಗಳನ್ನು ಆಚರಿಸಿದಿರಿ. ನಿಜಹೇಳಬೇಕೆಂದರೆ ಇವರ ತಂದೆ ತಾಯಿಗಳು ನೀವೇ ಆಗಿದ್ದೀರಿ. ನಿಮ್ಮ ಪಾಲನೆಯಲ್ಲಿ ಇವರು ಯಾವ ಭಯವೂ ಇಲ್ಲದೆ ನಿಮ್ಮ ಮನೆಯಲ್ಲಿ ಇದ್ದರು. ಹೀಗೆ ಮಾಡಿದುದು ಸತ್ಪುರುಷರಾದ ನಿಮಗೆ ಅನುಗುಣವೇ ಆಗಿತ್ತು. ಏಕೆಂದರೆ, ಸತ್ಪುರುಷರ ದೃಷ್ಟಿಯಲ್ಲಿ 'ನಮ್ಮದು-ಬೇರೆಯವರದ್ದು' ಎಂಬ ಭೇದ-ಭಾವವೇ ಇರುವುದಿಲ್ಲ, ಹೀಗೆ ಹೇಳುತ್ತ ಯಶೋದೆಯನ್ನು ಬಹಳವಾಗಿ ಶ್ಲಾಘಿಸಿದರು. ॥ ೩೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಗೋಪಿಯರಿಗೆ ಪರಮಪ್ರಿಯತಮನೂ, ಜೀವನಸರ್ವಸ್ವನೂ ಶ್ರೀಕೃಷ್ಣನೇ ಆಗಿದ್ದನು ಎಂದು ನಾನು ಹೇಳಿದನಷ್ಟೆ! ಅವನನ್ನು ದರ್ಶನಮಾಡುವಾಗ ರೆಪ್ಪೆಗಳು ಮುಚ್ಚಿಕೊಂಡಾಗ ಅವರು ಆ ರೆಪ್ಪೆಗಳನ್ನು ಸೃಷ್ಟಿಸಿದವನನ್ನೇ ಬೈಯುತ್ತಿದ್ದರು. ಅಂತಹ ಪ್ರೇಮಮೂರ್ತಿಗಳಾದ ಗೋಪಿಯರಿಗೆ ಬಹಳ ದಿನಗಳ ಬಳಿಕ ಇಂದು ಭಗವಾನ್ ಶ್ರೀಕೃಷ್ಣನ ದರ್ಶನವಾಯಿತು. ಇದಕ್ಕಾಗಿ ಅವರ ಮನಸ್ಸಿನಲ್ಲಿದ್ದ ಅಭಿಲಾಷೆಯನ್ನು ಯಾರೂ ಅಳೆಯಲಾರರು. ಅವರು ಕಂಗಳ ಮೂಲಕ ತಮ್ಮ ಪ್ರಿಯತಮ ಶ್ರೀಕೃಷ್ಣನನ್ನು ಹೃದಯಕ್ಕೊಯ್ದು ಗಾಢವಾಗಿ ಆಲಿಂಗಿಸಿಕೊಂಡರು ಮತ್ತು ಮನಸ್ಸಿನಲ್ಲೇ ಆಲಿಂಗಿಸಿಕೊಂಡು ತನ್ಮಯರಾಗಿಬಿಟ್ಟರು. ಪರೀಕ್ಷಿತನೇ! ನಿತ್ಯ-ನಿರಂತರ ಅಭ್ಯಾಸ ಮಾಡುವಂತಹ ಯೋಗಿಗಳಿಗೂ ಅತ್ಯಂತ ದುರ್ಲಭವಾದ ಭಾವಸ್ಥಿತಿಯನ್ನು ಅಂದು ಅವರು ಪಡೆದುಕೊಂಡರು. ॥ ೪೦ ॥

ಭಗವಾಂಸ್ತಾಸ್ತಥಾಭೂತಾ ವಿವಿಕ್ತ ಉಪಸಂಗತಃ ।
ಆಶ್ಲಿಷ್ಯಾನಾಮಯಂ ಪೃಷ್ಟ್ವಾ ಪ್ರಹಸನ್ನಿದಮಬ್ರವೀತ್ ॥ ೪೧ ॥

ಅಪಿ ಸ್ಮರಥ ನಃ ಸಖ್ಯಃ ಸ್ವಾನಾಮರ್ಥಚಿಕೀರ್ಷಯಾ ।
ಗತಾಂಶ್ಚಿರಾಯಿತಾನ್ ಶತ್ರುಪಕ್ಷಕ್ಷಪಣಚೇತಸಃ ॥ ೪೨ ॥

ಅಪ್ಯವಧ್ಯಾಯಥಾಸ್ಮಾನ್ ಸ್ವಿದಕೃತಜ್ಞಾವಿಶಂಕಯಾ ।
ನೂನಂ ಭೂತಾನಿ ಭಗವಾನ್ ಯುನಕ್ತಿ ವಿಯುನಕ್ತಿ ಚ ॥ ೪೩ ॥

ವಾಯುರ್ಯಥಾ ಘನಾನೀಕಂ ತೃಣಂ ತೂಲಂ ರಜಾಂಸಿ ಚ ।
ಸಂಯೋಜ್ಯಾಕ್ಷಿಪತೇ ಭೂಯಸ್ತಥಾ ಭೂತಾನಿ ಭೂತಕೃತ್ ॥ ೪೪ ॥

ಮಯಿ ಭಕ್ತಿರ್ಹಿ ಭೂತಾನಾಮಮೃತತ್ವಾಯ ಕಲ್ಪತೇ ।
ದಿಷ್ಟ್ಯಾ ಯದಾಸೀನ್ಮತ್ಸ್ನೇಹೋ ಭವತೀನಾಂ ಮದಾಪನಃ ॥ ೪೫ ॥

ಅಹಂ ಹಿ ಸರ್ವಭೂತಾನಾಮಾದಿರಂತೋಽಂತರಂ ಬಹಿಃ ।
ಭೌತಿಕಾನಾಂ ಯಥಾ ಖಂ ವಾರ್ಭೂರ್ವಾಯುರ್ಜ್ಯೋತಿರಂಗನಾಃ ॥ ೪೬ ॥

ಏವಂ ಹ್ಯೇತಾನಿ ಭೂತಾನಿ ಭೂತೇಷ್ವಾತ್ಮಾಽಽತ್ಮನಾ ತತಃ ।
ಉಭಯಂ ಮಯ್ಯಥ ಪರೇ ಪಶ್ಯತಾಭಾತಮಕ್ಷರೇ ॥ ೪೭ ॥

*ಶ್ರೀಶುಕ ಉವಾಚ*

ಅಧ್ಯಾತ್ಮಶಿಕ್ಷಯಾ ಗೋಪ್ಯ ಏವಂ ಕೃಷ್ಣೇನ ಶಿಕ್ಷಿತಾಃ ।
ತದನುಸ್ಮರಣಧ್ವಸ್ತಜೀವಕೋಶಾಸ್ತಮಧ್ಯಗನ್ ॥ ೪೮ ॥

ಗೋಪಿಯರು ತನ್ನಲ್ಲಿ ತನ್ಮಯರಾಗಿ ಬಿಟ್ಟಿದ್ದಾರೆ ಎಂದು ನೋಡಿದ ಭಗವಾನ್ ಶ್ರೀಕೃಷ್ಣನು ಏಕಾಂತದಲ್ಲಿ ಅವರ ಬಳಿಗೆ ಹೋದನು. ಅವರನ್ನು ಅಪ್ಪಿಕೊಂಡನು. ಕ್ಷೇಮ-ಸಮಾಚಾರವನ್ನು ಕೇಳುತ್ತಾ, ನಸು-ನಗುತ್ತಾ ಹೀಗೆ ಹೇಳಿದನು - ॥ ೪೧ ॥ ಸಖಿಯರೇ! ನಾವು ನಮ್ಮ ಸ್ವಜನ-ಸಂಬಂಧಿಗಳ ಕೆಲಸವನ್ನು ಮಾಡುವುದಕ್ಕಾಗಿ ವ್ರಜದಿಂದ ಹೊರಗೆ ಮತ್ತು ಹೀಗೆ ನಿಮ್ಮಂತಹ ಪ್ರೇಯಸಿಯರನ್ನು ಬಿಟ್ಟು ನಾವು ಶತ್ರುಗಳನ್ನು ನಾಶಮಾಡುವುದರಲ್ಲಿ ತೊಡಗಿ ಬಿಟ್ಟೆವು. ಬಹಳದಿನಗಳು ಕಳೆದುವು ಎಂದಾದರು ನೀವುಗಳು ನಮ್ಮನ್ನು ಸ್ಮರಿಸುತ್ತಿರೇನು? ॥ ೪೨ ॥ ಪ್ರಿಯಗೋಪಿಯರೇ! ಮಾಡಿದ ಉಪಕಾರವನ್ನು ಸ್ಮರಿಸುವವನಲ್ಲವೆಂದು ಭಾವಿಸಿ ನನ್ನನ್ನು ಕಡೆಗಾಣಿಸಿ ಬಿಟ್ಟಿದ್ದೀರಾ? ಹಾಗೆ ನನ್ನನ್ನು ತಿಳಿಯಬೇಡಿರಿ. ಸೇರುವಿಕೆಯೂ ಅಗಲುವಿಕೆಯೂ ನಮ್ಮ ಅಧೀನದಲ್ಲಿಲ್ಲ, ಭಗವಂತನೇ ಪ್ರಾಣಿಗಳ ಸಂಯೋಗ ಮತ್ತು ವಿಯೋಗಕ್ಕೆ ಕಾರಣ ನಾಗಿದ್ದಾನೆ. ॥ ೪೩ ॥ ವಾಯುವು ಮೋಡಗಳನ್ನು, ಹುಲ್ಲುಕಡ್ಡಿ ಗಳನ್ನು, ಹತ್ತಿಯನ್ನು, ಧೂಳಿನ ಕಣಗಳನ್ನು ಒಮ್ಮೆ ಒಂದಾಗಿಸಿ ಮತ್ತೊಮ್ಮೆ ಛಿದ್ರಗೊಳಿಸುತ್ತದೆಯೋ ಹಾಗೆಯೇ ಸಮಸ್ತ ಪದಾರ್ಥ ಗಳ ಸೃಷ್ಟಿಕರ್ತನಾದ ಭಗವಂತನು ಪ್ರಾಣಿಗಳಿಗೆ ಸ್ವೇಚ್ಛೆಯಿಂದ ಸಂಯೋಗ-ವಿಯೋಗಗಳನ್ನು ಉಂಟುಮಾಡುತ್ತಾನೆ. ॥ ೪೪ ॥ ಸಖಿಯರೇ! ನನ್ನನ್ನು ಪಡೆಯುವಂತಹ ಪರಮಪ್ರೇಮವು ನಿಮಗೆ ಲ್ಲರಿಗೆ ಪ್ರಾಪ್ತವಾಗಿರುವುದು ದೊಡ್ಡ ಸೌಭಾಗ್ಯದ ಮಾತಾಗಿದೆ. ಏಕೆಂದರೆ, ನನ್ನ ಕುರಿತು ಉಂಟಾದ ಪ್ರೇಮಾ-ಭಕ್ತಿಯು ಪ್ರಾಣಿ ಗಳಿಗೆ ಅಮೃತತ್ತ್ವವನ್ನು ದೊರಕಿಸುವುದರಲ್ಲಿ ಸಮರ್ಥ ವಾಗಿದೆ. ॥ ೪೫ ॥ ಪ್ರಿಯ ಗೋಪಿಯರೇ! ಘಟ-ಪಟಗಳೇ ಮೊದಲಾದ ಭೌತಿಕ ಪದಾರ್ಥಗಳಿಗೆ ಪಂಚಭೂತಗಳಾದ ಪೃಥಿವಿ, ಜಲ, ವಾಯು, ಅಗ್ನಿ ಆಕಾಶಗಳೇ ಮೂಲಕಾರಣವಾಗಿದ್ದು ಅವುಗಳ ಹೊರಗೂ, ಒಳಗೂ ಇದ್ದು ಅವುಗಳಲ್ಲಿ ಹಾಸುಹೊಕ್ಕಾಗಿದೆಯೋ ಹಾಗೆಯೇ ನಾನು ಸಮಸ್ತ ಪ್ರಾಣಿಗಳ ಆದಿಯೂ, ಮಧ್ಯನೂ, ಅಂತ್ಯನೂ ಹಾಗೂ ಅವುಗಳ ಹೊರಗೆ, ಒಳಗೆ ಕೇವಲ ನಾನೇ ವ್ಯಾಪಿಸಿಕೊಂಡಿದ್ದೇನೆ. ॥ ೪೬ ॥ ಹೀಗೆ ಸಮಸ್ತ ಪ್ರಾಣಿಗಳ ಶರೀರ ಗಳಲ್ಲಿಯೂ ಈ ಪಂಚಭೂತಗಳೇ ಕಾರಣರೂಪದಿಂದ ಉಪಸ್ಥಿತ ವಾಗಿವೆ. ಆತ್ಮನು ಭೋಕ್ತೃವಿನ ರೂಪದಲ್ಲಿ ಅಥವಾ ಜೀವರೂಪ ದಿಂದ ಇದ್ದಾನೆ. ನಾನಾದರೋ ಇವೆರಡರಿಂದಲೂ ಬೇರೆಯಾಗಿ ಅವಿನಾಶಿಯಾದ ಸತ್ಯಸ್ವರೂಪದಲ್ಲಿರುತ್ತೇನೆ. ಆದುದರಿಂದ ಇವೆರಡೂ ನನ್ನೊಳಗೆ ಕಂಡುಬರುತ್ತವೆ. ಹೀಗೆ ನೀವೆಲ್ಲರೂ ಕಂಡುಕೊಳ್ಳಿರಿ. ॥ ೪೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಗೋಪಿಯರಿಗೆ ಅಧ್ಯಾತ್ಮಜ್ಞಾನದ ಉಪದೇಶವನ್ನಿತ್ತನು. ಇಂತಹ ಭಗವದುಪದೇಶವನ್ನು ಪದೇ-ಪದೇ ಸ್ಮರಿಸಿಕೊಳ್ಳುತ್ತಾ ಗೋಪಿಯರ ಜೀವಕೋಶ (ಲಿಂಗಶರೀರ) ನಾಶ ವಾಗಿ ಹೋಯಿತು. ಅವರೆಲ್ಲರೂ ಭಗವಂತನ ನಿಜಸ್ವರೂಪವನ್ನು ಹೊಂದಿದರು. ॥ ೪೮ ॥

ಆಹುಶ್ಚ ತೇ ನಲಿನನಾಭ ಪದಾರವಿಂದಂ
ಯೋಗೇಶ್ವರೈರ್ಹೃದಿ ವಿಚಿಂತ್ಯಮಗಾಧಬೋಧೈಃ ।
ಸಂಸಾರಕೂಪಪತಿತೋತ್ತರಣಾವಲಂಬಂ
ಗೇಹಂಜುಷಾಮಪಿ ಮನಸ್ಯುದಿಯಾತ್ಸದಾ ನಃ ॥ ೪೯ ॥

ಆನಂದತುಂದಿಲರಾದ ಅವರು ಶ್ರೀಕೃಷ್ಣನನ್ನು ಹೀಗೆ ಪ್ರಾರ್ಥಿಸಿಕೊಂಡರು - ಓ ಕಮಲನಾಭನೆ! ಜ್ಞಾನ ಸಂಪನ್ನರಾದ ಮಹಾ-ಮಹಾಯೋಗಿಗಳು ತಮ್ಮ ಹೃದಯಕಮಲಗಳಲ್ಲಿ ನಿನ್ನ ದಿವ್ಯವಾದ ಚರಣಕಮಲಗಳನ್ನು ಸದಾ ಧ್ಯಾನ ಮಾಡುತ್ತಿರುತ್ತಾರೆ. ಸಂಸಾರ ಕೂಪದಲ್ಲಿ ಬಿದ್ದಿರುವ ಜನರಿಗೆ ಪಾರಾಗಲು ನಿನ್ನ ಚರಣಕಮಲಗಳೇ ಏಕಮಾತ್ರ ಅವಲಂಬನೆಯಾಗಿದೆ. ಪ್ರಭೋ! ನಿನ್ನ ಚರಣಕಮಲಗಳು ಮನೆವಾರ್ತೆಯ ಕೆಲಸ ಮಾಡುತ್ತಿದ್ದರೂ ಸದಾಕಾಲ ನಮ್ಮ ಹೃದಯದಲ್ಲಿ ವಿರಾಜಿಸುತ್ತಿರಲಿ; ನಾವು ಒಂದು ಕ್ಷಣವೂ ಅದನ್ನು ಮರೆಯದಂತೆ ದಯಮಾಡಿ ಅನುಗ್ರಹಿಸು. ॥ ೪೯ ॥

ಎಂಭತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೮೨ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ವೃಷ್ಣಿಗೋಪಸಂಗಮೋನಾಮ ದ್ವ್ಯಶೀತಿತಮೋऽಧ್ಯಾಯಃ ॥ ೮೨ ॥

# ಎಂಭತ್ತಮೂರನೆಯ ಅಧ್ಯಾಯ

## ಶ್ರೀಕೃಷ್ಣನ ಪಟ್ಟದರಸಿಯರೊಡನೆ ದ್ರೌಪದಿಯ ಮಾತುಕತೆ

ಶ್ರೀಶುಕ ಉವಾಚ

ತಥಾನುಗೃಹ್ಯ ಭಗವಾನ್ ಗೋಪೀನಾಂ ಸ ಗುರುರ್ಗತಿಃ ।
ಯುಧಿಷ್ಠಿರಮಥಾಪೃಚ್ಛತ್ಸರ್ವಾಂಶ್ಚ ಸುಹೃದೋऽವ್ಯಯಮ್ ॥ ೧ ॥

ತ ಏವಂ ಲೋಕನಾಥೇನ ಪರಿಪೃಷ್ಟಾಃ ಸುಸತ್ಕೃತಾಃ ।
ಪ್ರತ್ಯೂಚುರ್ಹೃಷ್ಟಮನಸಸ್ತತ್ಪಾದೇಕ್ಷಾಹತಾಂಹಸಃ ॥ ೨ ॥

ಕುತೋऽಶಿವಂ ತ್ವಚ್ಚರಣಾಂಬುಜಾಸವಂ
ಮಹನ್ಮನಸ್ತೋ ಮುಖನಿಃಸೃತಂ ಕ್ವಚಿತ್ ।
ಪಿಬಂತಿ ಯೇ ಕರ್ಣಪುಟೈರಲಂ ಪ್ರಭೋ
ದೇಹಂಭೃತಾಂ ದೇಹಕೃದಸ್ಮೃತಿಚ್ಛಿದಮ್ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತ ಮಹಾರಾಜ! ಗೋಪಿಯರಿಗೆ ಪರಮಗುರುವೂ, ಪರಮಾಶ್ರಯನೂ ಆದ ಶ್ರೀಕೃಷ್ಣನು ನಾನು ಹಿಂದೆ ಹೇಳಿದ ಪ್ರಕಾರ ಗೋಪಿಯರಿಗೆ ಆಧ್ಯಾತ್ಮ ಶಿಕ್ಷಣವನ್ನು ಕೊಟ್ಟು ಅನುಗ್ರಹಿಸಿ, ಯುಧಿಷ್ಠಿರನ ಮತ್ತು ಇತರ ಸಮಸ್ತ ಸುಹೃದರ ಕುಶಲಗಳನ್ನು ಕೇಳಿದನು. ॥ ೧ ॥ ಲೋಕನಾಥನಾದ ಶ್ರೀಕೃಷ್ಣನಿಂದ ಸತ್ಕೃತರಾಗಿ ಕುಶಲಪ್ರಶ್ನೆ ಮಾಡಲ್ಪಟ್ಟು ಹಾಗೂ ಆ ಭಗವಂತನ ದಿವ್ಯಪಾದಾರವಿಂದಗಳ ದರ್ಶನಮಾತ್ರದಿಂದಲೇ ಸಮಸ್ತ ಪಾಪಗಳಿಂದ ವಿಮುಕ್ತರಾದ ಯುಧಿಷ್ಠಿರನೇ ಮೊದಲಾದವರು ಪರಮಸಂತುಷ್ಟರಾಗಿ ವಾಸುದೇವನಲ್ಲಿ ಹೇಳಿದರು. ॥ ೨ ॥ ಭಗವಂತಾ! ಮಹಾ ಪುರುಷರು ಸದಾಕಾಲ ತಮ್ಮ ಮನಸ್ಸಿನಲ್ಲೇ ನಿನ್ನ ಪಾದಾರವಿಂದಗಳ ಮಕರಂದವನ್ನು ಪಾನಮಾಡುತ್ತಾ ಇರುತ್ತಾರೆ. ಕೆಲವೊಮ್ಮೆ ಅವರ ಮುಖಕಮಲದಿಂದ ಲೀಲಾ-ಕಥೆಯ ರೂಪದಲ್ಲಿ ಆ ರಸವು ಹೊರಹೊಮ್ಮುವುದು. ಪ್ರಭೋ! ಅಂತಹ ದಿವ್ಯರಸವನ್ನು ಯಾವುದೇ ಪ್ರಾಣಿಯು ಪಾನಮಾಡಿದರೆ ಅವನ ಜನ್ಮ-ಮೃತ್ಯುವಿನ ಚಕ್ರದಲ್ಲಿ ಕೆಡಹುವ ಅವಿದ್ಯೆಯನ್ನು ನಾಶಮಾಡಿಬಿಡುತ್ತದೆ. ಅಂತಹ ರಸವನ್ನು ಕಿವಿಗಳೆಂಬ ದೊನ್ನೆಯಿಂದ ಪಾನಮಾಡುವವರಿಗೆ ಅಮಂಗಳದ ಆಶಂಕೆಯು ಎಲ್ಲಿಯದು? ॥ ೩ ॥

ಹಿತ್ವಾಽಽತ್ಮಧಾಮ ವಿಧುತಾತ್ಮಕೃತತ್ರ್ಯವಸ್ಥ-
ಮಾನಂದಸಂಪ್ಲವಮಖಂಡಮಕುಂಠಬೋಧಮ್ ।
ಕಾಲೋಪಸೃಷ್ಟನಿಗಮಾವನ ಆತ್ತಯೋಗ-
ಮಾಯಾಕೃತಿಂ ಪರಮಹಂಸಗತಿಂ ನತಾಃ ಸ್ಮ ॥ ೪ ॥

ಋಷಿರುವಾಚ

ಇತ್ಯುತ್ತಮಶ್ಲೋಕಶಿಖಾಮಣಿಂ ಜನೇ-
ಷ್ವಭಿಷ್ಟುವತ್ಸ್ವಂಧಕಕೌರವಸ್ತ್ರಿಯಃ ।
ಸಮೇತ್ಯ ಗೋವಿಂದ ಕಥಾ ಮಿಥೋಽಗೃಣಂ-
ಸ್ತ್ರಿಲೋಕಗೀತಾಃ ಶೃಣು ವರ್ಣಯಾಮಿ ತೇ ॥ ೫ ॥

ದ್ರೌಪದ್ಯುವಾಚ

ಹೇ ವೈದರ್ಭ್ಯಚ್ಯುತೋ ಭದ್ರೇ ಹೇ ಜಾಂಬವತಿ ಕೌಸಲೇ ।
ಹೇ ಸತ್ಯಭಾಮೇ ಕಾಲಿಂದಿ ಶೈಬ್ಯೇ ರೋಹಿಣಿ ಲಕ್ಷ್ಮಣೇ
॥ ೬ ॥

ಹೇ ಕೃಷ್ಣಪತ್ನ್ಯ ಏತನ್ನೋ ಬ್ರೂತವೋ ಭಗವಾನ್ ಸ್ವಯಮ್ ।
ಉಪಯೇಮೇ ಯಥಾ ಲೋಕಮನುಕುರ್ವನ್ಸ್ವಮಾಯಯಾ
॥ ೭ ॥

ರುಕ್ಮಿಣ್ಯುವಾಚ

ಚೈದ್ಯಾಯ ಮಾರ್ಪಯಿತುಮುದ್ಯತಕಾರ್ಮುಕೇಷು
ರಾಜಸ್ವಜೇಯಭಟಶೇಖರಿತಾಂಘ್ರಿರೇಣುಃ ।
ನಿನ್ಯೇ ಮೃಗೇಂದ್ರ ಇವ ಭಾಗಮಜಾವಿಯೂಥಾತ್
ತಚ್ಛ್ರೀನಿಕೇತ ಚರಣೋಽಸ್ತು ಮಮಾರ್ಚನಾಯ ॥ ೮ ॥

ಸತ್ಯಭಾಮೋವಾಚ

ಯೋ ಮೇ ಸನಾಭಿವಧತಪ್ತಹೃದಾ ತತೇನ
ಲಿಪ್ತಾಭಿಶಾಪಮಪಮಾರ್ಷ್ಟುಮುಪಾಜಹಾರ ।
ಜಿತ್ವರ್ಕ್ಷರಾಜಮಥ ರತ್ನಮದಾತ್ಸತೇನ
ಭೀತಃ ಪಿತಾದಿಶತ ಮಾಂ ಪ್ರಭವೇಽಪಿ ದತ್ತಾಮ್ ॥ ೯ ॥

ಭಗವಂತನೇ! ನೀನು ಏಕರಸನೂ, ಜ್ಞಾನಸ್ವರೂಪನೂ, ಅಖಂಡ ಆನಂದದ ಸಮುದ್ರನೂ ಆಗಿರುವೆ. ಬುದ್ಧಿ-ವೃತ್ತಿಗಳಿಂದ ಉಂಟಾಗುವ ಜಾಗ್ರತ್, ಸ್ವಪ್ನ, ಸುಷುಪ್ತಿ - ಈ ಮೂರು ಅವಸ್ಥೆಗಳೂ ನಿನ್ನ ಸ್ವಯಂಪ್ರಕಾಶ ಸ್ವರೂಪದವರೆಗೆ ತಲುಪ ಲಾರವು; ದೂರದಿಂದಲೇ ನಾಶವಾಗಿ ಹೋಗುವುದು. ನೀನು ಪರಮಹಂಸರಿಗೆ ಏಕಮಾತ್ರ ಗತಿಸ್ವರೂಪನು. ಕಾಲಕ್ರಮದಲ್ಲಿ ವೇದಗಳು ಹ್ರಾಸ ಗೊಂಡಿರುವುದನ್ನು ನೋಡಿ, ಅವನ್ನು ರಕ್ಷಿಸಲಿಕ್ಕಾಗಿ ನೀನೇ ಅಚಿಂತ್ಯ ಯೋಗಮಾಯೆಯ ಮೂಲಕ ಮನುಷ್ಯರಂತೆ ಶರೀರವನ್ನು ಗ್ರಹಿಸುತ್ತೀಯೆ. ಅಂತಹ ನಿನ್ನ ಚರಣಗಳಲ್ಲಿ ನಾವು ಪದೇ-ಪದೇ ನಮಸ್ಕರಿಸುತ್ತೇವೆ. ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಯುಧಿಷ್ಠಿರಾದಿಗಳು ಶ್ರೀಕೃಷ್ಣನನ್ನು ಸ್ತುತಿಸುತ್ತಿದ್ದಾಗ ಯಾದವ ಸ್ತ್ರೀಯರು ಮತ್ತು ಕೌರವ ಕುಲದ ಸ್ತ್ರೀಯರು ಒಟ್ಟಾಗಿ ಕುಳಿತು ಪರಸ್ಪರವಾಗಿ ಭಗವಂತನ ತ್ರಿಭುವನವಿಖ್ಯಾತವಾದ ಲೀಲೆಗಳನ್ನು ಮಾತನಾಡಿಕೊಳ್ಳುತ್ತಿದ್ದರು. ಈಗ ನಾನು ನಿನಗೆ ಅವರ ಮಾತು ಗಳನ್ನು ವರ್ಣಿಸುವೆನು. ಏಕಾಗ್ರಚಿತ್ತನಾಗಿ ಕೇಳು. ॥ ೫ ॥

**ದ್ರೌಪದಿಯು ಹೇಳಿದಳು** - ಎಲೌ ರುಕ್ಮಿಣಿಯೇ! ಭದ್ರೆ! ಜಾಂಬವತಿ! ಸತ್ಯೆ! ಸತ್ಯಭಾಮೆ! ಕಾಲಿಂದಿ! ಶೈಬ್ಯೆ! ಮಿತ್ರವಿಂದೆ! ಲಕ್ಷ್ಮಣೇ! ರೋಹಿಣಿಯೇ! ಮತ್ತು ಶ್ರೀಕೃಷ್ಣನ ಇತರ ಪತ್ನಿಯರೇ! ಸಾಕ್ಷಾತ್ ಭಗವಾನ್ ಶ್ರೀಕೃಷ್ಣನು ತನ್ನ ಮಾಯೆ ಯಿಂದ ಲೋಕಾಚಾರವನ್ನು ಅನುಸರಿಸುತ್ತಾ ಯಾವ ರೀತಿಯಿಂದ ನಿಮ್ಮೆಲ್ಲರನ್ನು ಮದುವೆಯಾದನು? ಇದನ್ನು ಕೇಳುವ ಉತ್ಸುಕತೆ ನಮಗಿದೆ. ನಿಮ್ಮ-ನಿಮ್ಮ ವಿವಾಹ ಪ್ರಸಂಗವನ್ನು ವಿವರಿಸಿ ಹೇಳಿರಿ. ॥ ೬-೭ ॥

**ರುಕ್ಮಿಣಿಯು ಹೇಳುತ್ತಾಳೆ** - ದ್ರೌಪದಾದೇವೀ! ಜರಾಸಂಧನೇ ಮೊದಲಾದ ಸಮಸ್ತರಾಜರು ನನ್ನ ವಿವಾಹವು ಶಿಶುಪಾಲನೊಂದಿಗೆ ಆಗಬೇಕೆಂದು ಬಯಸುತ್ತಿದ್ದರು. ಅದಕ್ಕಾಗಿ ಅವರೆಲ್ಲರೂ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಯುದ್ಧಮಾಡಲು ಸಿದ್ಧರಾಗಿ ದ್ದರು. ಆದರೆ ಭಗವಂತನು - ಸಿಂಹವು ಕುರಿಯ ಮಂದೆಗೆ ನುಗ್ಗಿ ತನ್ನ ಭಾಗವನ್ನು ಕೊಂಡೊಯ್ಯುವಂತೆ ಆ ರಾಜರ ಮಧ್ಯದಿಂದ ನನ್ನನ್ನು ಕೊಂಡೊಯ್ದನು. ಸಮಸ್ತ ಸಂಪತ್ತಿಗೂ, ಸೌಂದರ್ಯಕ್ಕೂ ಆಶ್ರಯವಾದ ಆ ಭಗವಂತನ ಚರಣಕಮಲಗಳೇ ಜನ್ಮ-ಜನ್ಮ ಗಳಲ್ಲಿ ನನ್ನ ಆರಾಧನೆಗೆ ಲಭಿಸುವಂತಾಗಲಿ. ॥ ೮ ॥

**ಸತ್ಯಭಾಮೆಯು ಹೇಳುತ್ತಾಳೆ** - ದ್ರೌಪದಿಯೇ! ನನ್ನ ತಂದೆಯು ತಮ್ಮನಾದ ಪ್ರಸೇನನ ಮೃತ್ಯುವಿನಿಂದಾಗಿ ಬಹಳ ದುಃಖಿತನಾಗಿ ದ್ದನು. ಆದ್ದರಿಂದ ಅವನು ತಮ್ಮನ ವಧೆಯ ಕಲಂಕವನ್ನು ಭಗವಂತನಿಗೆ ಹಚ್ಚಿದ್ದನು. ಆ ಕಲಂಕವನ್ನು ದೂರ ಮಾಡಲಿಕ್ಕಾಗಿ ಭಗವಂತನು ಋಕ್ಷರಾಜ ಜಾಂಬವಂತನನ್ನು ಜಯಿಸಿ ಆ ಸ್ಯಮಂತಕ ರತ್ನವನ್ನು ತಂದು ನನ್ನ ತಂದೆಗೆ ಕೊಟ್ಟನು. ಮಿಥ್ಯಾಪ ವಾದ ಹೊರಿಸಿದ ಕಾರಣದಿಂದ ಹೆದರಿಹೋಗಿದ್ದ ನನ್ನ ತಂದೆಯು ಬೇರೆಯವರಿಗೆ ವಾಗ್ದಾನಮಾಡಿದ್ದರೂ, ಅವರು ನನ್ನನ್ನು ಸ್ಯಮಂತಕ ಮಣಿಯೊಂದಿಗೆ ಭಗವಂತನ ಚರಣಗಳಲ್ಲಿ ಅರ್ಪಿಸಿದನು. ॥ ೯ ॥

ಜಾಂಬವತ್ಯುವಾಚ

ಪ್ರಾಜ್ಞಾಯ ದೇಹಕೃದಮುಂ ನಿಜನಾಥದೇವಂ
ಸೀತಾಪತಿಂ ತ್ರಿಣವಹಾನ್ಯಮುನಾಭ್ಯಯುಧ್ಯತ್ ।
ಜ್ಞಾತ್ವಾ ಪರೀಕ್ಷಿತ ಉಪಾಹರದರ್ಹಣಂ ಮಾಂ
ಪಾದೌ ಪ್ರಗೃಹ್ಯ ಮಣಿನಾಹಮಮುಷ್ಯ ದಾಸೀ ॥ ೧೦ ॥

ಕಾಲಿಂದ್ಯುವಾಚ

ತಪಶ್ಚರಂತೀಮಾಜ್ಞಾಯ ಸ್ವಪಾದಸ್ಪರ್ಶನಾಶಯಾ ।
ಸಖ್ಯೋಪೇತ್ಯಾಗ್ರಹೀತ್ಪಾಣಿಂ ಯೋಽಹಂ ತದ್ಗೃಹಮಾರ್ಜನೀ ॥ ೧೧ ॥

ಮಿತ್ರವಿಂದೋವಾಚ

ಯೋ ಮಾಂ ಸ್ವಯಂವರ ಉಪೇತ್ಯ ವಿಜಿತ್ಯ ಭೂಪಾನ್
ನಿನ್ಯೇ ಶ್ವಯೂಥಗಮಿವಾತ್ಮಬಲಿಂ ದ್ವಿಪಾರಿಃ ।
ಭ್ರಾತೄಂಶ್ಚ ಮೇಽಪಕುರುತಃ ಸ್ವಪುರಂ ಶ್ರಿಯೌಕ-
ಸ್ತಸ್ಯಾಸ್ತು ಮೇಽನುಭವಮಂಘ್ರ್ಯವನೇಜನತ್ವಮ್ ॥ ೧೨ ॥

ಸತ್ಯೋವಾಚ

ಸಪ್ತೋಕ್ಷಣೋಽತಿಬಲವೀರ್ಯಸುತೀಕ್ಷ್ಣಶೃಂಗಾನ್
ಪಿತ್ರಾಕೃತಾನ್ಕ್ಷಿತಿಪವೀರ್ಯ ಪರೀಕ್ಷಣಾಯ ।
ತಾನ್ವೀರದುರ್ಮದಹನಸ್ತರಸಾ ನಿಗೃಹ್ಯ
ಕ್ರೀಡನ್ಬಬಂಧ ಹ ಯಥಾ ಶಿಶವೋಽಜತೋಕಾನ್ ॥ ೧೩ ॥

ಯ ಇತ್ಥಂ ವೀರ್ಯಶುಲ್ಕಾಂ ಮಾಂ ದಾಸೀಭಿಶ್ಚತುರಂಗಿಣೀಮ್ ।
ಪಥಿ ನಿರ್ಜಿತ್ಯ ರಾಜನ್ಯಾನ್ನಿನ್ಯೇ ತದ್ದಾಸ್ಯಮಸ್ತು ಮೇ ॥ ೧೪ ॥

**ಜಾಂಬವತಿಯು ಹೇಳುತ್ತಾಳೆ** – ಪಾಂಚಾಲಿಯೇ! ಋಕ್ಷರಾಜನಾದ ನನ್ನ ತಂದೆ ಜಾಂಬವಂತನಿಗೆ ಶ್ರೀಕೃಷ್ಣನು ತನ್ನ ಸ್ವಾಮಿಯಾದ ಸೀತಾಪತಿ ಶ್ರೀರಾಮನೇ ಎಂಬುದು ಮೊದಲು ತಿಳಿದಿರಲಿಲ್ಲ. ಇದರಿಂದ ನನ್ನ ತಂದೆಯು ಇವರೊಂದಿಗೆ ಇಪ್ಪತ್ತೇಳು ದಿನಗಳವರೆಗೆ ಯುದ್ಧಮಾಡಿದನು. ಆದರೆ ಪರೀಕ್ಷೆಯು ಪೂರ್ಣಗೊಂಡಾಗ ಇವನು ಭಗವಾನ್ ಶ್ರೀರಾಮನೇ ಆಗಿರುವನು ಎಂದು ತಿಳಿದಾಗ ಶ್ರೀಕೃಷ್ಣನ ಚರಣಕಮಲಗಳನ್ನು ಹಿಡಿದುಕೊಂಡು ಸ್ಯಮಂತಕ ಮಣಿಯೊಂದಿಗೆ ಕಾಣಿಕೆಯಾಗಿ ನನ್ನನ್ನೂ ಸಮರ್ಪಿಸಿದನು. ಜನ್ಮ-ಜನ್ಮಗಳಲ್ಲಿಯೂ ಇವರ ದಾಸಿಯಾಗಿಯೇ ಇರಬೇಕೆಂದು ನಾನೂ ಬಯಸಿದ್ದೆ. ॥ ೧೦ ॥

**ಕಾಲಿಂದಿಯು ಹೇಳುತ್ತಾಳೆ** – ದ್ರೌಪದೀದೇವಿ! ನಾನು ಭಗವಂತನ ಚರಣಗಳನ್ನು ಸ್ಪರ್ಶಿಸಬೇಕೆಂಬ ಅಭಿಲಾಷೆಯಿಂದ ತಪಸ್ಸು ಮಾಡುತ್ತಿದ್ದೇನೆ ಎಂದು ತಿಳಿದ ಶ್ರೀಕೃಷ್ಣನು ತನ್ನ ಮಿತ್ರನಾದ ಅರ್ಜುನನೊಂದಿಗೆ ಯುಮುನಾತೀರಕ್ಕೆ ಬಂದು ನನ್ನನ್ನು ಪರಿಗ್ರಹಿಸಿದನು. ನಾನು ಆವನ ಮನೆಯ ಕಸಗುಡಿಸುವ ದಾಸಿಯಾಗಿದ್ದೇನೆ. ॥ ೧೧ ॥

**ಮಿತ್ರವಿಂದೆಯು ಹೇಳಿದಳು** – ಪಾಂಚಾಲರಾಜಕುಮಾರಿ! ನನ್ನ ಸ್ವಯಂವರವನ್ನು ಏರ್ಪಡಿಸಿದ್ದರು. ಅಲ್ಲಿಗೆ ಬಂದು ಭಗವಂತನು – ಸಿಂಹವು ನಾಯಿಗಳ ಮಧ್ಯದಲ್ಲಿರುವ ತನ್ನ ಭಾಗವನ್ನು ಎತ್ತಿಕೊಂಡು ಹೋಗುವಂತೆಯೇ ಅಲ್ಲಿ ನೆರೆದಿದ್ದ ಸಮಸ್ತ ರಾಜರನ್ನು ಗೆದ್ದು ನನ್ನನ್ನು ತನ್ನ ಶೋಭಾಸಂಪನ್ನ ದ್ವಾರಕೆಗೆ ಕರೆತಂದನು. ನನ್ನ ಸಹೋದರನೂ ಕೂಡ ಭಗವಂತನಿಂದ ಬಿಡಿಸಿ ನನಗೆ ಅಪಕಾರವನ್ನು ಮಾಡಲೆಳಸಿದನು; ಆದರೆ ಅವನೂ ಸೋತು ಹಿಂದಿರುಗಿದನು. ನನಗೆ ಜನ್ಮ-ಜನ್ಮಾಂತರಗಳಲ್ಲಿಯೂ ಭಗವಂತನ ಪಾದಸೇವೆ ಮಾಡುವ ಸೌಭಾಗ್ಯವು ಪ್ರಾಪ್ತವಾಗಲೆಂದೇ ನಾನು ಬಯಸುತ್ತೇನೆ. ॥ ೧೨ ॥

**ಸತ್ಯೆಯು ಹೇಳಿದಳು** – ದ್ರೌಪದಿ! ನನ್ನ ತಂದೆಯು ಸ್ವಯಂವರಕ್ಕೆ ಆಗಮಿಸುವ ರಾಜಕುಮಾರರ ಬಲ-ಪೌರುಷಗಳನ್ನು ಪರೀಕ್ಷಿಸುವ ಸಲುವಾಗಿ ಬಲಿಷ್ಠವಾಗಿದ್ದ, ಪರಾಕ್ರಮಿಗಳಾದ ಮತ್ತು ತೀಕ್ಷ್ಣವಾದ ಕೊಂಬುಗಳಿಂದ ಭಯಂಕರವಾಗಿ ಕಾಣುತ್ತಿದ್ದ ಏಳು ಹೋರಿಗಳನ್ನು ಸಿದ್ಧಗೊಳಿಸಿದ್ದನು. ಆ ಹೋರಿಗಳನ್ನು ಪಳಗಿಸಿದವನಿಗೆ ನನ್ನನ್ನು ಕೊಡುವುದಾಗಿ ನನ್ನ ತಂದೆಯ ಆಶಯವಾಗಿತ್ತು. ನನ್ನ ಕೈಹಿಡಿಯಲು ಬಂದಿದ್ದ ಹಲವಾರು ರಾಜಕುಮಾರರನ್ನು ಆ ಹೋರಿಗಳು ಛಿನ್ನ-ಭಿನ್ನಗೊಳಿಸಿದ್ದವು. ಆದರೆ ನನ್ನ ಪ್ರಭುವಾದ ಶ್ರೀಕೃಷ್ಣನು ಆ ಏಳು ಹೋರಿಗಳನ್ನು – ಬಾಲಕರು ಮೇಕೆಯ ಮರಿಗಳನ್ನು ಹಿಡಿದು ಕಟ್ಟಿಹಾಕುವಂತೆ ಆಟವಾಡುತ್ತಲೇ ಬಂದಿಸಿಬಿಟ್ಟನು. ॥ ೧೩॥ ಹೀಗೆ ಭಗವಂತನು ಬಲ-ಪೌರುಷಗಳಿಂದ ನನ್ನನ್ನು ಪಡೆದುಕೊಂಡು ಚತುರಂಗ ಸೈನ್ಯದೊಂದಿಗೆ ಮತ್ತು ಹಲವಾರು ದಾಸಿಯರೊಂದಿಗೆ ದ್ವಾರಕೆಗೆ ಕರೆತಂದನು. ದಾರಿಯಲ್ಲಿ ವಿಘ್ನವನ್ನೊಡ್ಡಿದ ರಾಜರನ್ನು ಸೋಲಿಸಿಬಿಟ್ಟನು. ನನಗೆ ಆವನ ಸೇವೆಯ ಸೌಭಾಗ್ಯವು ಸದಾ-ಸರ್ವಕಾಲಗಳಲ್ಲಿ ದೊರೆಯುತ್ತಿರಬೇಕೆಂಬುದೇ ನನ್ನ ಬಯಕೆಯಾಗಿದೆ. ॥ ೧೪ ॥

ಭದ್ರೋವಾಚ

ಪಿತಾ ಮೇ ಮಾತುಲೇಯಾಯ ಸ್ವಯಮಾಹೂಯ ದತ್ತವಾನ್ ।
ಕೃಷ್ಣೇ ಕೃಷ್ಣಾಯ ತಚ್ಚಿತ್ತಾಮಕ್ಷೌಹಿಣ್ಯಾ ಸಖೀಜನೈಃ ॥ ೧೫ ॥

ಅಸ್ಯ ಮೇ ಪಾದಸಂಸ್ಪರ್ಶೋ ಭವೇಜ್ಜನ್ಮನಿ ಜನ್ಮನಿ ।
ಕರ್ಮಭಿರ್ಭ್ರಾಮ್ಯಮಾಣಾಯಾ ಯೇನ ತಚ್ಛ್ರೇಯ ಆತ್ಮನಃ ॥ ೧೬ ॥

**ಭದ್ರೆಯು ಹೇಳಿದಳು** - ದ್ರುಪದನಂದಿನಿ! ಭಗವಾನ್ ಶ್ರೀಕೃಷ್ಣನು ನನ್ನ ಸಹೋದರಮಾವನ ಮಗನು, ನನ್ನ ಚಿತ್ತವು ಅವರ ಚರಣಗಳಲ್ಲೇ ಅನುರಕ್ತವಾಗಿ ಹೋಗಿತ್ತು. ನನ್ನ ತಂದೆಯವರಿಗೆ ಈ ವಿಷಯ ತಿಳಿದಾಗ ಅವರು ಸ್ವತಃ ಭಗವಂತನನ್ನು ಕರೆಸಿ ಅನೇಕ ಅಕ್ಷೌಹಿಣೀ ಸೈನ್ಯ ಮತ್ತು ಬಹಳಷ್ಟು ದಾಸಿಯರೊಂದಿಗೆ ನನ್ನನ್ನು ಇವರ ಚರಣಗಳಲ್ಲಿ ಸಮರ್ಪಿಸಿದನು. ॥ ೧೫ ॥ ನಾನು ಮಾಡಿದ ಕರ್ಮಕ್ಕನುಸಾರ ನನಗೆ ಎಲ್ಲೆ ಹುಟ್ಟಬೇಕಾಗಿ ಬಂದರೂ ಎಲ್ಲಾ ಕಡೆಗಳಲ್ಲಿಯೂ ಶ್ರೀಕೃಷ್ಣನ ಚರಣಕಮಲಗಳ ಸಂಸ್ಪರ್ಶವೇ ದೊರೆಯುತ್ತಿರಲಿ. ಇದರಲ್ಲೇ ನನ್ನ ಶ್ರೇಯಸ್ಸಿದೆ ಎಂದು ತಿಳಿಯುತ್ತೇನೆ. ॥ ೧೬ ॥

ಲಕ್ಷ್ಮಣೋವಾಚ

ಮಮಾಪಿ ರಾಜ್ಞ್ಯಚ್ಯುತಜನ್ಮಕರ್ಮ
ಶ್ರುತ್ವಾ ಮುಹುರ್ನಾರದಗೀತಮಾಸ ಹ ।
ಚಿತ್ತಂ ಮುಕುಂದೇ ಕಿಲ ಪದ್ಮಹಸ್ತಯಾ
ವೃತಃ ಸುಸಂಮೃಶ್ಯ ವಿಹಾಯ ಲೋಕಪಾನ್ ॥ ೧೭ ॥

ಜ್ಞಾತ್ವಾ ಮಮ ಮತಂ ಸಾಧ್ವಿ ಪಿತಾ ದುಹಿತೃವತ್ಸಲಃ ।
ಬೃಹತ್ಸೇನ ಇತಿ ಖ್ಯಾತಸ್ತತ್ರೋಪಾಯಮಚೀಕರತ್ ॥ ೧೮ ॥

ಯಥಾ ಸ್ವಯಂವರೇ ರಾಜ್ಞಿ ಮತ್ಸ್ಯಃ ಪಾರ್ಥೇಪ್ಸಯಾ ಕೃತಃ ।
ಅಯಂ ತು ಬಹಿರಾಚ್ಛನ್ನೋ ದೃಶ್ಯತೇ ಸ ಜಲೇ ಪರಮ್ ॥ ೧೯ ॥

ಶ್ರುತ್ವೈತತ್ಸರ್ವತೋ ಭೂಪಾ ಆಯಯುರ್ಮತ್ಪಿತುಃ ಪುರಮ್ ।
ಸರ್ವಾಸ್ತ್ರಶಸ್ತ್ರತತ್ತ್ವಜ್ಞಾಃ ಸೋಪಾಧ್ಯಾಯಾಃ ಸಹಸ್ರಶಃ ॥ ೨೦ ॥

ಪಿತ್ರಾ ಸಂಪೂಜಿತಾಃ ಸರ್ವೇ ಯಥಾವೀರ್ಯಂ ಯಥಾವಯಃ ।
ಆದದುಃ ಸಶರಂ ಚಾಪಂ ವೇದ್ಧುಂ ಪರ್ಷದಿ ಮದ್ಧಿಯಃ ॥ ೨೧ ॥

ಆದಾಯ ವ್ಯಸೃಜನ್ ಕೇಚಿತ್ಸಜ್ಯಂ ಕರ್ತುಮನೀಶ್ವರಾಃ ।
ಆಕೋಟಿ ಜ್ಯಾಂ ಸಮುತ್ಕೃಷ್ಯ ಪೇತುರೇಕೇಽಮುನಾ ಹತಾಃ ॥ ೨೨ ॥

ಸಜ್ಯಂ ಕೃತ್ವಾ ಪರೇ ವೀರಾ ಮಾಗಧಾಂಬಷ್ಠಚೇದಿಪಾಃ ।
ಭೀಮೋ ದುರ್ಯೋಧನಃ ಕರ್ಣೋ ನಾವಿಂದಂಸ್ತದವಸ್ಥಿತಿಮ್ ॥ ೨೩ ॥

**ಲಕ್ಷ್ಮಣೆಯು ಹೇಳುತ್ತಾಳೆ** - ಮಹಾರಾಣಿ! ದೇವಋಷಿ ನಾರದರು ಪದೇ-ಪದೇ ಭಗವಂತನ ಅವತಾರ, ಲೀಲಾಪ್ರಸಂಗಗಳನ್ನು ಹಾಡುತ್ತಾ ಇರುತ್ತಾರೆ. ಲಕ್ಷ್ಮೀದೇವಿಯು ಸಮಸ್ತ ಲೋಕಪಾಲರನ್ನು ತ್ಯಜಿಸಿ ಭಗವಂತನನ್ನೇ ವರಿಸಿದಳು ; ಇದನ್ನು ಕೇಳಿದ ನಾನೂ ಭಗವಂತನನ್ನೇ ಸೇರಬೇಕೆಂದು ವಿಚಾರಮಾಡಿ ನನ್ನ ಮನಸ್ಸೂ ಭಗವಂತನ ಚರಣಗಳಲ್ಲಿ ಆಸಕ್ತವಾಯಿತು. ॥ ೧೭ ॥ ಸಾಧ್ವಿ! ನನ್ನ ತಂದೆಯಾದ ಬೃಹತ್ಸೇನನು ನನ್ನನ್ನು ತುಂಬಾ ಪ್ರೀತಿಸುತ್ತಿದ್ದನು. ನನ್ನ ಅಭಿಪ್ರಾಯವು ಅವನಿಗೆ ತಿಳಿಸಿದಾಗ ಅವನು ನನ್ನ ಇಚ್ಛೆಯನ್ನು ನೆರವೇರಿಸಲು ಹೀಗೆ ಉಪಾಯಮಾಡಿದನು. ॥ ೧೮ ॥ ದ್ರೌಪದಿಯೇ! ಪಾಂಡವವೀರನಾದ ಅರ್ಜುನನನ್ನು ಅಳಿಯನನ್ನಾಗಿಸಿಕೊಳ್ಳಲು ನಿನ್ನ ತಂದೆಯು ಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಇರಿಸಿದ್ದನೋ ಹಾಗೆಯೇ ನನ್ನ ತಂದೆಯೂ ಮಾಡಿದರು. ಆದರೆ ನಿಮ್ಮ ಮತ್ಸ್ಯಯಂತ್ರಕ್ಕಿಂತ ನಮ್ಮದು ವಿಶಿಷ್ಟವಾಗಿತ್ತು. ನಿಮ್ಮಲ್ಲಿ ಮತ್ಸ್ಯವು ಹೊರಗಿನಿಂದ ಕಂಡುಬಂದರೆ ನಮ್ಮದು ಹೊರಗಿಂದ ಮುಚ್ಚಲ್ಪಟ್ಟು ಅದರ ನೆರಳು ಕೆಳಗಿನ ನೀರಿನಲ್ಲಿ ಮಾತ್ರ ಕಾಣುತ್ತಿತ್ತು. ॥ ೧೯ ॥ ಈ ಸಮಾಚಾರವು ರಾಜರಿಗೆ ತಿಳಿದಾಗ ಎಲ್ಲ ಕಡೆಗಳಿಂದ ಸಾವಿರಾರು ಅಸ್ತ್ರ-ಶಸ್ತ್ರಗಳ ತಜ್ಞರಾದ ರಾಜರು ತಮ್ಮ-ತಮ್ಮ ಗುರುಗಳೊಂದಿಗೆ ನಮ್ಮ ತಂದೆಯ ರಾಜಧಾನಿಗೆ ಆಗಮಿಸಿದರು. ॥ ೨೦ ॥ ನನ್ನ ತಂದೆಯವರು ಬಂದಿರುವ ರಾಜರೆಲ್ಲರ ಬಲ-ಪೌರುಷ, ವಯಸ್ಸಿಗೆ ತಕ್ಕಂತೆ ಯಥೋಚಿತವಾಗಿ ಸ್ವಾಗತ-ಸತ್ಕಾರವನ್ನು ಮಾಡಿದರು. ಬಂದವರು ನನ್ನನ್ನು ಪಡೆದುಕೊಳ್ಳಲೋಸುವ ಸ್ವಯಂವರ ಸಭೆಯಲ್ಲಿ ಇಟ್ಟ ಧನುರ್ಬಾಣಗಳನ್ನು ಎತ್ತಿಕೊಂಡರು. ॥ ೨೧ ॥ ಅವರಲ್ಲಿ ಎಷ್ಟೋ ರಾಜರು ಧನುಸ್ಸಿಗೆ ಹೆದೆಯೇರಿಸದೇ ಹೋದರು. ಅವರು ಧನುಸ್ಸನ್ನು ಹಾಗೆಯೇ ಇಟ್ಟುಬಿಟ್ಟರು. ಕೆಲವರು ಹೆದೆಯೇರಿಸುವಾಗ ನಾಣನ್ನು ಇನ್ನೊಂದು ತುದಿಗೆ ಬಿಗಿಯಬೇಕೆನ್ನುವಷ್ಟರಲ್ಲಿ ಕೈಜಾರಿ ಬಿದ್ದುಬಿಟ್ಟರು. ॥ ೨೨ ॥ ಮಹಾರಾಣಿ! ಜರಾಸಂಧ, ಅಂಬಷ್ಠನರೇಶ, ಶಿಶುಪಾಲ, ಭೀಮಸೇನ, ದುರ್ಯೋಧನ, ಕರ್ಣ ಮೊದಲಾದ ಮಹಾ-ಮಹಾ ಪ್ರಸಿದ್ಧ ವೀರರು ಹೆದೆಯೇನೋ ಏರಿಸಿದರು. ಆದರೆ ಅವರಿಗೆ ಮೀನಿನ ಲಕ್ಷ್ಯವು ತಿಳಿಯದೇ ಹೋಯಿತು. ॥ ೨೩ ॥

ಮತ್ಸ್ಯಾಭಾಸಂ ಜಲೇ ವೀಕ್ಷ್ಯ ಜ್ಞಾತ್ವಾ ಚ ತದವಸ್ಥಿತಿಮ್ ।
ಪಾರ್ಥೋ ಯತ್ತೋಽಸೃಜದ್ಬಾಣಂ ನಾಚ್ಛಿನತ್ಪಸ್ಪೃಶೇ ಪರಮ್ ॥ ೨೪ ॥

ರಾಜನ್ಯೇಷು ನಿವೃತ್ತೇಷು ಭಗ್ನಮಾನೇಷು ಮಾನಿಷು ।
ಭಗವಾನ್ ಧನುರಾದಾಯ ಸಜ್ಯಂ ಕೃತ್ವಾಥ ಲೀಲಯಾ ॥ ೨೫ ॥

ತಸ್ಮಿನ್ಸಂಧಾಯ ವಿಶಿಖಂ ಮತ್ಸ್ಯಂ ವೀಕ್ಷ್ಯ ಸಕೃಜ್ಜಲೇ ।
ಛಿತ್ತ್ವೇಷುಣಾಪಾತಯತ್ತಂ ಸೂರ್ಯೇ ಚಾಭಿಜಿತಿ ಸ್ಥಿತೇ ॥ ೨೬ ॥

ದಿವಿ ದುಂದುಭಯೋ ನೇದುರ್ಜಯಶಬ್ದಯುತಾ ಭುವಿ ।
ದೇವಾಶ್ಚ ಕುಸುಮಾಸಾರಾನ್ಮುಮುಚುರ್ಹರ್ಷವಿಹ್ವಲಾಃ ॥ ೨೭ ॥

ತದ್ರಂಗಮಾವಿಶಮಹಂ ಕಲನೂಪುರಾಭ್ಯಾಂ
ಪದ್ಭ್ಯಾಂ ಪ್ರಗೃಹ್ಯ ಕನಕೋಜ್ಜ್ವಲರತ್ನಮಾಲಾಮ್ ।
ನೂತ್ನೇ ನಿವೀಯ ಪರಿಧಾಯ ಚ ಕೌಶಿಕಾಗ್ರ್ಯೇ
ಸವ್ರೀಡಹಾಸವದನಾ ಕಬರೀಧೃತಸ್ರಕ್ ॥ ೨೮ ॥

ಉನ್ನೀಯ ವಕ್ತ್ರಮುರುಕುಂತಲಕುಂಡಲತ್ವಿಡ್-
ಗಂಡಸ್ಥಲಂ ಶಿಶಿರಹಾಸಕಟಾಕ್ಷಮೋಕ್ಷೈಃ ।
ರಾಜ್ಞೋ ನಿರೀಕ್ಷ್ಯ ಪರಿತಃ ಶನಕೈರ್ಮುರಾರೇ-
ರಂಸೇಽನುರಕ್ತಹೃದಯಾ ನಿದಧೇ ಸ್ವಮಾಲಾಮ್ ॥ ೨೯ ॥

ತಾವನ್ಮೃದಂಗಪಟಹಾಃ ಶಂಖಭೇರ್ಯಾನಕಾದಯಃ ।
ನಿನೇದುರ್ನಟನರ್ತಕ್ಯೋ ನನೃತುರ್ಗಾಯಕಾ ಜಗುಃ ॥ ೩೦ ॥

ಏವಂ ವೃತೇ ಭಗವತಿ ಮಯೇಶೇ ನೃಪಯೂಥಪಾಃ ।
ನ ಸೇಹಿರೇ ಯಾಜ್ಞಸೇನಿ ಸ್ಪರ್ಧಂತೋ ಹೃಚ್ಛಯಾತುರಾಃ ॥ ೩೧ ॥

ಮಾಂ ತಾವದ್ರಥಮಾರೋಪ್ಯ ಹಯರತ್ನಚತುಷ್ಟಯಮ್ ।
ಶಾರ್ಙ್ಗಮುದ್ಯಮ್ಯ ಸನ್ನದ್ಧಸ್ತಸ್ಥಾವಾಜೌ ಚತುರ್ಭುಜಃ ॥ ೩೨ ॥

ಮಧ್ಯಮ ಪಾಂಡವನಾದ ಅರ್ಜುನನು ನೀರಿನಲ್ಲಿ ಮೀನಿನ ನೆರಳನ್ನು ಗುರುತಿಸಿ ಅದೆಲ್ಲಿದೆ ಎಂಬುದನ್ನು ತಿಳಿದುಕೊಂಡನು. ಬಹಳ ಎಚ್ಚರಿಕೆಯಿಂದ ಬಾಣವನ್ನೂ ಪ್ರಯೋಗಿಸಿದನು. ಆದರೆ ಅವನಿಂದಲೂ ಲಕ್ಷ್ಯವೇಧವಾಗದೆ ಈ ಬಾಣವು ಲಕ್ಷ್ಯವನ್ನು ಸ್ಪರ್ಶಿಸಿ ಹೊರಟುಹೋಯಿತು. ॥ ೨೪ ॥

ಮಹಾರಾಣಿ ! ಹೀಗೆ ಮಹಾ-ಮಹಾ ಅಭಿಮಾನಿಗಳಾಗಿದ್ದ ರಾಜರು ಭಗ್ನದರ್ಪರಾಗಿ, ಭಗ್ನಮನೋರಥರಾಗಿ ಹಿಂದಿರುಗಿದ ನಂತರ ಉಳಿದವರೂ ನನ್ನನ್ನು ಪಡೆಯಬೇಕೆಂಬ ಆಸೆಯನ್ನು, ಮತ್ಸ್ಯಯಂತ್ರಭೇದನದ ಪ್ರಯತ್ನವನ್ನು ತೊರೆದುಬಿಟ್ಟರು. ಆಗ ಭಗವಂತನು ಧನುಸ್ಸನ್ನೆತ್ತಿಕೊಂಡು ಆಡುತ್ತಾಡುತ್ತಲೇ ನಿರಾಯಸ ವಾಗಿ ಹೆದೆಯನ್ನೇರಿಸಿ, ಬಾಣವನ್ನು ಸಂಧಾನಗೈದು ನೀರಿನಲ್ಲಿ ಒಂದೇ ಬಾರಿಗೆ ಮೀನಿನ ನೆರಳನ್ನು ನೋಡಿ ಬಾಣವನ್ನು ಹೂಡಿ ಮೀನನ್ನು ಕೆಳಗೆ ಬೀಳಿಸಿದನು. ಆ ಸಮಯದಲ್ಲಿ ಸರಿಯಾಗಿ ಮಧ್ಯಾಹ್ನವಾಗಿದ್ದು ಸರ್ವಸಾಧಕ ಅಭಿಜಿನ್ಮುಹೂರ್ತವಾಗಿತ್ತು. ॥ ೨೫-೨೬ ॥ ದೇವಿಯೇ! ಆಗ ದೇವದುಂದುಭಿಗಳು ಮೊಳಗಿದವು. ಶ್ರೀಕೃಷ್ಣನಿಗೆ ಜಯವಾಗಲಿ ಎಂಬ ಜಯಘೋಷ ಭೂಮಂಡಲದಲ್ಲೆಲ್ಲ ಕೇಳಿಬರುತ್ತಿತ್ತು. ದೇವತೆಗಳು ಆನಂದ ತುಂದಿಲರಾಗಿ ಹೂವಿನ ಮಳೆಯನ್ನು ಸುರಿಸಿದರು. ॥ ೨೭ ॥ ಮಹಾರಾಣಿ! ಅದೇ ಸಮಯಕ್ಕೆ ಕಾಲಂದುಗೆಗಳು ಝಣ ಝಣಿಸುತ್ತಾ ನಾನು ಸ್ವಯಂವರ ಮಂಟಪವನ್ನು ಪ್ರವೇಶಿಸಿದೆನು. ನಾನು ನವೀನವಾದ ರೇಷ್ಮೆಸೀರೆಯನ್ನುಟ್ಟಿದ್ದು, ತುರುಬಿಗೆ ಮಲ್ಲಿಗೆಯ ದಂಡೆಯನ್ನು ಮುಡಿದುಕೊಂಡು ಬರುವಾಗ ನನ್ನ ಮುಖದಲ್ಲಿ ಲಜ್ಜಾಮಿಶ್ರವಾದ ಮಂದಹಾಸವು ಮಿನುಗುತ್ತಿತ್ತು. ನಾನು ಕೈಯಲ್ಲಿ ರತ್ನಗಳನ್ನು ಕೋದ ಸ್ವರ್ಣ ಹಾರವನ್ನು ಹಿಡಿದಿದ್ದೆನು. ದ್ರೌಪದಿ! ಆಗ ನನ್ನ ಮುಖಮಂಡಲವು ಮುಂಗುರುಗಳಿಂದಲೂ, ಕೆನ್ನೆಗಳ ಮೇಲೆ ಬಿದ್ದ ಕುಂಡಲಗಳ ಪ್ರಭೆಯಿಂದ ಅತ್ಯಂತ ಸುಶೋಭಿತವಾಗಿತ್ತು. ನಾನೊಮ್ಮೆ ಮುಖವೆತ್ತಿ ಚಂದ್ರಕಿರಣದಂತಿರುವ ಶೀತಲ ಓರೆನೋಟದಿಂದ ಸುತ್ತಲೂ ಕುಳಿತಿದ್ದ ರಾಜರ ಕಡೆಗೆ ನೋಡಿ ಮತ್ತೆ ನಿಧಾನವಾಗಿ ಮುನ್ನಡೆದು ಶ್ರೀಕೃಷ್ಣನಲ್ಲೇ ಅನುರಕ್ತವಾದ ಮನಸ್ಸಿನಿಂದ ವರಮಾಲೆಯನ್ನು ಭಗವಂತನ ಕೊರಳಿಗೆ ಹಾಕಿದೆನು. ॥ ೨೮-೨೯ ॥ ನಾನು ವರ ಮಾಲೆಯನ್ನು ತೊಡಿಸುತ್ತಲೇ ಮೃದಂಗ, ಪಟಹ, ಶಂಖ, ಡೋಲು, ನಗಾರಿ ಮುಂತಾದ ಮಂಗಳವಾದ್ಯಗಳು ಮೊಳಗಿದವು. ನಟ ನರ್ತಕಿಯರು ನೃತ್ಯವಾಡತೊಡಗಿದರು, ಗಾಯಕರು ಕರ್ಣಾ ನಂದವಾಗಿ ಹಾಡುತ್ತಿದ್ದರು. ॥ ೩೦ ॥

ದ್ರೌಪದಾದೇವಿಯೇ! ನಾನು ಈ ಪ್ರಕಾರವಾಗಿ ಸರ್ವೇಶ್ವರ ನಾದ ಶ್ರೀಕೃಷ್ಣನ ಕೊರಳಿಗೆ ವರಮಾಲೆಯನ್ನು ತೊಡಿಸಿ ವರಿಸಿ ಕೊಂಡಾಗ ಕಾಮಾತುರರಾದ ರಾಜರೆಲ್ಲರೂ ಸಹಿಸಲಾರದೆ ಮತ್ಸರ ಗೊಂಡು ಕೆರಳಿನಿಂತರು. ॥ ೩೧ ॥ ಚತುರ್ಭುಜನಾದ ಭಗವಂತನು ಶ್ರೇಷ್ಠವಾದ ನಾಲ್ಕು ಕುದುರೆಗಳನ್ನು ಹೂಡಿದ್ದ ರಥದಲ್ಲಿ ನನನ್ನು ಕುಳ್ಳಿರಿಸಿಕೊಂಡು, ಕವಚವನ್ನು ತೊಟ್ಟು ಕೈಯಲ್ಲಿ ಶಾರ್ಙ್ಗಧನುಸ್ಸನ್ನು ಹಿಡಿದುಕೊಂಡು ಯುದ್ಧಕ್ಕೆ ಸಿದ್ಧನಾಗಿ ನಿಂತನು. ॥ ೩೨ ॥

ದಾರುಕಶ್ಚೋದಯಾಮಾಸ ಕಾಂಚನೋಪಸ್ಕರಂ ರಥಮ್ ।
ಮಿಷತಾಂ ಭೂಭುಜಾಂ ರಾಜ್ಞಿ ಮೃಗಾಣಾಂ ಮೃಗರಾಡಿವ
॥ ೩೩ ॥

ತೇಽನ್ವಸಜ್ಜಂತ ರಾಜನ್ಯಾ ನಿಷೇದ್ಧುಂ ಪಥಿ ಕೇಚನ ।
ಸಂಯತ್ತಾ ಉದ್ಧೃತೇಷ್ವಾಸಾ ಗ್ರಾಮಸಿಂಹಾ ಯಥಾ ಹರಿಮ್
॥ ೩೪ ॥

ತೇ ಶಾರ್ಙ್ಗಚ್ಯುತಬಾಣೌಘೈಃ ಕೃತ್ತಬಾಹ್ವಂಘ್ರಿಕಂಧರಾಃ ।
ನಿಪೇತುಃ ಪ್ರಧನೇ ಕೇಚಿದೇಕೇ ಸಂತ್ಯಜ್ಯ ದುದ್ರುವುಃ
॥ ೩೫ ॥

ತತಃ ಪುರೀಂ ಯದುಪತಿರತ್ಯಲಂಕೃತಾಮ್
ರವಿಚ್ಛದಧ್ವಜಪಟಚಿತ್ರತೋರಣಾಮ್ ।
ಕುಶಸ್ಥಲೀಂ ದಿವಿ ಭುವಿ ಚಾಭಿಸಂಸ್ತುತಾಂ
ಸಮಾವಿಶತ್ತರಣಿರಿವ ಸ್ವಕೇತನಮ್ ॥ ೩೬ ॥

ಪಿತಾ ಮೇ ಪೂಜಯಾಮಾಸ ಸುಹೃತ್ಸಂಬಂಧಿ ಬಾಂಧವಾನ್ ।
ಮಹಾರ್ಹವಾಸೋಽಲಂಕಾರೈಃ ಶಯ್ಯಾಸನಪರಿಚ್ಛದೈಃ
॥ ೩೭ ॥

ದಾಸೀಭಿಃ ಸರ್ವಸಂಪದ್ಭಿರ್ಭಟೇಭರಥವಾಜಿಭಿಃ ।
ಆಯುಧಾನಿ ಮಹಾರ್ಹಾಣಿ ದದೌ ಪೂರ್ಣಸ್ಯ ಭಕ್ತಿತಃ
॥ ೩೮ ॥

ಆತ್ಮಾರಾಮಸ್ಯ ತಸ್ಯೇಮಾ ವಯಂ ವೈ ಗೃಹದಾಸಿಕಾಃ ।
ಸರ್ವಸಂಗನಿವೃತ್ತ್ಯಾದ್ಧಾ ತಪಸಾ ಚ ಬಭೂವಿಮ
॥ ೩೯ ॥

ಮಹಿಷ್ಯ ಊಚುಃ

ಭೌಮಂ ನಿಹತ್ಯ ಸಗಣಂ ಯುಧಿ ತೇನ ರುದ್ಧಾ
ಜ್ಞಾತ್ವಾಥ ನಃ ಕ್ಷಿತಿಜಯೇ ಜಿತರಾಜಕನ್ಯಾಃ ।
ನಿರ್ಮುಚ್ಯ ಸಂಸೃತಿವಿಮೋಕ್ಷಮನುಸ್ಮರಂತೀಃ
ಪಾದಾಂಬುಜಂ ಪರಿಣಿನಾಯ ಯ ಆಪ್ತಕಾಮಃ ॥ ೪೦ ॥

ಮಹಾರಾಣಿಯೇ! ಸಿಂಹವು ಜಿಂಕೆಗಳ ಗುಂಪಿನ ನಡುವಿನಿಂದ ಹಾದುಹೋಗುವಂತೆ ಶ್ರೀಕೃಷ್ಣನ ಸಾರಥಿಯಾಗಿ ದಾರುಕನು ಸ್ವರ್ಣಮಯ ಸಾಮಗ್ರಿಗಳಿಂದ ಸುಸಜ್ಜಿತವಾದ ದಿವ್ಯರಥವನ್ನು ರಾಜರುಗಳು ನೋಡುತ್ತಿರುವಂತೆ ಮುನ್ನುಗ್ಗಿಸಿದನು. ॥ ೩೩ ॥ ಸ್ಪರ್ಧಿಸಲು ಹೊರಟಿದ್ದ ರಾಜರಲ್ಲಿ ಕೆಲವರು ಆಯುಧಗಳನ್ನು ಧರಿಸಿ ಯುದ್ಧಸನ್ನದ್ಧರಾಗಿ ಸಿಂಹವನ್ನು ಗ್ರಾಮಸಿಂಹ (ನಾಯಿಗಳು)ಗಳು ಹಿಂಬಾಲಿಸುವಂತೆ ನಾವು ಕುಳಿತಿದ್ದ ರಥವನ್ನು ಹಿಂಬಾಲಿಸಿದರು. ॥ ೩೪ ॥ ಶ್ರೀಕೃಷ್ಣನು ರಥವನ್ನು ನಿಲ್ಲಿಸಿ ಅವರೊಡನೆ ಯುದ್ಧಮಾಡತೊಡಗಿದನು. ಶಾರ್ಙ್ಗಧನುಸ್ಸಿನಿಂದ ಹೊರಟ ಬಾಣಗಳಿಂದ ಹಲವು ರಾಜರ ತೋಳುಗಳು, ತೊಡೆಗಳು, ಕುತ್ತಿಗೆಗಳೂ ಕತ್ತರಿಸಲ್ಪಟ್ಟು ಕೆಳಕ್ಕೆ ಬಿದ್ದವು. ಕೆಲವು ಧರಾಶಾಯಿಗಳಾದರು. ಅಳಿದುಳಿದ ಕೆಲವರು ರಣರಂಗದಿಂದ ಪಲಾಯನ ಮಾಡಿದರು. ॥ ೩೫ ॥

ಅನಂತರ ಸೂರ್ಯನನ್ನು ಮರೆಮಾಡುವ ಧ್ವಜ-ಪತಾಕೆಗಳಿಂದಲೂ, ಚಿತ್ರ-ವಿಚಿತ್ರವಾದ ತೋರಣಗಳಿಂದ ಅತಿಶಯವಾಗಿ ಅಲಂಕರಿಸಲ್ಪಟ್ಟಿದ್ದ ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ ಪ್ರಶಂಸಿತವಾದ ಕುಶಸ್ಥಳಿಯನ್ನು (ದ್ವಾರಕೆಯನ್ನು) ಸೂರ್ಯನಂತೆ ಯದುವಂಶ ಶಿರೋಮಣಿಯಾದ ಶ್ರೀಕೃಷ್ಣನು ಪ್ರವೇಶಿದನು. ॥ ೩೬ ॥ ನನ್ನ ಮನೋರಥವು ಪೂರ್ಣಗೊಂಡಿದ್ದರಿಂದ ನನ್ನ ತಂದೆಯವರಿಗೆ ಬಹಳ ಸಂತೋಷವಾಯಿತು. ಅವನು ತನ್ನ ಹಿತೈಷಿ ಸುಹೃದರನ್ನು, ಬಂಧು-ಬಾಂಧವರನ್ನು, ಜ್ಞಾತಿ-ಬಂಧುಗಳನ್ನು ಬಹುಮೂಲ್ಯ ವಸ್ತ್ರಾಭೂಷಣ, ಶಯ್ಯೆ ಆಸನ ಮೊದಲಾದ ವಿವಿಧ ಸಾಮಗ್ರಿಗಳನ್ನು ಕೊಟ್ಟು ಸನ್ಮಾನಿಸಿದನು. ॥ ೩೭ ॥ ಭಗವಂತನು ಪರಿಪೂರ್ಣನಾಗಿದ್ದರೂ ನನ್ನ ತಂದೆಯು ಅವನಿಗೆ ಅನೇಕ ದಾಸಿಯರನ್ನು, ಅತುಲಸಂಪತ್ತನ್ನೂ, ಚತುರಂಗ ಸೈನ್ಯವನ್ನು ಬಹುಮೂಲ್ಯ ಶಸ್ತ್ರಾಸ್ತ್ರಗಳನ್ನು ಬಳುವಳಿಯಾಗಿ ಸಮರ್ಪಿಸಿದನು. ॥ ೩೮ ॥ ಮಹಾರಾಣಿ! ನಾವು ಹಿಂದಿನ ಜನ್ಮದಲ್ಲಿ ಎಲ್ಲದರ ಆಸಕ್ತಿಯನ್ನು ತ್ಯಜಿಸಿ ಯಾವುದೋ ಮಹತ್ತರ ತಪಸ್ಸು ಮಾಡಿದ್ದಿರಬೇಕು; ಆದರಿಂದಲೇ ನಮಗೆ ಈ ಜನ್ಮದಲ್ಲಿ ಆತ್ಮಾರಾಮನಾದ ಭಗವಂತನ ದಾಸಿಯರಾಗಿರುವ ಸೌಭಾಗ್ಯವು ದೊರೆಯಿತು. ॥ ೩೯ ॥

ಹದಿನಾರು ಸಾವಿರ ಪತ್ನಿಯರ ಪರವಾಗಿ ರೋಹಿಣಿಯು **ಹೇಳುತ್ತಾಳೆ** - ದ್ರೌಪದಿಯೇ! ಭೌಮಾಸುರನು ದಿಗ್ವಿಜಯದ ಸಮಯದಲ್ಲಿ ಬಹಳಷ್ಟು ರಾಜರನ್ನು ಗೆದ್ದು ಅವರ ಕನ್ಯೆಯರಾದ ನಮ್ಮನ್ನು ಕಾರಾಗೃಹದಲ್ಲಿ ಇರಿಸಿದ್ದನು. ಇದನ್ನು ತಿಳಿದ ಭಗವಂತನು ಭೌಮಾಸುರನನ್ನು ಮತ್ತು ಅವನ ಸೇನೆಯನ್ನು ಸಂಹರಿಸಿ, ಶ್ರೀಕೃಷ್ಣನು ಪೂರ್ಣಕಾಮನಾಗಿದ್ದರೂ ಅವನು ನಮ್ಮನ್ನು, ಅಲ್ಲಿಂದ ಬಿಡಿಸಿ, ನಮ್ಮ ಪಾಣಿಗ್ರಹಣವನ್ನು ಮಾಡಿ ತನ್ನ ದಾಸಿಯರನ್ನಾಗಿಸಿದರು. ನಾವೆಲ್ಲರೂ ಸದಾಕಾಲ ಜನ್ಮ-ಮೃತ್ಯುರೂಪವಾದ ಸಂಸಾರದಿಂದ ಬಿಡುಗಡೆಹೊಂದಲು ಅವನ ಚರಣಕಮಲಗಳನ್ನೇ ಧ್ಯಾನಿಸುತ್ತಾ ಇದ್ದೆವು. ॥ ೪೦ ॥

ನ ವಯಂ ಸಾಧ್ವಿ ಸಾಮ್ರಾಜ್ಯಂ ಸ್ವಾರಾಜ್ಯಂ ಭೌಜ್ಯಮಪ್ಯುತ ।
ವೈರಾಜ್ಯಂ ಪಾರಮೇಷ್ಠ್ಯಂ ಚ ಆನಂತ್ಯಂ ವಾ ಹರೇಃ ಪದಮ್ ॥ ೪೧ ॥

ಕಾಮಯಾಮಹ ಏತಸ್ಯ ಶ್ರೀಮತ್ಪಾದರಜಃಶ್ರಿಯಃ ।
ಕುಚಕುಂಕುಮಗಂಧಾಢ್ಯಂ ಮೂರ್ಧ್ನಾ ವೋಢುಂ ಗದಾಭೃತಃ ॥ ೪೨ ॥

ವ್ರಜಸ್ತ್ರಿಯೋ ಯದ್ವಾಂಛಂತಿ ಪುಲಿಂದ್ಯಸ್ತೃಣವೀರುಧಃ ।
ಗಾವಶ್ಚಾರಯತೋ ಗೋಪಾಃ ಪಾದಸ್ಪರ್ಶಂ ಮಹಾತ್ಮನಃ ॥ ೪೩ ॥

ಸಾಧ್ವಿಯೇ! ನಮಗೆ ಸಾಮ್ರಾಜ್ಯವಾಗಲೀ (ಚಕ್ರವರ್ತಿ ಪದವಿ), ಸ್ವಾರಾಜ್ಯವಾಗಲೀ (ಇಂದ್ರ ಪದವಿ), ಭೌಜ್ಯವಾಗಲೀ (ತ್ರೈಲೋಕ್ಯಾಧಿಪತ್ಯ), ವೈರಾಜ್ಯವಾಗಲೀ (ಅಣಿಮಾದಿ ಅಷ್ಟ ಸಿದ್ಧಿಗಳು), ಪಾರಮೇಷ್ಠ್ಯವಾಗಲೀ (ಬ್ರಹ್ಮ ಪದವಿ), ಮೋಕ್ಷ ವಾಗಲೀ, ಅಪೇಕ್ಷಿತವಲ್ಲ. ಶ್ರೀದೇವಿಯ ಕುಚ ಕುಂಕುಮದಿಂದ ಸುಗಂಧಿತವಾದ ಶ್ರೀಕೃಷ್ಣನ ಸುಕೋಮಲವಾದ ಪಾದಾರವಿಂದಗಳ ಧೂಳಿಯನ್ನು ಸದಾ ತಲೆಯಲ್ಲಿ ಧರಿಸಿಕೊಂಡಿರಲು ಬಯಸು ತ್ತೇವೆ. ॥ ೪೧-೪೨ ॥ ಜಗದಾನಂದ ಕಂದನಾದ ಶ್ರೀಕೃಷ್ಣನು ಹಸುಗಳನ್ನು ಮೇಯಿಸುವಾಗ ಅವನ ಕಾಲಿನ ಯಾವ ಧೂಳಿ ಯನ್ನು ಸ್ಪರ್ಶಿಸಬೇಕೆಂದು ಗೊಲ್ಲತಿಯರೂ, ಗೋಪರೂ, ಬೇಡತಿ ಯರೂ ಅಪೇಕ್ಷಿಸುತ್ತಿದ್ದರೋ, ಹುಲ್ಲು-ಕಡ್ಡಿಗಳೂ ಯಾರ ಪಾದಸ್ಪರ್ಶವನ್ನು ಬಯಸುತ್ತಿದ್ದವೋ, ಹಾಗೆಯೇ ನಾವೂ ಕೂಡ ಅವನ ದಿವ್ಯಪಾದಧೂಳಿಯನ್ನು ತಲೆಯಲ್ಲಿ ಸದಾಕಾಲ ಅಪೇಕ್ಷಿಸು ತ್ತೇವೆ. ॥ ೪೩ ॥

ಎಂಭತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೮೩ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ತ್ರ್ಯಶೀತಿತಮೋಽಧ್ಯಾಯಃ ॥ ೮೩ ॥

# ಎಂಭತ್ತನಾಲ್ಕನೆಯ ಅಧ್ಯಾಯ

## ವಸುದೇವನ ಯಜ್ಞೋತ್ಸವವು

*ಶ್ರೀಶುಕ ಉವಾಚ*

ಶ್ರುತ್ವಾ ಪೃಥಾ ಸುಬಲಪುತ್ರ್ಯಥ ಯಾಜ್ಞಸೇನೀ
ಮಾಧವ್ಯಥ ಕ್ಷಿತಿಪಪತ್ನ್ಯ ಉತ ಸ್ವಗೋಪ್ಯಃ ।
ಕೃಷ್ಣೇಽಖಿಲಾತ್ಮನಿ ಹರೌ ಪ್ರಣಯಾನುಬಂಧಂ
ಸರ್ವಾ ವಿಸಿಸ್ಮ್ಯುರಲಮಶ್ರುಕಲಾಕುಲಾಕ್ಷ್ಯಃ ॥ ೧ ॥

ಇತಿ ಸಂಭಾಷಮಾಣಾಸು ಸ್ತ್ರೀಭಿಃ ಸ್ತ್ರೀಷು ನೃಭಿರ್ನೃಷು ।
ಆಯಯುರ್ಮುನಯಸ್ತತ್ರ ಕೃಷ್ಣರಾಮದಿದೃಕ್ಷಯಾ ॥ ೨ ॥

ದ್ವೈಪಾಯನೋ ನಾರದಶ್ಚ ಚ್ಯವನೋ ದೇವಲೋಽಸಿತಃ ।
ವಿಶ್ವಾಮಿತ್ರಃ ಶತಾನಂದೋ ಭರದ್ವಾಜೋಽಥ ಗೌತಮಃ ॥ ೩ ॥

ರಾಮಃ ಸಶಿಷ್ಯೋ ಭಗವಾನ್ ವಸಿಷ್ಠೋ ಗಾಲವೋ ಭೃಗುಃ ।
ಪುಲಸ್ತ್ಯಃ ಕಶ್ಯಪೋಽತ್ರಿಶ್ಚ ಮಾರ್ಕಂಡೇಯೋ ಬೃಹಸ್ಪತಿಃ ॥ ೪ ॥

ದ್ವಿತಸ್ತ್ರಿತಶ್ಚೈಕತಶ್ಚ ಬ್ರಹ್ಮಪುತ್ರಾಸ್ತಥಾಂಗಿರಾಃ ।
ಅಗಸ್ತ್ಯೋ ಯಾಜ್ಞವಲ್ಕ್ಯಶ್ಚ ವಾಮದೇವಾದಯೋಽಪರೇ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿದ್ರಾಜನೇ! ಸರ್ವಾತ್ಮನಾದ ಭಕ್ತಜನ ಭಯಾಪಹಾರಿಯಾದ ಭಗವಾನ್ ಶ್ರೀಕೃಷ್ಣನ ಕುರಿತು ಅವರ ಪತ್ನಿಯರಿಗೆ ಇರುವ ಪ್ರೇಮಾನುಬಂಧವನ್ನು ಅವರ ಬಾಯಿಯಿಂದಲೇ ಕೇಳಿದ ಕುಂತೀ, ಗಾಂಧಾರಿ, ದ್ರೌಪದಿ, ಸುಭದ್ರೆ, ಇತರ ರಾಜಪತ್ನಿಯರು ಮತ್ತು ಭಗವಂತನ ಪ್ರಿಯತಮೆಯರಾದ ಗೋಪಿಯರು - ಅವರ ಅಲೌಕಿಕ ಪ್ರೇಮವನ್ನು ನೋಡಿ ಅತ್ಯಂತ ಮುಗ್ಧರಾಗಿ ಅಚ್ಚರಿ ಗೊಂಡರು. ಎಲ್ಲರ ಕಣ್ಣುಗಳಲ್ಲಿಯೂ ಪ್ರೇಮಾ ಶ್ರುಗಳು ಸುರಿದವು. ॥ ೧ ॥ ಈ ಪ್ರಕಾರವಾಗಿ ಸ್ತ್ರೀಯರೊಂದಿಗೆ ಸ್ತ್ರೀಯರೂ, ಪುರುಷರೊಂದಿಗೆ ಪುರುಷರೂ ಮಾತನಾಡಿಕೊಂಡಿರು ವಾಗಲೇ ಅನೇಕ ಋಷಿ-ಮುನಿಗಳು ಭಗವಾನ್ ಶ್ರೀಕೃಷ್ಣನನ್ನು ಮತ್ತು ಬಲರಾಮನನ್ನು ದರ್ಶನಮಾಡಲು ಅಲ್ಲಿಗೆ ಬಂದರು. ॥ ೨ ॥ ಅವರಲ್ಲಿ ಶ್ರೀಕೃಷ್ಣದ್ವೈಪಾಯನ ವ್ಯಾಸರು, ದೇವರ್ಷಿನಾರದರು, ಚ್ಯವನ, ದೇವಲ, ಅಸಿತ, ವಿಶ್ವಾಮಿತ್ರ, ಶತಾನಂದ, ಭರದ್ವಾಜ, ಗೌತಮ, ತನ್ನ ಶಿಷ್ಯನೊಂದಿಗೆ ಭಗವಾನ್ ಪರಶುರಾಮ, ವಸಿಷ್ಠ ಗಾಲವ, ಭೃಗು, ಪುಲಸ್ತ್ಯ ಕಶ್ಯಪ, ಅತ್ರಿ, ಮಾರ್ಕಂಡೇಯ, ಬೃಹಸ್ಪತಿ, ದ್ವಿತ, ತ್ರಿತ, ಏಕತ, ಸನಕ, ಸನಂದನ, ಸನಾತನ, ಸನತ್ಕುಮಾರ, ಅಂಗಿರಸ್ಸು ಅಗಸ್ತ್ಯ ಯಾಜ್ಞವಲ್ಕ್ಯ ಮತ್ತು ವಾಮದೇವ - ಇವರು ಪ್ರಧಾನರಾಗಿದ್ದರು. ॥ ೩-೫ ॥

**ತಾನ್ ದೃಷ್ಟ್ವಾ ಸಹಸೋತ್ಥಾಯ ಪ್ರಾಗಾಸೀನಾ ನೃಪಾದಯಃ ।**
**ಪಾಂಡವಾಃ ಕೃಷ್ಣರಾಮೌ ಚ ಪ್ರಣೇಮುರ್ವಿಶ್ವವಂದಿತಾನ್ ॥ ೬ ॥**

**ತಾನಾನರ್ಚುರ್ಯಥಾ ಸರ್ವೇ ಸಹರಾಮೋಽಚ್ಯುತೋಽರ್ಚಯತ್ ।**
**ಸ್ವಾಗತಾಸನಪಾದ್ಯಾರ್ಘ್ಯಮಾಲ್ಯಧೂಪಾನುಲೇಪನೈಃ ॥ ೭ ॥**

**ಉವಾಚ ಸುಖಮಾಸೀನಾನ್ ಭಗವಾನ್ ಧರ್ಮಗುಪ್ತನುಃ ।**
**ಸದಸಸ್ತಸ್ಯ ಮಹತೋ ಯತವಾಚೋಽನುಶೃಣ್ವತಃ ॥ ೮ ॥**

*ಶ್ರೀಭಗವಾನುವಾಚ*

**ಅಹೋ ವಯಂ ಜನ್ಮಭೃತೋ ಲಬ್ಧಂ ಕಾರ್ತ್ಸ್ನ್ಯೇನ ತತ್ಫಲಮ್ ।**
**ದೇವಾನಾಮಪಿ ದುಷ್ಪ್ರಾಪಂ ಯದ್ಯೋಗೇಶ್ವರದರ್ಶನಮ್ ॥ ೯ ॥**

**ಕಿಂ ಸ್ವಲ್ಪತಪಸಾಂ ನೃಣಾಮರ್ಚಾಯಾಂ ದೇವಚಕ್ಷುಷಾಮ್ ।**
**ದರ್ಶನಸ್ಪರ್ಶನಪ್ರಶ್ನಪ್ರಹ್ವಪಾದಾರ್ಚನಾದಿಕಮ್ ॥ ೧೦ ॥**

**ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥ ೧೧ ॥**

ನಾಗ್ನಿರ್ನ ಸೂರ್ಯೋ ನ ಚ ಚಂದ್ರತಾರಕಾ
ನ ಭೂರ್ಜಲಂ ಖಂ ಶ್ವಸನೋಽಥ ವಾಙ್ಮನಃ ।
ಉಪಾಸಿತಾ ಭೇದಕೃತೋ ಹರಂತ್ಯಘಂ
ವಿಪಶ್ಚಿತೋ ಘ್ನಂತಿ ಮುಹೂರ್ತಸೇವಯಾ ॥ ೧೨ ॥

ಯಸ್ಯಾತ್ಮಬುದ್ಧಿಃ ಕುಣಪೇ ತ್ರಿಧಾತುಕೇ
ಸ್ವಧೀಃ ಕಲತ್ರಾದಿಷು ಭೌಮ ಇಜ್ಯಧೀಃ ।
ಯತ್ತೀರ್ಥಬುದ್ಧಿಃ ಸಲಿಲೇ ನ ಕರ್ಹಿಚಿ-
ಜ್ಜನೇಷ್ವಭಿಜ್ಞೇಷು ಸ ಏವ ಗೋಖರಃ ॥ ೧೩ ॥

ಋಷಿಗಳನ್ನು ನೋಡುತ್ತಲೇ ಮೊದಲಿನಿಂದ ಕುಳಿತಿದ್ದ ರಾಜರುಗಳೂ, ಯುಧಿಷ್ಠಿರಾದಿ ಪಾಂಡವರೂ, ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರೂ ಎದ್ದು ನಿಂತು ವಿಶ್ವವಂದಿತರಾದ ಋಷಿಗಳಿಗೆ ನಮಸ್ಕರಿಸಿದರು. ॥ ೬ ॥ ಅನಂತರ ಸಮಸ್ತ ರಾಜರೂ, ಬಲರಾಮನೊಂದಿಗೆ ಭಗವಾನ್ ಶ್ರೀಕೃಷ್ಣನೂ ಆ ಋಷಿಗಳಿಗೆಲ್ಲರಿಗೂ ಸ್ವಾಗತ, ಆಸನ, ಅರ್ಘ್ಯ, ಪಾದ್ಯ, ಹೂವಿನ ಹಾರ, ಧೂಪ, ಚಂದನಾದಿಗಳಿಂದ ವಿಧಿವತ್ತಾಗಿ ಪೂಜಿಸಿದರು. ॥ ೭ ॥ ಋಷಿ-ಮುನಿಗಳು ಸುಖಾಸನದಲ್ಲಿ ಕುಳಿತನಂತರ, ಸಭಾಸದರೂ ಮೌನದಿಂದ ಕುಳಿತಿರಲಾಗಿ, ಸಮಸ್ತರೂ ಕೇಳುವಂತೆ ಧರ್ಮದ ರಕ್ಷಣೆಗಾಗಿಯೇ ಅವತರಿಸಿದ್ದ ಭಗವಾನ್ ಶ್ರೀಕೃಷ್ಣನು ಇಂತೆಂದನು - ॥ ೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು -** ಪೂಜ್ಯರಾದ ಋಷಿಶ್ರೇಷ್ಠರೇ ! ನಾವಿಂದು ಧನ್ಯರಾದೆವು. ನಮ್ಮ ಜನ್ಮವು ಸಾರ್ಥಕ್ಯವನ್ನು ಹೊಂದಿತು. ಹುಟ್ಟಿನ ಪೂರ್ಣಫಲವನ್ನು ಇಂದು ಪಡೆದಂತಾಯಿತು. ದೊಡ್ಡ-ದೊಡ್ಡ ದೇವತೆಗಳಿಗೂ ಅತ್ಯಂತ ದುರ್ಲಭವಾದ ಮಹಾಯೋಗೇಶ್ವರರ ದರ್ಶನವು ನಮಗೆ ನಿರಾಯಾಸವಾಗಿ ಪ್ರಾಪ್ತವಾಯಿತು. ॥ ೯ ॥ ಸ್ವಲ್ಪವೇ ತಪಸ್ಸು ಮಾಡುವವರಿಗೆ ಮತ್ತು ಇಷ್ಟದೇವತೆಯನ್ನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ನೋಡದೆ ಕೇವಲ ವಿಗ್ರಹಗಳಲ್ಲೇ ದೇವರನ್ನು ಕಾಣುವವರಿಗೆ ತಮ್ಮಂತಹ ಮಹಾತ್ಮರ ದರ್ಶನ, ಸ್ಪರ್ಶನ, ಕುಶಲಪ್ರಶ್ನೆ, ಪ್ರಣಾಮ, ಪಾದಪೂಜೆ ಮೊದಲಾದವುಗಳ ಸದವಕಾಶ ಹೇಗೆ ತಾನೇ ದೊರೆಯಬಲ್ಲದು ? ॥ ೧೦ ॥ ಕೇವಲ ನೀರು ತೀರ್ಥವೆನಿಸುವುದಿಲ್ಲ, ಕೇವಲ ಮಣ್ಣಿನ ಅಥವಾ ಕಲ್ಲಿನ ವಿಗ್ರಹಗಳು ದೇವತೆಗಳಾಗುವುದಿಲ್ಲ, ಸಂತ-ಸತ್ಪುರುಷರೇ ನಿಜವಾಗಿ ತೀರ್ಥರೂಪರು ಮತ್ತು ದೇವತೆಗಳಾಗಿದ್ದಾರೆ. ಏಕೆಂದರೆ, ತೀರ್ಥಗಳು, ದೇವತೆಗಳು ಬಹಳ ಸಮಯದವರೆಗೆ ಸೇವಿಸಿದಾಗಲೇ ಅವು ಪವಿತ್ರವಾಗಿಸಬಲ್ಲವು. ಆದರೆ ಸತ್ಪುರುಷರು ದರ್ಶನಮಾತ್ರದಿಂದಲೇ ಕೃತಾರ್ಥರಾಗಿಸುತ್ತಾರೆ. ॥ ೧೧ ॥ ಅಗ್ನಿ, ಸೂರ್ಯ, ಚಂದ್ರ, ತಾರೆಗಳು, ಪೃಥಿವಿ, ಜಲ, ಆಕಾಶ, ವಾಯು, ವಾಣಿ ಮತ್ತು ಮನಸ್ಸಿನ ಅಧಿಷ್ಠಾತೃ ದೇವತೆಗಳು - ಇವುಗಳ ಉಪಾಸನೆ ಮಾಡಿದರೂ ಪಾಪವೂ ಪೂರ್ಣವಾಗಿ ನಾಶವಾಗಲಾರದು. ಏಕೆಂದರೆ, ಅವರ ಉಪಾಸನೆಯಿಂದ ಭೇದಬುದ್ಧಿಯು ನಾಶವಾಗದೇ ಇನ್ನೂ ಬೆಳೆಯುತ್ತದೆ. ಆದರೆ ಎರಡು ಗಳಿಗೆಯಾದರೂ ಜ್ಞಾನೀಮಹಾಪುರುಷರ ಸೇವೆ ಮಾಡಿದರೂ ಸಕಲ ಪಾಪಗಳು ಅಳಿದು ಹೋಗುತ್ತವೆ. ಏಕೆಂದರೆ, ಅವರು ಭೇದ-ಬುದ್ಧಿಯ ವಿನಾಶಕರಾಗಿದ್ದಾರೆ. ॥ ೧೨ ॥ ಮಹಾತ್ಮರೇ ಮತ್ತು ಸಭಾಸದರೇ ! ಯಾವ ಮನುಷ್ಯರಿಗೆ ವಾತ, ಪಿತ್ತ, ಕಫ - ಈ ಮೂರು ಧಾತುಗಳಿಂದ ಉಂಟಾದ ಶವದಂತಿರುವ ಶರೀರದಲ್ಲೇ ತಾನೆಂಬ ಅಭಿಮಾನವಿರುತ್ತದೋ, ಹೆಂಡತಿ ಮಕ್ಕಳು ಇವರನ್ನೇ ತನ್ನವರೆಂದು ತಿಳಿಯುತ್ತಾರೋ, ಕಲ್ಲು, ಮಣ್ಣು, ಕಟ್ಟಿಗೆ ಮೊದಲಾದ ಪಾರ್ಥಿವ ವಿಕಾರಗಳನ್ನೇ ಇಷ್ಟದೇವರೆಂದು ತಿಳಿಯುತ್ತಾರೋ ಜ್ಞಾನೀ ಪುರುಷರಲ್ಲದೆ ಕೇವಲ ನೀರನ್ನೇ ತೀರ್ಥವೆಂದು ತಿಳಿಯುತ್ತಾರೋ, ಅಂತಹವರು ಮನುಷ್ಯರಾಗಿದ್ದರೂ ಪಶುಗಳಲ್ಲಿಯೂ ನಿಮ್ನ ಕೋಟಿಯವರೇ ಆಗಿದ್ದಾರೆ. ॥ ೧೩ ॥

ಶ್ರೀಶುಕ ಉವಾಚ

ನಿಶಮ್ಯೇತ್ಥಂ ಭಗವತಃ ಕೃಷ್ಣಸ್ಯಾಕುಂಠಮೇಧಸಃ ।
ವಚೋ ದುರನ್ವಯಂ ವಿಪ್ರಾಸ್ತೂಷ್ಣೀಮಾಸನ್ಭ್ರಮದ್ಧಿಯಃ ॥ ೧೪ ॥

ಚಿರಂ ವಿಮೃಶ್ಯ ಮುನಯ ಈಶ್ವರಸ್ಯೇಶಿತವ್ಯತಾಮ್ ।
ಜನಸಂಗ್ರಹ ಇತ್ಯೂಚುಃ ಸ್ಮಯಂತಸ್ತಂ ಜಗದ್ಗುರುಮ್ ॥ ೧೫ ॥

ಮುನಯ ಊಚುಃ

ಯನ್ಮಾಯಯಾ ತತ್ತ್ವವಿದುತ್ತಮಾ ವಯಂ
ವಿಮೋಹಿತಾ ವಿಶ್ವಸೃಜಾಮಧೀಶ್ವರಾಃ ।
ಯದೀಶಿತವ್ಯಾಯತಿ ಗೂಢ ಈಹಯಾ
ಅಹೋ ವಿಚಿತ್ರಂ ಭಗವದ್ವಿಚೇಷ್ಟಿತಮ್ ॥ ೧೬ ॥

ಅನೀಹ ಏತದ್ಬಹುಧೈಕ ಆತ್ಮನಾ
ಸೃಜತ್ಯವತ್ಯತ್ತಿ ನ ಬಧ್ಯತೇ ಯಥಾ ।
ಭೌಮೈರ್ಹಿ ಭೂಮಿರ್ಬಹುನಾಮರೂಪಿಣೀ
ಅಹೋ ವಿಭೂಮ್ನಶ್ಚರಿತಂ ವಿಡಂಬನಮ್ ॥ ೧೭ ॥

ಅಥಾಪಿ ಕಾಲೇ ಸ್ವಜನಾಭಿಗುಪ್ತಯೇ
ಬಿಭರ್ಷಿ ಸತ್ತ್ವಂ ಖಲನಿಗ್ರಹಾಯ ಚ ।
ಸ್ವಲೀಲಯಾ ವೇದಪಥಂ ಸನಾತನಂ
ವರ್ಣಾಶ್ರಮಾತ್ಮಾ ಪುರುಷಃ ಪರೋ ಭವಾನ್ ॥ ೧೮ ॥

ಬ್ರಹ್ಮ ತೇ ಹೃದಯಂ ಶುಕ್ಲಂ ತಪಃಸ್ವಾಧ್ಯಾಯಸಂಯಮೈಃ ।
ಯತ್ರೋಪಲಬ್ಧಂ ಸದ್ವ್ಯಕ್ತಮವ್ಯಕ್ತಂ ಚ ತತಃ ಪರಮ್ ॥ ೧೯ ॥

ತಸ್ಮಾದ್ ಬ್ರಹ್ಮಕುಲಂ ಬ್ರಹ್ಮನ್ ಶಾಸ್ತ್ರಯೋನೇಸ್ತ್ವಮಾತ್ಮನಃ ।
ಸಭಾಜಯಸಿ ಸದ್ಧಾಮ ತದ್ ಬ್ರಹ್ಮಣ್ಯಾಗ್ರಣೀರ್ಭವಾನ್ ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಅಖಂಡ ಜ್ಞಾನಸಂಪನ್ನನಾಗಿರುವನು. ಅವನ ಈ ಗೂಢವಾದ ಮಾತುಗಳನ್ನು ಕೇಳಿ ಎಲ್ಲ ಋಷಿಮುನಿಗಳು ಸುಮ್ಮನಾಗಿಬಿಟ್ಟರು. ಭಗವಂತನು ಹೀಗೆ ಏಕೆ ಹೇಳುತ್ತಿರುವನೆಂದು ಅರಿಯದೆ ಅವರ ಬುದ್ಧಿಗೆ ಮಂಕುಕವಿದಂತಾಯಿತು. ॥ ೧೪ ॥ ಅವರು ಬಹಳ ಹೊತ್ತು ವಿಚಾರಮಾಡಿದ ಬಳಿಕ ಭಗವಂತನು ಸರ್ವೇಶ್ವರನಾಗಿದ್ದರೂ ಈ ರೀತಿಯ ಸಾಮಾನ್ಯ ಕರ್ಮಪರತಂತ್ರ ಜೀವರಂತೆ ವ್ಯವಹರಿಸುವುದು ಕೇವಲ ಲೋಕಸಂಗ್ರಹಕ್ಕಾಗಿಯೇ ಇದೆ ಎಂದು ನಿಶ್ಚಯಿಸಿ, ಅವರೆಲ್ಲರೂ ಮುಗುಳ್ನಗುತ್ತಾ ಜಗದ್ಗುರು ಭಗವಾನ್ ಶ್ರೀಕೃಷ್ಣನಲ್ಲಿ ಹೇಳತೊಡಗಿದರು. ॥ ೧೫ ॥

**ಮುನಿಗಳು ಹೇಳುತ್ತಾರೆ** – ಭಗವಂತಾ! ನಿನ್ನ ಮಾಯೆಯಿಂದ ಪ್ರಜಾಪತಿಗಳು, ಅಧೀಶ್ವರರಾದ ಮರೀಚಿಯೇ ಮೊದಲಾದವರು ಹಾಗೂ ದೊಡ್ಡ-ದೊಡ್ಡ ತತ್ತ್ವಜ್ಞಾನಿಗಳಾದ ನಾವುಗಳು ಮೋಹಿತರಾಗಿಬಿಟ್ಟಿದ್ದೇವೆ. ನೀನು ಸಾಕ್ಷಾತ್ ಭಗವಂತನೇ ಆಗಿದ್ದರೂ ಮನುಷ್ಯರಂತಹ ಚೇಷ್ಟೆಗಳಿಂದ ನಿನ್ನನ್ನು ಅಡಗಿಸಿಟ್ಟುಕೊಂಡು ಜೀವಿಗಳಂತೆ ಆಚರಿಸುತ್ತಿರುವೆಯಲ್ಲ! ಭಗವಂತಾ! ನಿಜವಾಗಿಯೂ ನಿನ್ನ ಲೀಲೆಯು ವಿಚಿತ್ರವೂ ಆಶ್ಚರ್ಯಮಯವೂ ಆಗಿದೆ. ॥ ೧೬ ॥ ಪೃಥಿವಿಯು ತನ್ನ ವಿಕಾರಗಳಾದ ವೃಕ್ಷ, ಕಲ್ಲು, ಘಟ ಮೊದಲಾದವುಗಳ ಮೂಲಕ ಅನೇಕ ನಾಮ-ರೂಪಗಳನ್ನು ಪಡೆಯುತ್ತದೆ, ವಾಸ್ತವವಾಗಿ ಅದು ಒಂದೇ ಆಗಿದೆ. ಹಾಗೆಯೇ ನೀನು ಏಕನೂ, ಚೇಷ್ಟಾರಹಿತನೂ ಆಗಿದ್ದರೂ ಅನೇಕ ರೂಪಗಳನ್ನು ಧರಿಸುತ್ತೀಯೆ. ನೀನು-ನಿನ್ನಿಂದಲೇ ಈ ಜಗತ್ತಿನ ರಚನೆ, ರಕ್ಷಣೆ ಮತ್ತು ಸಂಹಾರ ಮಾಡುತ್ತಿರುವೆ. ಆದರೆ ಇದೆಲ್ಲವನ್ನು ಮಾಡುತ್ತಿದ್ದರೂ ಈ ಕರ್ಮಗಳಿಂದ ಲಿಪ್ತನಾಗುವುದಿಲ್ಲ. ಸಜಾತೀಯ, ವಿಜಾತೀಯ ಮತ್ತು ಸ್ವಗತಭೇದ ಶೂನ್ಯನೂ, ಏಕರಸನೂ, ಅನಂತನೂ ಆದ ನಿನ್ನ ಈ ವಿಚಿತ್ರ ಚರಿತ್ರವು ಲೀಲೆಯಲ್ಲದೆ ಮತ್ತೇನು? ॥ ೧೭॥ ಭಗವಂತ! ನೀನು ಪ್ರಕೃತಿಗೆ ಅತೀತನಾದ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನೇ ಆಗಿದ್ದರೂ ಆಗಾಗ ಭಕ್ತಜನರನ್ನು ರಕ್ಷಿಸಲು ಹಾಗೂ ದುಷ್ಟರ ದಮನಕ್ಕಾಗಿ ವಿಶುದ್ಧ ಸತ್ತ್ವಮಯ ಶ್ರೀವಿಗ್ರಹವನ್ನು ಪ್ರಕಟಿಸುತ್ತಿರುವೆ. ನಿನ್ನ ಲೀಲೆಗಳ ಮೂಲಕ ಸನಾತನ ವೈದಿಕ ಧರ್ಮವನ್ನು ರಕ್ಷಿಸುತ್ತಿರುವೆ. ಏಕೆಂದರೆ, ಎಲ್ಲ ವರ್ಣ ಮತ್ತು ಆಶ್ರಮಗಳ ರೂಪದಲ್ಲಿ ನೀನೇ ಸ್ವಯಂ ಪ್ರಕಟನಾಗಿರುವೆ. ॥ ೧೮ ॥ ಭಗವಂತ! ವೇದವೇ ನಿನ್ನ ವಿಶುದ್ಧ ಹೃದಯವಾಗಿದೆ. ತಪಸ್ಸು, ಸ್ವಾಧ್ಯಾಯ, ಧಾರಣೆ, ಧ್ಯಾನ ಮತ್ತು ಸಮಾಧಿಯ ಮೂಲಕ ಅದರಲ್ಲೇ ನಿನ್ನ ಸಾಕಾರ-ನಿರಾಕಾರ ಎರಡೂ ರೂಪಗಳ ಅಧಿಷ್ಠಾನ ಸ್ವರೂಪವಾದ ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ॥ ೧೯ ॥ ಪರಮಾತ್ಮ! ಬ್ರಾಹ್ಮಣರೇ ವೇದಗಳ ಆಧಾರಭೂತ ನಿನ್ನ ಸ್ವರೂಪದ ಉಪಲಬ್ಧಿಯ ಸ್ಥಾನರಾಗಿದ್ದಾರೆ. ಇದರಿಂದಲೇ ನೀನು ಬ್ರಾಹ್ಮಣರಿಗೆ ಸಮ್ಮಾನ ಕೊಡುವೆ. ಇದರಿಂದಲೆ ನೀನು ಬ್ರಾಹ್ಮಣ ಭಕ್ತರಲ್ಲಿ ಅಗ್ರಗಣ್ಯನಾಗಿರುವೆ. ॥ ೨೦ ॥

ಅದ್ಯ ನೋ ಜನ್ಮಸಾಫಲ್ಯಂ ವಿದ್ಯಾಯಾಸ್ತಪಸೋ ದೃಶಃ ।
ತ್ವಯಾ ಸಂಗಮ್ಯ ಸದ್ಗತ್ಯಾ ಯದಂತಃ ಶ್ರೇಯಸಾಂ ಪರಃ
॥ ೨೧ ॥

ನಮಸ್ತಸ್ಮೈ ಭಗವತೇ ಕೃಷ್ಣಾಯಾಕುಂಠಮೇಧಸೇ ।
ಸ್ವಯೋಗಮಾಯಯಾಚ್ಛನ್ನಮಹಿಮ್ನೇ ಪರಮಾತ್ಮನೇ
॥ ೨೨ ॥

ನ ಯಂ ವಿದಂತ್ಯಮೀ ಭೂಪಾ ಏಕಾರಾಮಾಶ್ಚ ವೃಷ್ಣಯಃ ।
ಮಾಯಾಜವನಿಕಾಚ್ಛನ್ನಮಾತ್ಮಾನಂ ಕಾಲಮೀಶ್ವರಮ್
॥ ೨೩ ॥

ಯಥಾ ಶಯಾನಃ ಪುರುಷಃ ಆತ್ಮಾನಂ ಗುಣತತ್ತ್ವದೃಕ್ ।
ನಾಮಮಾತ್ರೇಂದ್ರಿಯಾಭಾತಂ ನ ವೇದ ರಹಿತಂ ಪರಮ್
॥ ೨೪ ॥

ಏವಂ ತ್ವಾ ನಾಮಮಾತ್ರೇಷು ವಿಷಯೇಷ್ವಿಂದ್ರಿಯೇಹಯಾ ।
ಮಾಯಯಾ ವಿಭ್ರಮಚ್ಚಿತ್ತೋ ನ ವೇದ ಸ್ಮೃತ್ಯುಪಪ್ಲವಾತ್
॥ ೨೫ ॥

ತಸ್ಯಾದ್ಯ ತೇ ದದೃಶಿಮಾಂಘ್ರಿಮಘೌಘಮರ್ಷ-
ತೀರ್ಥಾಸ್ಪದಂ ಹೃದಿ ಕೃತಂ ಸುವಿಪಕ್ವಯೋಗೈಃ ।
ಉತ್ಸಿಕ್ತಭಕ್ತ್ಯುಪಹತಾಶಯಜೀವಕೋಶಾ
ಆಪುರ್ಭವದ್ಗತಿಮಥೋಽನುಗೃಹಾಣ ಭಕ್ತಾನ್ ॥ ೨೬ ॥

ಶ್ರೀಶುಕ ಉವಾಚ

ಇತ್ಯನುಜ್ಞಾಪ್ಯ ದಾಶಾರ್ಹಂ ಧೃತರಾಷ್ಟ್ರಂ ಯುಧಿಷ್ಠಿರಮ್ ।
ರಾಜರ್ಷೇ ಸ್ವಾಶ್ರಮಾನ್ಗಂತುಂ ಮುನಯೋ ದಧಿರೇ ಮನಃ
॥ ೨೭ ॥

ನೀನು ಸಮಸ್ತವಾದ ಶ್ರೇಯಸ್ಸುಗಳಿಗೂ ಚರಮಸ್ಥಾನನಾಗಿರುವೆ. ಸತ್ಪುರುಷರಿಗೆ ಏಕಮಾತ್ರ ಆಶ್ರಯನಾಗಿರುವೆ. ನಿನ್ನನ್ನು ಸೇರಿ ಇಂದು ನಮ್ಮ ಜನ್ಮ, ವಿದ್ಯೆ, ತಪಸ್ಸು ಮತ್ತು ಜ್ಞಾನ - ಇವೆಲ್ಲವೂ ಸಫಲವಾದುವು. ವಾಸ್ತವವಾಗಿ ಎಲ್ಲದರ ಪರಮ ಫಲವು ನೀನೇ ಆಗಿರುವೆ. ॥ ೨೧ ॥ ಪ್ರಭುವೇ! ನಿನ್ನ ಜ್ಞಾನವು ಅನಂತವಾಗಿದೆ. ನೀನು ಸಾಕ್ಷಾತ್ ಸಚ್ಚಿದಾನಂದ ಸ್ವರೂಪನಾದ ಪರಬ್ರಹ್ಮ ಪರಮಾತ್ಮ ಭಗವಂತನೇ ಆಗಿರುವೆ. ನೀನು ನಿನ್ನ ಅಚಿಂತ್ಯ ಶಕ್ತಿಯಾದ ಯೋಗಮಾಯೆಯ ಮೂಲಕ ನಿನ್ನ ಮಹಿಮೆಯನ್ನು ಅಡಗಿಸಿಕೊಂಡಿರುವೆ. ಅಂತಹ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೨೨ ॥ ಈ ಸಭೆಯಲ್ಲಿ ಕುಳಿತಿರುವ ರಾಜರಾಗಲೀ, ನಿನ್ನ ಒಡನಾಡಿಗಳಾಗಿ ನಿನ್ನೊಡನೆ ಆಹಾರ-ವಿಹಾರ ಮಾಡುವ ಯದುವಂಶೀಯರಾಗಲೀ ನಿನ್ನನ್ನು ವಾಸ್ತವವಾಗಿ ತಿಳಿದವರಲ್ಲ. ಏಕೆಂದರೆ, ನೀನು ಸರ್ವಾಂತರ್ಯಾಮಿಯೂ, ಜಗತ್ತಿಗೆ ನಿಯಾಮಕನೂ, ಆದಿ ಕಾರಣನೂ ಆಗಿದ್ದರೂ ಮಾಯೆಯೆಂಬ ತೆರೆಯಿಂದ ಮುಚ್ಚಲ್ಪಟ್ಟಿರುವೆ. ॥ ೨೩॥ ಕನಸನ್ನು ಕಾಣುತ್ತಿರುವಾಗ ಮನುಷ್ಯನು ಸ್ವಪ್ನದಲ್ಲಿ ಮಿಥ್ಯೆಯಾದ ಪದಾರ್ಥಗಳನ್ನು ಸತ್ಯವೆಂದೇ ತಿಳಿಯುತ್ತಾನೆ. ಹೆಸರಿಗೆ ಮಾತ್ರ ಸತ್ಯವೆಂದು ತೋರುವ ತನ್ನ ಸ್ವಪ್ನ ಶರೀರವನ್ನೇ ನಿಜವೆಂದು ಭಾವಿಸುತ್ತಾನೆ. ಸ್ವಪ್ನವಿರುವತನಕ ಅವನಿಗೆ ಈ ಸ್ವಪ್ನ ಶರೀರವಲ್ಲದೆ ಇನ್ನೊಂದು ಜಾಗ್ರದವಸ್ಥೆಯ ಶರೀರವಿದೆ ಎಂಬುದೂ ತಿಳಿದಿರುವುದಿಲ್ಲ. ॥ ೨೪ ॥ ಹೀಗೆಯೇ ಜಾಗ್ರದವಸ್ಥೆಯಲ್ಲಿಯೂ ಇಂದ್ರಿಯಗಳ ಪ್ರವೃತ್ತಿರೂಪವಾದ ಮಾಯೆಯಿಂದ ಚಿತ್ತವು ವಿಮೋಹಿತವಾಗಿ ಹೆಸರಿಗಷ್ಟೇ ಇರುವ ವಿಷಯಗಳಲ್ಲಿ ಅಲೆಯುತ್ತಿರುತ್ತದೆ. ಆ ಸಮಯದಲ್ಲಿಯೂ ಚಿತ್ತದ ಭ್ರಾಂತಿಯಿಂದ ವಿವೇಕಶಕ್ತಿಯು ಮುಚ್ಚಲ್ಪಟ್ಟಿರುತ್ತದೆ. ಇದರಿಂದ ತಾನು ಈ ಜಗತ್ತು - ಸಂಸಾರದಿಂದ ಅತೀತನಾಗಿರುವವನು ಎಂಬುದೂ ಜೀವಿಗೆ ತಿಳಿದಿರುವುದಿಲ್ಲ. ॥ ೨೫ ॥ ಪ್ರಭೋ! ದೊಡ್ಡ-ದೊಡ್ಡ ಋಷಿ-ಮುನಿಗಳು ಅತ್ಯಂತ ಪರಿಪಕ್ವ ಯೋಗಸಾಧನೆಯ ಮೂಲಕ ಸಮಸ್ತ ಪಾಪರಾಶಿಯನ್ನೂ ನಾಶಮಾಡುವಂತಹ, ಗಂಗೆಗೆ ಆಶ್ರಯಸ್ಥಾನವಾದ ನಿನ್ನ ಚರಣಕಮಲಗಳನ್ನು ಹೃದಯದಲ್ಲಿ ಧರಿಸಿಕೊಂಡಿರುತ್ತಾರೆ. ಇಂದು ನಮಗೆ ಅಂತಹ ಚರಣಕಮಲಗಳ ದರ್ಶನವಾದುದು ನಮ್ಮ ಸೌಭಾಗ್ಯವೇ ಆಗಿದೆ. ಪ್ರಭೋ! ನಾವು ನಿನ್ನ ಭಕ್ತರಾಗಿದ್ದೇವೆ. ನೀನು ನಮ್ಮ ಮೇಲೆ ದಯೆದೋರು. ಏಕೆಂದರೆ, ಯಾರ ಲಿಂಗಶರೀರರೂಪವಾದ ಜೀವಕೋಶವು ನಿನ್ನ ಅತ್ಯುಚ್ಚ ಭಕ್ತಿಯ ಮೂಲಕ ನಾಶವಾಗಿದೆಯೋ ಅವರಿಗೆ ನಿನ್ನ ಪರಮ ಪದದ ಪ್ರಾಪ್ತಿಯಾಗುತ್ತದೆ. ॥ ೨೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ರಾಜರ್ಷಿ ಪರೀಕ್ಷಿತನೇ! ಭಗವಂತನನ್ನು ಈ ಪ್ರಕಾರವಾಗಿ ಸ್ತುತಿಗೈದು, ಅವನಿಂದ, ಧೃತರಾಷ್ಟ್ರನಿಂದ, ಧರ್ಮರಾಜ ಯುಧಿಷ್ಠಿರನಿಂದ ಅನುಮತಿ ಯನ್ನು ಪಡೆದು ಅವರೆಲ್ಲರೂ ತಮ್ಮ-ತಮ್ಮ ಆಶ್ರಮಗಳಿಗೆ ಹೋಗಲು ವಿಚಾರಮಾಡಿದರು. ॥ ೨೭ ॥

ತದ್ವೀಕ್ಷ್ಯ ತಾನುಪವ್ರಜ್ಯ ವಸುದೇವೋ ಮಹಾಯಶಾಃ ।
ಪ್ರಣಮ್ಯ ಚೋಪಸಂಗೃಹ್ಯ ಬಭಾಷೇದಂ ಸುಯಂತ್ರಿತಃ ॥ ೨೮ ॥

ಮಹಾಯಶೋವಂತನಾದ ವಸುದೇವನು ಋಷಿ-ಮುನಿಗಳು ಹೊರಟು ಹೋಗುವ ವಿಚಾರವನ್ನು ತಿಳಿದು ಅವರ ಬಳಿಗೆ ಹೋಗಿ ಅವರ ಕಾಲುಗಳನ್ನು ಹಿಡಿದು ವಂದಿಸಿಕೊಂಡು ವಿನಮ್ರನಾಗಿ ನಿವೇದಿಸಿಕೊಂಡನು. ॥ ೨೮॥

ವಸುದೇವ ಉವಾಚ

ನಮೋ ವಃ ಸರ್ವದೇವೇಭ್ಯ ಋಷಯಃ ಶ್ರೋತುಮರ್ಹಥ ।
ಕರ್ಮಣಾ ಕರ್ಮನಿರ್ಹಾರೋ ಯಥಾ ಸ್ಯಾನ್ನಸ್ತದುಚ್ಯತಾಮ್ ॥ ೨೯ ॥

**ವಸುದೇವನು ಹೇಳಿದನು** – ಋಷಿ ಮುನಿಗಳೇ! ನೀವು ಸಮಸ್ತ ದೇವತಾ ಸ್ವರೂಪರಾಗಿದ್ದೀರಿ. ನಾನು ನಿಮಗೆ ವಂದಿಸುತ್ತಿದ್ದೇನೆ. ತಾವುಗಳು ನನ್ನದೊಂದು ಪ್ರಾರ್ಥನೆಯನ್ನು ಆಲಿಸಬೇಕು. ಯಾವ ಕರ್ಮಗಳ ಅನುಷ್ಠಾನದಿಂದ ಕರ್ಮಗಳು ಮತ್ತು ಕರ್ಮವಾಸನೆಗಳ ಆತ್ಯಂತಿಕ ನಾಶವಾಗಿ ಮೋಕ್ಷವುಂಟಾಗುವುದೋ ಅದನ್ನು ನೀವುಗಳು ನನಗೆ ಉಪದೇಶಿಸಿರಿ. ॥ ೨೯ ॥

ನಾರದ ಉವಾಚ

ನಾತಿಚಿತ್ರಮಿದಂ ವಿಪ್ರಾ ವಸುದೇವೋ ಬುಭುತ್ಸಯಾ ।
ಕೃಷ್ಣಂ ಮತ್ವಾರ್ಭಕಂ ಯನ್ನಃ ಪೃಚ್ಛತಿ ಶ್ರೇಯ ಆತ್ಮನಃ ॥ ೩೦ ॥

ಸನ್ನಿಕರ್ಷೋಽಹಿ ಮರ್ತ್ಯಾನಾಮನಾದರಣಕಾರಣಮ್ ।
ಗಾಂಗಂ ಹಿತ್ವಾಯಥಾನ್ಯಾಂಭಸ್ತತ್ರತ್ಯೋ ಯಾತಿ ಶುದ್ಧಯೇ ॥ ೩೧ ॥

ಯಸ್ಯಾನುಭೂತಿಃ ಕಾಲೇನ ಲಯೋತ್ಪತ್ತ್ಯಾದಿನಾಸ್ಯ ವೈ ।
ಸ್ವತೋಽನ್ಯಸ್ಮಾಚ್ಚ ಗುಣತೋ ನ ಕುತಶ್ಚನ ರಿಷ್ಯತಿ ॥ ೩೨ ॥

**ನಾರದರು ಹೇಳಿದರು** – ಋಷಿವರ್ಯರೇ! ವಸುದೇವನು ಶ್ರೀಕೃಷ್ಣನನ್ನು ತನ್ನ ಮಗನೆಂದು ತಿಳಿದು ಶುದ್ಧಜಿಜ್ಞಾಸೆಯ ಭಾವದಿಂದ ತನ್ನ ಶ್ರೇಯಸ್ಸಿನ ಸಾಧನೆಯನ್ನು ನಮ್ಮ ಬಳಿ ಕೇಳುತ್ತಿರುವನು. ಇದರಲ್ಲಿ ಯಾವುದೇ ಆಶ್ಚರ್ಯವಿಲ್ಲ. ॥ ೩೦ ॥ ಪ್ರಪಂಚದಲ್ಲಿ ಬಹಳ ಹತ್ತಿರವಿರುವುದು ಅನಾದರಕ್ಕೆ ಕಾರಣವಾಗುತ್ತದೆ. ಗಂಗಾ ತೀರದಲ್ಲಿರುವವರು ಗಂಗೆಯನ್ನು ಬಿಟ್ಟು ತಮ್ಮ ಪಾಪಶುದ್ಧಿಗಾಗಿ ಬೇರೆ ತೀರ್ಥಕ್ಕೆ ಹೋಗುತ್ತಿರುವುದನ್ನು ನೋಡುತ್ತೇವಲ್ಲ! ॥ ೩೧ ॥ ಶ್ರೀಕೃಷ್ಣನ ಅನುಭೂತಿಯು ಕಾಲಾನುಕ್ರಮವಾಗಿ ನಡೆಯುವ ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಳಯಗಳಿಂದ ಅಳಿದುಹೋಗುವಂತಹುದಲ್ಲ. ಅದು ಸ್ವತಃ ಯಾವುದೇ ಬೇರೆ ನಿಮಿತ್ತದಿಂದ, ಗುಣಗಳಿಂದ ಮತ್ತು ಯಾವುದರಿಂದಲೂ ಕ್ಷೀಣಿಸುವಂತಹುದಲ್ಲ. ॥ ೩೨ ॥

ತಂ ಕ್ಲೇಶಕರ್ಮಪರಿಪಾಕಗುಣಪ್ರವಾಹೈ-
ರವ್ಯಾಹತಾನುಭವಮೀಶ್ವರಮದ್ವಿತೀಯಮ್ ।
ಪ್ರಾಣಾದಿಭಿಃ ಸ್ವವಿಭವೈರುಪಗೂಢಮನ್ಯೋ
ಮನ್ಯೇತ ಸೂರ್ಯಮಿವ ಮೇಘಹಿಮೋಪರಾಗೈಃ ॥ ೩೩ ॥

ಅವನ ಜ್ಞಾನಮಯ ಸ್ವರೂಪವು ಅವಿದ್ಯೆಯಿಂದಾಗಲೀ, ರಾಗ-ದ್ವೇಷಾದಿ ಕ್ಲೇಶಗಳಿಂದಾಗಲೀ, ಪುಣ್ಯ-ಪಾಪಮಯ ಕರ್ಮಗಳಿಂದಾಗಲೀ, ಸುಖ-ದುಃಖಾದಿ ಕರ್ಮಫಲಗಳಿಂದಾಗಲೀ, ಸತ್ತ್ವಾದಿಗುಣ ಪ್ರವಾಹದಿಂದಾಗಲೀ ನಾಶಹೊಂದುವುದಿಲ್ಲ. ಅವನು ಸಾಕ್ಷಾತ್ ಅದ್ವಿತೀಯ ಪರಮಾತ್ಮನಾಗಿದ್ದಾನೆ. ಅವನು ತನ್ನನ್ನು ತನ್ನದೇ ಶಕ್ತಿಗಳಿಂದ ಪ್ರಾಣಾದಿಗಳಿಂದ ಮುಚ್ಚಿಕೊಳ್ಳುವನು; ಆಗ ಮೂರ್ಖಜನರು – ಮೋಡ, ಮಂಜು ಅಥವಾ ಗ್ರಹಣದಿಂದ ಮರೆಯಾದ ಸೂರ್ಯನು ಮುಚ್ಚಿಹೋಗಿರುವನು ಎಂದು ತಿಳಿಯುವಂತೆಯೇ ಶ್ರೀಕೃಷ್ಣನನ್ನು ತಿಳಿಯುತ್ತಾರೆ. ॥ ೩೩ ॥

ಅಥೋಚುರ್ಮುನಯೋ ರಾಜನ್ನಾ-
ಭಾಷ್ಯಾನಕದುಂದುಭಿಮ್ ।
ಸರ್ವೇಷಾಂ ಶೃಣ್ವತಾಂ ರಾಜ್ಞಾಂ
ತಥೈವಾಚ್ಯುತರಾಮಯೋಃ ॥ ೩೪ ॥

ಪರೀಕ್ಷಿತನೇ! ಅನಂತರ ಋಷಿ-ಮುನಿಗಳು ಭಗವಾನ್ ಶ್ರೀಕೃಷ್ಣ-ಬಲರಾಮರು, ಯುಧಿಷ್ಠಿರನೇ ಮೊದಲಾದ ರಾಜರ ಸಮ್ಮುಖದಲ್ಲಿ ವಸುದೇವನನ್ನು ಸಂಬೋಧಿಸುತ್ತಾ ಹೇಳಿದರು.॥ ೩೪ ॥

ಕರ್ಮಣಾ ಕರ್ಮನಿರ್ಹಾರ ಏಷ ಸಾಧು ನಿರೂಪಿತಃ ।
ಯಚ್ಛ್ರದ್ಧಯಾ ಯಜೇದ್ವಿಷ್ಣುಂ ಸರ್ವಯಜ್ಞೇಶ್ವರಂ ಮಖೈಃ ॥ ೩೫ ॥

ಚಿತ್ತಸ್ಯೋಪಶಮೋಽಯಂ ವೈ ಕವಿಭಿಃ ಶಾಸ್ತ್ರಚಕ್ಷುಷಾ ।
ದರ್ಶಿತಃ ಸುಗಮೋ ಯೋಗೋ ಧರ್ಮಶ್ಚಾತ್ಮಮುದಾವಹಃ ॥ ೩೬ ॥

ವಸುದೇವನೇ! ಯಜ್ಞಾದಿಗಳ ಮೂಲಕ ಸಮಸ್ತ ಯಜ್ಞಗಳ ಅಧಿಪತಿಯಾದ ಭಗವಾನ್ ವಿಷ್ಣುವನ್ನು ಶ್ರದ್ಧಾಪೂರ್ವಕ ಆರಾಧಿಸುವುದೇ ಕರ್ಮಗಳ ಮೂಲಕ ಕರ್ಮವಾಸನೆ ಮತ್ತು ಕರ್ಮಫಲಗಳನ್ನು ಆತ್ಯಂತಿಕವಾಗಿ ನಾಶಮಾಡುವ ಒಳ್ಳೆಯ ಉಪಾಯವಾಗಿದೆ. ॥ ೩೫ ॥ ತ್ರಿಕಾಲದರ್ಶಿಗಳಾದ ಜ್ಞಾನಿಗಳು ಶಾಸ್ತ್ರದೃಷ್ಟಿಯಿಂದ ಚಿತ್ತದ ಶಾಂತಿಗೆ ಇದೇ ಉಪಾಯವೆಂದೂ, ಸುಲಭವಾದ ಮೋಕ್ಷಸಾಧನವೆಂದೂ, ಚಿತ್ತದಲ್ಲಿ ಆನಂದೋಲ್ಲಾಸವನ್ನು ಉಂಟುಮಾಡುವ ಧರ್ಮವೆಂದೂ ತಿಳಿಸಿರುವರು. ॥ ೩೬ ॥

ಅಯಂ ಸ್ವಸ್ತ್ಯಯನಃ ಪಂಥಾ ದ್ವಿಜಾತೇರ್ಗೃಹಮೇಧಿನಃ ।
ಯಚ್ಛ್ರದ್ಧಯಾಽಽಪ್ತವಿತ್ತೇನ ಶುಕ್ಲೇನೇಜ್ಯೇತ ಪೂರುಷಃ
॥ ೩೭ ॥

ವಿತ್ತೈಷಣಾಂ ಯಜ್ಞದಾನೈರ್ಗೃಹೈರ್ದಾರಸುತೈಷಣಾಮ್ ।
ಆತ್ಮಲೋಕೈಷಣಾಂ ದೇವ ಕಾಲೇನ ವಿಸೃಜೇದ್ಬುಧಃ ।
ಗ್ರಾಮೇ ತ್ಯಕ್ತೈಷಣಾಃ ಸರ್ವೇ ಯಯುರ್ಧೀರಾಸ್ತಪೋವನಮ್
॥ ೩೮ ॥

ಋಣೈಸ್ತ್ರಿಭಿರ್ದ್ವಿಜೋ ಜಾತೋ ದೇವರ್ಷಿಪಿತೄಣಾಂ ಪ್ರಭೋ ।
ಯಜ್ಞಾಧ್ಯಯನಪುತ್ರೈಸ್ತಾನ್ಯನಿಸ್ತೀರ್ಯ ತ್ಯಜನ್ಪತೇತ್
॥ ೩೯ ॥

ತ್ವಂ ತ್ವದ್ಯ ಮುಕ್ತೋ ದ್ವಾಭ್ಯಾಂ ವೈ ಋಷಿಪಿತ್ರೋರ್ಮಹಾಮತೇ ।
ಯಜ್ಞೈರ್ದೇವರ್ಣಮುನ್ಮುಚ್ಯ ನಿರ್ಋಣೋಽಶರಣೋ ಭವ
॥ ೪೦ ॥

ವಸುದೇವ ಭವಾನ್ ನೂನಂ ಭಕ್ತ್ಯಾ ಪರಮಯಾ ಹರಿಮ್ ।
ಜಗತಾಮೀಶ್ವರಂ ಪ್ರಾರ್ಚಃ ಸ ಯದ್ವಾಂ ಪುತ್ರತಾಂ ಗತಃ
॥ ೪೧ ॥

ಶ್ರೀಶುಕ ಉವಾಚ

ಇತಿ ತದ್ವಚನಂ ಶ್ರುತ್ವಾ ವಸುದೇವೋ ಮಹಾಮನಾಃ ।
ತಾನೃಷೀನೃತ್ವಿಜೋ ವವ್ರೇ ಮೂರ್ಧ್ನಾಽಽನಮ್ಯ ಪ್ರಸಾದ್ಯ ಚ
॥ ೪೨ ॥

ತ ಏನಮೃಷಯೋ ರಾಜನ್ ವೃತಾ ಧರ್ಮೇಣ ಧಾರ್ಮಿಕಮ್ ।
ತಸ್ಮಿನ್ನಯಾಜಯನ್ ಕ್ಷೇತ್ರೇ ಮಖೈರುತ್ತಮಕಲ್ಪಕೈಃ
॥ ೪೩ ॥

ತದ್ದೀಕ್ಷಾಯಾಂ ಪ್ರವೃತ್ತಾಯಾಂ ವೃಷ್ಣಯಃ ಪುಷ್ಕರಸ್ರಜಃ ।
ಸ್ನಾತಾಃ ಸುವಾಸಸೋ ರಾಜನ್ ರಾಜಾನಃ ಸುಷ್ಠ್ವಲಂಕೃತಾಃ
॥ ೪೪ ॥

ತನ್ಮಹಿಷ್ಯಶ್ಚ ಮುದಿತಾ ನಿಷ್ಕಕಂಠ್ಯಃ ಸುವಾಸಸಃ ।
ದೀಕ್ಷಾಶಾಲಾಮುಪಾಜಗ್ಮುರಾಲಿಪ್ತಾ ವಸ್ತುಪಾಣಯಃ
॥ ೪೫ ॥

ನೇದುರ್ಮೃದಂಗಪಟಹಶಂಖಭೇರ್ಯಾನಕಾದಯಃ ।
ನನೃತುರ್ನಟನರ್ತಕ್ಯಸ್ತುಷ್ಟುವುಃ ಸೂತಮಾಗಧಾಃ ।
ಜಗುಃ ಸುಕಂಠ್ಯೋ ಗಂಧರ್ವ್ಯಃ ಸಂಗೀತಂ ಸಹಭರ್ತೃಕಾಃ
॥ ೪೬ ॥

ತನ್ನ ನ್ಯಾಯೋಪಾರ್ಜಿತ ಧನದಿಂದ ಶ್ರದ್ಧಾಪೂರ್ವಕವಾಗಿ ಭಗವಾನ್ ಪುರುಷೋತ್ತಮನನ್ನು ಆರಾಧಿಸುವುದೇ ದ್ವಿಜರಾದ ಗೃಹಸ್ಥರಿಗೆ ಪರಮ ಶ್ರೇಯಸ್ಸಿನ ಮಾರ್ಗವಾಗಿದೆ. ॥ ೩೭ ॥ ವಸುದೇವನೇ! ವಿದ್ವಾಂಸನಾದವನು ಯಜ್ಞ, ದಾನಾದಿಗಳಿಂದ ಧನದ ಆಸೆಯನ್ನೂ, ಗೃಹಸ್ಥೋಚಿತ ಭೋಗಗಳಿಂದ ಪತ್ನೀ-ಪುತ್ರರ ಇಚ್ಛೆಯನ್ನೂ, ಕಾಲಾನುಕ್ರಮವಾಗಿ ಸ್ವರ್ಗಾದಿಭೋಗಗಳು ನಾಶವಾಗುವವು ಎಂಬ ಅರಿವಿನಿಂದ ಲೋಕೈಷಣವನ್ನು ತ್ಯಾಗ ಮಾಡಬೇಕು. ಹೀಗೆ ಈಷಣ ತ್ರಯಗಳನ್ನು ತ್ಯಾಗಮಾಡಿದ ವಿಚಾರವಂತ ಮನುಷ್ಯನು ಗ್ರಾಮವನ್ನು ಬಿಟ್ಟು ಅರಣ್ಯದ ದಾರಿಯನ್ನು ಹಿಡಿಯುತ್ತಾನೆ. ॥ ೩೮ ॥ ಸಮರ್ಥನಾದ ವಸುದೇವನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ - ಇವರು ದೇವ-ಋಷಿ-ಪಿತೃ ಎಂಬ ಮೂರು ಋಣವನ್ನು ಪಡೆದುಕೊಂಡೇ ಹುಟ್ಟುತ್ತಾರೆ. ಯಜ್ಞ, ಅಧ್ಯಯನ, ಸಂತಾನೋತ್ಪತ್ತಿ ಇವುಗಳಿಂದ ಈ ಮೂರು ಋಣದಿಂದ ಬಿಡುಗಡೆ ಹೊಂದುತ್ತಾನೆ. ಆ ಋಣವನ್ನು ತೀರಿಸದೆಯೇ ಸಂಸಾರವನ್ನು ತ್ಯಾಗ ಮಾಡುವವರಿಗೆ ಅಧಃಪತನವಾಗುತ್ತದೆ. ॥ ೩೯ ॥ ಮಹಾಮತಿಯಾದ ವಸುದೇವ! ನೀನೀಗ ಋಷಿ ಮತ್ತು ಪಿತೃಗಳ ಋಣಗಳಿಂದ ಮುಕ್ತನಾಗಿರುವೆ. ಇನ್ನು ಯಜ್ಞಗಳ ಮೂಲಕ ದೇವತೆಗಳ ಋಣವನ್ನು ತೀರಿಸಿಬಿಡು. ಹೀಗೆ ಎಲ್ಲ ಋಣಗಳಿಂದ ಬಿಡುಗಡೆ ಹೊಂದಿ ಗೃಹತ್ಯಾಗಮಾಡಿ ಭಗವಂತನಿಗೆ ಶರಣಾಗು. ॥ ೪೦ ॥ ವಸುದೇವನೇ! ನೀನು ಅವಶ್ಯವಾಗಿ ಪರಮಭಕ್ತಿಯಿಂದ ಜಗದೀಶ್ವರನಾದ ಶ್ರೀಹರಿಯನ್ನು ಉಪಾಸನೆ ಮಾಡಿರುವೆ. ಅದರಿಂದಲೇ ಜಗದೊಡೆಯರಾದ ಇಬ್ಬರು ಪುತ್ರರನ್ನು ಪಡೆದಿರುವೆ. ॥ ೪೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಮನನಶೀಲನಾದ ವಸುದೇವನು ಋಷಿಗಳ ಈ ಮಾತನ್ನು ಕೇಳಿ, ಅವರ ಚರಣಗಳಲ್ಲಿ ಶಿರಸ್ಸನ್ನಿಟ್ಟು ಪ್ರಣಾಮ ಮಾಡಿ ಅವರನ್ನು ಪ್ರಸನ್ನಗೊಳಿಸಿ, ಯಜ್ಞಕ್ಕಾಗಿ ಅವರನ್ನು ಋತ್ವಿಜರಾಗಿ ವರಣಮಾಡಿಕೊಂಡನು. ॥ ೪೨ ॥ ಪರೀಕ್ಷಿತನೇ! ಹೀಗೆ ವಸುದೇವನಿಂದ ಧರ್ಮಪೂರ್ವಕವಾಗಿ ವರಣಮಾಡಲ್ಪಟ್ಟ ಋಷಿಮುನಿಗಳು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಪರಮಧಾರ್ಮಿಕನಾದ ವಸುದೇವನಿಂದ ಉತ್ತಮೋತ್ತಮ ಸಾಮಗ್ರಿಗಳಿಂದ ಕೂಡಿದ ಹಲವಾರು ಯಜ್ಞಗಳನ್ನು ಮಾಡಿಸಿದರು. ॥ ೪೩ ॥ ಪರೀಕ್ಷಿತ! ವಸುದೇವನು ಯಜ್ಞದೀಕ್ಷಿತನಾದಾಗ ಯಾದವರು ಸ್ನಾನಾದಿಗಳನ್ನು ಮಾಡಿ ಸುಂದರ ವಸ್ತ್ರಾಭೂಷಣಗಳನ್ನು ಕಮಲಪುಷ್ಪಗಳ ಮಾಲೆಗಳನ್ನು ಧರಿಸಿದರು. ಸಮಸ್ತ ರಾಜರೂ ವಸ್ತ್ರಾಭರಣಗಳಿಂದ ಸಜ್ಜಾದರು. ॥ ೪೪ ॥ ವಸುದೇವನ ಪತ್ನಿಯರೂ ಸುಂದರವಸ್ತ್ರ, ಅಂಗರಾಗ, ಸ್ವರ್ಣಹಾರಗಳಿಂದ ಅಲಂಕರಿಸಿಕೊಂಡು, ಪರಮಾನಂದ ಭರಿತರಾಗಿ ಕೈಗಳಲ್ಲಿ ಮಂಗಳ ದ್ರವ್ಯಗಳನ್ನು ಹಿಡಿದುಕೊಂಡು ಯಜ್ಞಶಾಲೆಯನ್ನು ಪ್ರವೇಶಿಸಿದರು. ॥ ೪೫ ॥ ಆ ಸಮಯದಲ್ಲಿ ಮೃದಂಗ, ಪಟಹ, ಶಂಖ, ಭೇರಿ, ನಗಾರಿಗಳು ಮುಂತಾದ ಮಂಗಳ ವಾದ್ಯಗಳು ಮೊಳಗುತ್ತಿದ್ದವು. ಸೂತ-ಮಾಗಧರೂ ಸ್ತುತಿಸತೊಡಗಿದರು. ಗಂಧರ್ವಸ್ತ್ರೀಯರು ತಮ್ಮ ಗಂಡಂದಿರೊಡನೆ ಸುಶ್ರಾವ್ಯವಾಗಿ ಹಾಡತೊಡಗಿದರು. ॥ ೪೬ ॥

ತಮಭ್ಯಷಿಂಚನ್ ವಿಧಿವದಕ್ತಮಭ್ಯಕ್ತಮೃತ್ವಿಜಃ ।
ಪತ್ನೀಭಿರಷ್ಟಾದಶಭಿಃ ಸೋಮರಾಜಮಿವೋಡುಭಿಃ
॥ ೪೭ ॥

ತಾಭಿರ್ದುಕೂಲವಲಯೈರ್ಹಾರನೂಪುರಕುಂಡಲೈಃ ।
ಸ್ವಲಂಕೃತಾಭಿರ್ವಿಬಭೌ ದೀಕ್ಷಿತೋಽಜಿನಸಂವೃತಃ
॥ ೪೮ ॥

ತಸ್ಯರ್ತ್ವಿಜೋ ಮಹಾರಾಜ ರತ್ನಕೌಶೇಯವಾಸಸಃ ।
ಸಸದಸ್ಯಾ ವಿರೇಜುಸ್ತೇ ಯಥಾ ವೃತ್ರಹಣೋಽಧ್ವರೇ
॥ ೪೯ ॥

ತದಾ ರಾಮಶ್ಚ ಕೃಷ್ಣಶ್ಚ ಸ್ವೈಃ ಸ್ವೈರ್ಬಂಧುಭಿರನ್ವಿತೌ ।
ರೇಜತುಃ ಸ್ವಸುತೈರ್ದಾರೈರ್ಜೀವೇಶೌ ಸ್ವವಿಭೂತಿಭಿಃ
॥ ೫೦ ॥

ಈಜೇಽನುಯಜ್ಞಂ ವಿಧಿನಾ ಅಗ್ನಿಹೋತ್ರಾದಿಲಕ್ಷಣೈಃ ।
ಪ್ರಾಕೃತೈರ್ವೈಕೃತೈರ್ಯಜ್ಞೈರ್ದ್ರವ್ಯಜ್ಞಾನಕ್ರಿಯೇಶ್ವರಮ್
॥ ೫೧ ॥

ಅಥರ್ತ್ವಿಗ್ಭ್ಯೋಽದದಾತ್ಕಾಲೇ ಯಥಾಮ್ನಾತಂ ಸ ದಕ್ಷಿಣಾಃ ।
ಸ್ವಲಂಕೃತೇಭ್ಯೋಽಲಂಕೃತ್ಯ ಗೋಭೂಕನ್ಯಾ ಮಹಾಧನಾಃ
॥ ೫೨ ॥

ಪತ್ನೀಸಂಯಾಜಾವಭೃಥ್ಯೈಶ್ಚರಿತ್ವಾ ತೇ ಮಹರ್ಷಯಃ ।
ಸಸ್ನೂ ರಾಮಹ್ರದೇ ವಿಪ್ರಾ ಯಜಮಾನಪುರಸ್ಸರಾಃ
॥ ೫೩ ॥

ಸ್ನಾತೋಽಲಂಕಾರವಾಸಾಂಸಿ ವಂದಿಭ್ಯೋಽದಾತ್ತಥಾ ಸ್ತ್ರಿಯಃ ।
ತತಃ ಸ್ವಲಂಕೃತೋ ವರ್ಣಾನಾಶ್ವಭ್ಯೋಽನ್ನೇನ ಪೂಜಯತ್
॥ ೫೪ ॥

ಬಂಧೂನ್ ಸದಾರಾನ್ ಸಸುತಾನ್ ಪಾರಿಬರ್ಹೇಣ ಭೂಯಸಾ ।
ವಿದರ್ಭಕೋಸಲಕುರೂನ್ ಕಾಶಿಕೇಕಯಸೃಂಜಯಾನ್
॥ ೫೫ ॥

ಸದಸ್ಯರ್ತ್ವಿಕ್ ಸುರಗಣಾನ್ ನೃಭೂತಪಿತೃಚಾರಣಾನ್ ।
ಶ್ರೀನಿಕೇತಮನುಜ್ಞಾಪ್ಯ ಶಂಸಂತಃ ಪ್ರಯಯುಃ ಕ್ರತುಮ್
॥ ೫೬ ॥

ವಸುದೇವನು ಮೊದಲಿಗೆ ಕಣ್ಣುಗಳಿಗೆ ಕಾಡಿಗೆ ಹಚ್ಚಿಕೊಂಡು, ಮೈಗೆ ಬೆಣ್ಣೆಯನ್ನು ಲೇಪಿಸಿಕೊಂಡನು. ದೇವಕಿಯೇ ಮೊದಲಾದ ಆವನ ಹದಿನೆಂಟು ಮಂದಿ ಪತ್ನಿಯರೊಂದಿಗೆ ಹಿಂದೆ ನಕ್ಷತ್ರಗಳೊಂದಿಗೆ ಚಂದ್ರನ ಅಭಿಷೇಕವಾದಂತೆ ಋತ್ವಿಜರು ವಸುದೇವನಿಗೆ ಮಹಾಭಿಷೇಕ ಮಾಡಿದರು. ॥ ೪೭ ॥ ಆಗ ಯಜ್ಞದೀಕ್ಷಿತನಾದ್ದರಿಂದ ವಸುದೇವನು ಮೃಗಚರ್ಮವನ್ನು ಹೊದ್ದುಕೊಂಡಿದ್ದನು. ಆವನ ಪತ್ನಿಯರು ಸುಂದರವಾದ ಸೀರೆಗಳಿಂದಲೂ, ಚಿನ್ನದ ಬಳೆ, ಹಾರಗಳಿಂದಲೂ, ಕಾಲಂದುಗೆಗಳಿಂದಲೂ, ಹೊಳೆಯುತ್ತಿದ್ದ ಕರ್ಣಾಭರಣಗಳಿಂದಲೂ ಅಲಂಕರಿಸಿಕೊಂಡಿದ್ದರು. ಪತ್ನಿಯರೊಡನೆ ವಸುದೇವನು ಬಹಳವಾಗಿ ಸುಶೋಭಿತನಾಗಿದ್ದನು. ॥ ೪೮ ॥ ವಸುದೇವನ ಋತ್ವಿಜರೂ, ಸದಸ್ಯರೂ ಹಿಂದೆ ಇಂದ್ರನ ಯಜ್ಞದಲ್ಲಿ ಶೋಭಿಸುತ್ತಿದ್ದ ಋತ್ವಿಜರಂತೆಯೇ ರೇಷ್ಮೆಯ ವಸ್ತ್ರಗಳಿಂದ, ರತ್ನಜಡಿತ ಆಭರಣಗಳಿಂದ ಸಮಲಂಕೃತರಾಗಿ ಶೋಭಿಸುತ್ತಿದ್ದರು. ॥ ೪೯ ॥ ಸಮಸ್ತ ಜೀವಕೋಟಿಗೂ ಪ್ರಭುಗಳಾದ ಬಲರಾಮ-ಶ್ರೀಕೃಷ್ಣರು ತಮ್ಮ-ತಮ್ಮ ಬಂಧುಗಳಿಂದಲೂ, ಪತ್ನೀ-ಪುತ್ರರೊಂದಿಗೂ ಪರಿವೃತರಾಗಿ ತಮ್ಮದೇ ಆದ ವೈಭವದಿಂದ ರಾರಾಜಿಸಿದರು. ॥ ೫೦ ॥

ವಸುದೇವನು ಪ್ರತಿಯೊಂದು ಯಜ್ಞದಲ್ಲಿಯೂ ಗಾರ್ಹಪತ್ಯವೇ ಮೊದಲಾದ ಅಗ್ನಿತ್ರಯಗಳ ಉಪಾಸನೆಯೇ ಮುಖ್ಯಲಕ್ಷ್ಯವಾಗಿರುವ ಅಗ್ನಿಷ್ಟೋಮ, ದರ್ಶ, ಪೂರ್ಣಮಾಸ ಮುಂತಾದ ಪ್ರಕೃತಿಯಾಗಗಳಿಂದಲೂ, ಸೂರ್ಯಸತ್ರವೇ ಮೊದಲಾದ ವಿಕೃತಿಯಾಗಗಳಿಂದಲೂ, ಅಗ್ನಿಹೋತ್ರಾದಿ ಇತರ ಯಜ್ಞಗಳ ಮೂಲಕ ದ್ರವ್ಯ, ಜ್ಞಾನ, ಕ್ರಿಯೆ ಇವುಗಳಿಗೆ ಈಶ್ವರನಾದ ಯಜ್ಞಪುರುಷ ವಿಷ್ಣುವನ್ನು ಆರಾಧಿಸಿದನು. ॥ ೫೧ ॥ ಅನಂತರ ವಸುದೇವನು ಸಮುಚಿತ ಕಾಲದಲ್ಲಿ ಋತ್ವಿಜರನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ ಶಾಸ್ತ್ರಾನುಸಾರವಾಗಿ ಅವರಿಗೆ ಹೇರಳವಾದ ದಕ್ಷಿಣೆಯೊಂದಿಗೆ ಸಾಲಂಕೃತ ಗೋವುಗಳನ್ನು, ಭೂಮಿಯನ್ನು ಸುಂದರ ಕನ್ನೆಯರನ್ನು ದಾನಮಾಡಿದನು. ॥ ೫೨ ॥ ಬಳಿಕ ಮಹರ್ಷಿಗಳು ಪತ್ನೀಸಂಯಾಜ ಮತ್ತು ಅವಭೃಥ್ಯಗಳೆಂಬ ಯಜ್ಞಾಂಗಕರ್ಮಗಳನ್ನು ವಸುದೇವನಿಂದಲೂ ಪತ್ನಿಯರಿಂದಲೂ ಮಾಡಿಸಿ, ಆತನನ್ನು ಮುಂದೆ ಮಾಡಿಕೊಂಡು ಪರಶುರಾಮನು ನಿರ್ಮಿಸಿದ ಸಮಂತಪಂಚಕ ಸರೋವರದಲ್ಲಿ ಅವಭೃತಸ್ನಾನ ಮಾಡಿಸಿದರು. ॥ ೫೩ ॥ ಸ್ನಾನಮಾಡಿದನಂತರ ವಸುದೇವನು ಮತ್ತು ಆತನ ಪತ್ನಿಯರು ತಾವು ಉಟ್ಟಿದ್ದ ವಸ್ತ್ರಾಭರಣಗಳನ್ನು ವಂದಿಮಾಗಧರಿಗೆ ಕೊಟ್ಟುಬಿಟ್ಟರು. ಬಳಿಕ ವಸುದೇವನು ನೂತನ ವಸ್ತ್ರಾಭರಣಗಳಿಂದ ಸಮಲಂಕೃತನಾಗಿ ಬ್ರಾಹ್ಮಣರಿಂದ ಹಿಡಿದು ನಾಯಿಯವರೆಗಿನ ಸಮಸ್ತ ಪ್ರಾಣಿಗಳಿಗೂ ಮೃಷ್ಟಾನ್ನ ಭೋಜನ ಮಾಡಿಸಿದನು. ॥ ೫೪ ॥ ಮತ್ತೆ ವಸುದೇವನು ತನ್ನ ಬಂಧುಬಾಂಧವರಿಗೆ, ಅವರ ಪತ್ನೀ-ಪುತ್ರರಿಗೆ ಹಾಗೂ ವಿದರ್ಭ, ಕೋಸಲ, ಕುರು, ಕಾಶಿ, ಕೇಕಯ, ಸೃಂಜಯ ಮೊದಲಾದ ರಾಜರುಗಳಿಗೆ, ಸದಸ್ಯರಿಗೆ, ಋತ್ವಿಜರಿಗೆ, ದೇವತೆಗಳಿಗೆ, ಮನುಷ್ಯರಿಗೆ, ಭೂತಗಳಿಗೆ, ಪಿತೃಗಳಿಗೆ, ಚಾರಣರಿಗೆ ಹಲವಾರು ವಿಧದ ಪಾರಿತೋಷಕಗಳನ್ನು ಕೊಟ್ಟು ಸನ್ಮಾನಿಸಿದನು. ಅವರೆಲ್ಲರೂ ಶ್ರೀನಿಕೇತನನಾದ ಶ್ರೀಕೃಷ್ಣನ ಅನುಮತಿಯನ್ನು ಪಡೆದು ಯಜ್ಞವನ್ನು ಪ್ರಶಂಸಿಸುತ್ತಾ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ॥ ೫೫-೫೬ ॥

ಧೃತರಾಷ್ಟ್ರೋಽನುಜಃ ಪಾರ್ಥಾ ಭೀಷ್ಮೋ ದ್ರೋಣಃ ಪೃಥಾ ಯಮೌ ।
ನಾರದೋ ಭಗವಾನ್ ವ್ಯಾಸಃಸುಹೃತ್ಸಂಬಂಧಿಬಾಂಧವಾಃ
॥ ೫೭ ॥

ಬಂಧೂನ್ ಪರಿಷ್ವಜ್ಯ ಯದೂನ್ ಸೌಹೃದಾತ್ ಕ್ಲಿನ್ನಚೇತಸಃ ।
ಯಯುರ್ವಿರಹಕೃಚ್ಛ್ರೇಣ ಸ್ವದೇಶಾಂಶ್ಚಾಪರೇ ಜನಾಃ
॥ ೫೮ ॥

ನಂದಸ್ತು ಸಹ ಗೋಪಾಲೈರ್ಬೃಹತ್ಯಾ ಪೂಜಯಾರ್ಚಿತಃ ।
ಕೃಷ್ಣರಾಮೋಗ್ರಸೇನಾದ್ಯೈರ್ನ್ಯವಾತ್ಸೀದ್ಬಂಧುವತ್ಸಲಃ
॥ ೫೯ ॥

ವಸುದೇವೋಽಂಜಸೋತ್ತೀರ್ಯ ಮನೋರಥಮಹಾರ್ಣವಮ್ ।
ಸುಹೃದ್ವೃತಃ ಪ್ರೀತಮನಾ ನಂದಮಾಹ ಕರೇ ಸ್ಪೃಶನ್
॥ ೬೦ ॥

ವಸುದೇವ ಉವಾಚ

ಭ್ರಾತರೀಶಕೃತಃ ಪಾಶೋ ನೃಣಾಂ ಯಃ ಸ್ನೇಹಸಂಜ್ಞಿತಃ ।
ತಂ ದುಸ್ತ್ಯಜಮಹಂ ಮನ್ಯೇ ಶೂರಾಣಾಮಪಿ ಯೋಗಿನಾಮ್
॥ ೬೧ ॥

ಅಸ್ಮಾಸ್ವಪ್ರತಿಕಲ್ಪೇಯಂ ಯತ್ಕೃತಾಜ್ಞೇಷು ಸತ್ತಮೈಃ ।
ಮೈತ್ರ್ಯರ್ಪಿತಾಫಲಾ ವಾಪಿ ನ ನಿವರ್ತೇತ ಕರ್ಹಿಚಿತ್
॥ ೬೨ ॥

ಪ್ರಾಗಕಲ್ಪಾಚ್ಚ ಕುಶಲಂ ಭ್ರಾತರ್ವೋ ನಾಚರಾಮ ಹಿ ।
ಅಧುನಾ ಶ್ರೀಮದಾಂಧಾಕ್ಷಾ ನ ಪಶ್ಯಾಮಃ ಪುರಃ ಸತಃ
॥ ೬೩ ॥

ಮಾ ರಾಜ್ಯಶ್ರೀರಭೂತ್ ಪುಂಸಃ ಶ್ರೇಯಸ್ಕಾಮಸ್ಯ ಮಾನದ ।
ಸ್ವಜನಾನುತ ಬಂಧೂನ್ ವಾ ನ ಪಶ್ಯತಿ ಯಯಾಂಧದೃಕ್
॥ ೬೪ ॥

ಶ್ರೀಶುಕ ಉವಾಚ

ಏವಂ ಸೌಹೃದಶೈಥಿಲ್ಯಚಿತ್ತ ಆನಕದುಂದುಭಿಃ ।
ರುರೋದ ತತ್ಕೃತಾಂ ಮೈತ್ರೀಂ ಸ್ಮರನ್ನಶ್ರುವಿಲೋಚನಃ
॥ ೬೫ ॥

ಆ ಸಮಯದಲ್ಲಿ ಧೃತರಾಷ್ಟ್ರ-ವಿದುರ-ಯುಧಿಷ್ಠಿರ, ಭೀಮಾರ್ಜುನ-ನಕುಲ-ಸಹದೇವರೂ, ಭೀಷ್ಮ-ದ್ರೋಣಾದಿಗಳೂ, ಕುಂತೀ, ನಾರದರೂ, ಭಗವಾನ್ ವೇದವ್ಯಾಸರೂ ಹಾಗೂ ಇತರ ಸ್ವಜನ ಸಂಬಂಧಿಗಳೂ ಹಿತೈಷಿಗಳಾದ ಯಾದವರನ್ನು ಬಿಟ್ಟು ಹೋಗಲು ಸಾಧ್ಯವಾಗದೆ ವಿರಹ ವ್ಯಥೆಯನ್ನು ಅನುಭವಿಸುತ್ತಿದ್ದರು. ಅವರು ಅತ್ಯಂತ ಸ್ನೇಹಾರ್ದ್ರರಾಗಿ ಯದುವೀರರನ್ನು ಗಾಢವಾಗಿ ಆಲಿಂಗಿಸಿಕೊಂಡು, ಅವರಿಂದ ಅನುಮತಿಯನ್ನು ಪಡೆದು ಬಹಳ ಕಷ್ಟದಿಂದ ತಮ್ಮ-ತಮ್ಮ ದೇಶಗಳಿಗೆ ಹಿಂದಿರುಗಿದರು. ಹಾಗೆಯೇ ಯಜ್ಞವನ್ನು ನೋಡಲು ಬಂದಿದ್ದ ಇತರರೂ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ॥ ೫೭-೫೮ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣ-ಬಲರಾಮರು ಹಾಗೂ ಉಗ್ರಸೇನರೇ ಮೊದಲಾದವರು ನಂದಗೋಪನನ್ನು ಮತ್ತು ಇತರ ಎಲ್ಲ ಗೋಪಾಲಕರನ್ನು ಅಮೂಲ್ಯ ವಸ್ತುಗಳಿಂದ ಪೂಜಿಸಿ ಸತ್ಕರಿಸಿದನು. ಅವರೂ ಪ್ರೇಮ ಪರವಶರಾಗಿ ಅನೇಕ ದಿನಗಳವರೆಗೆ ಅಲ್ಲಿಯೇ ಇದ್ದರು. ॥ ೫೯ ॥ ವಸುದೇವನು ಮನೋರಥವೆಂಬ ಮಹಾಸಾಗರವನ್ನು ಅನಾಯಾಸವಾಗಿ ದಾಟಿಬಿಟ್ಟನು. ಅವನ ಆನಂದಕ್ಕೆ ಪಾರವೇ ಇರಲಿಲ್ಲ. ಸುಹೃದರಿಂದ ಸುತ್ತುವರಿಯಲ್ಪಟ್ಟ ಪ್ರಸನ್ನಚಿತ್ತನಾದ ವಸುದೇವನು ನಂದಗೋಪನ ಕೈಹಿಡಿದುಕೊಂಡು ಇಂತೆಂದನು. ॥ ೬೦ ॥

**ವಸುದೇವನು ಹೇಳಿದನು** - ಸಹೋದರ! ಭಗವಂತನು ಮನುಷ್ಯರಿಗೆ ಸ್ನೇಹ, ಪ್ರೇಮಪಾಶವೆಂಬ ಬಂಧನವನ್ನು ಕಲ್ಪಿಸಿಬಿಟ್ಟಿದ್ದಾನೆ. ಈ ಸ್ನೇಹ ಸಂಬಂಧವನ್ನು ತ್ಯಜಿಸಲು ದೊಡ್ಡ-ದೊಡ್ಡ ಶೂರರಿಗೂ, ಯೋಗಿ-ಯತಿಗಳಿಗೂ ಸಾಧ್ಯವಾಗದೆಂದು ನಾನು ಭಾವಿಸುತ್ತೇನೆ. ॥ ೬೧ ॥ ನಮ್ಮಂತಹ ಅಕೃತಜ್ಞರೊಂದಿಗೆ ನೀವು ಅಸದೃಶವಾದ ಸ್ನೇಹದ ವ್ಯವಹಾರಮಾಡಿರುವಿರಿ. ನಿಮ್ಮಂತಹ ಸಂತಶಿರೋಮಣಿಗಳಿಗೆ ಇಂತಹ ವ್ಯವಹಾರವು ಸ್ವಭಾವಸಿದ್ಧವೇ ಆಗಿರುತ್ತದೆ. ನಾವು ಇದನ್ನು ಎಂದೂ ತೀರಿಸಲಾರೆವು. ನಿಮಗೆ ಇದರ ಪ್ರತಿಫಲವನ್ನು ಕೊಡಲು ಸಮರ್ಥರಲ್ಲ. ಹೀಗಿದ್ದರೂ ನಮ್ಮಗಳ ಈ ನಿರ್ವ್ಯಾಜವಾದ ಮಿತ್ರತೆಯ ಸಂಬಂಧವು ಅಚಲವಾಗಿಯೇ ಉಳಿಯಲಿ. ॥ ೬೨ ॥ ಹಿಂದೆ ನಾವು ಕಾರಾಗೃಹದಲ್ಲಿ ಬಂಧಿತರಾಗಿದ್ದರಿಂದ ನಿಮಗೆ ಯಾವುದೇ ಉಪಕಾರವನ್ನು ಮಾಡಲೂ ಅಶಕ್ಯವಾಗಿತ್ತು. ಈಗಲಾದರೋ ಧನಮದದಿಂದ ಕುರುಡರಾಗಿ ನೀವು ನಮ್ಮ ಮುಂದೆಯೇ ಇದ್ದರೂ ಕಣ್ಣೆತ್ತಿಯೂ ನೋಡುತ್ತಿಲ್ಲ. ॥ ೬೩ ॥ ಮಾನದನಾದ ನಂದಗೋಪನೇ! ಶ್ರೇಯಸ್ಕಾಮನಾದವನಿಗೆ ರಾಜ್ಯಲಕ್ಷ್ಮಿಯು ದೊರಕದಿರುವುದೇ ಒಳಿತಿದೆ. ಏಕೆಂದರೆ, ಮನುಷ್ಯನು ರಾಜ್ಯಲಕ್ಷ್ಮಿಯಿಂದ ಕುರುಡನಾಗುತ್ತಾನೆ ಮತ್ತು ತನ್ನ ಸ್ವಜನರನ್ನಾಗಲೀ, ಬಂಧುಗಳನ್ನೂ ನೋಡಲಾರನು. ॥ ೬೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಹೇಳುತ್ತಿದ್ದಂತೆಯೇ ವಸುದೇವನ ಹೃದಯವು ಪ್ರೇಮದಿಂದ ಗದ್ಗದವಾಯಿತು. ನಂದಗೋಪನ ಮೈತ್ರಿಯೂ ಹಿಂದೆ ಮಾಡಿದ ಉಪಕಾರಗಳೂ ಸ್ಮರಣೆಗೆ ಬಂದು ಅವನ ಕಣ್ಣುಗಳಲ್ಲಿ ನೀರು ತುಂಬಿಬಂದು ಗಳಗಳನೆ ಅತ್ತುಬಿಟ್ಟನು. ॥ ೬೫ ॥

ನಂದಸ್ತು ಸಖ್ಯುಃ ಪ್ರಿಯಕೃತ್ ಪ್ರೇಮ್ಣಾ ಗೋವಿಂದರಾಮಯೋಃ ।
ಅದ್ಯ ಶ್ವ ಇತಿ ಮಾಸಾಂಸ್ತ್ರೀನ್ ಯದುಭಿರ್ಮಾನಿತೋಽವಸತ್
॥ ೬೬ ॥

ನಂದಗೋಪನು ತನ್ನ ಮಿತ್ರನಾದ ವಸುದೇವನಿಗೆ ಹಾಗೂ ಶ್ರೀಕೃಷ್ಣ-ಬಲರಾಮರಿಗೆ ಸಂತೋಷಪಡಿಸಲು, ಅವರ ಪ್ರೇಮ ಪಾಶದಲ್ಲಿ ಬಂಧಿತನಾಗಿ ಇಂದು-ನಾಳೆ ಎಂದೆನ್ನುತ್ತಾ ಮೂರು ತಿಂಗಳು ಅಲ್ಲೇ ಇದ್ದುಬಿಟ್ಟನು. ॥ ೬೬ ॥

ತತಃ ಕಾಮೈಃ ಪೂರ್ಯಮಾಣಃ ಸವ್ರಜಃ ಸಹಬಾಂಧವಃ ।
ಪರಾರ್ಧ್ಯಾಭರಣಕ್ಷೌಮನಾನಾನರ್ಘ್ಯಪರಿಚ್ಛದೈಃ
॥ ೬೭ ॥

ಬಳಿಕ ಬಹುಮೂಲ್ಯವಾದ ಆಭೂಷಣಗಳಿಂದ, ರೇಷ್ಮೆ ವಸ್ತ್ರಗಳಿಂದ, ನಾನಾವಿಧದ ಉತ್ತಮೋತ್ತಮ ವಸ್ತುಗಳಾದ ಮತ್ತು ಭೋಗಸಾಮಗ್ರಿಗಳಿಂದ ನಂದಗೋಪನನ್ನು, ಅವನ ವ್ರಜವಾಸಿಗಳಾದ ಸಂಗಡಿಗರನ್ನೂ, ಬಂಧು ಬಾಂಧವರನ್ನು ಉದಾರ ಮನಸ್ಸಿನಿಂದ ತೃಪ್ತಿಪಡಿಸಿದನು. ॥ ೬೭ ॥

ವಸುದೇವೋಗ್ರಸೇನಾಭ್ಯಾಂ ಕೃಷ್ಣೋದ್ಧವಬಲಾದಿಭಿಃ ।
ದತ್ತಮಾದಾಯ ಪಾರಿಬರ್ಹಂ ಯಾಪಿತೋ ಯದುಭಿರ್ಯಯೌ
॥ ೬೮ ॥

ವಸುದೇವ, ಉಗ್ರಸೇನ, ಶ್ರೀಕೃಷ್ಣ-ಬಲರಾಮರು, ಉದ್ಧವರೇ ಮೊದಲಾದ ಯದುವಂಶೀಯರು ಬೇರೆ-ಬೇರೆಯಾಗಿ ಅವನಿಗೆ ಅನೇಕ ಉಡುಗೊರೆಗಳನ್ನು ಕೊಟ್ಟರು. ಅವರಿಂದ ಬೀಳ್ಕೊಂಡು, ಅವರಿತ್ತ ಸಾಮಗ್ರಿಗಳಿಂದೊಡಗೂಡಿ ನಂದಗೋಪನು ತನ್ನ ವ್ರಜ ಮಂಡಲಕ್ಕೆ ಪ್ರಯಾಣಮಾಡಿದನು. ॥ ೬೮ ॥

ನಂದೋ ಗೋಪಾಶ್ಚ ಗೋಪ್ಯಶ್ಚ ಗೋವಿಂದಚರಣಾಂಬುಜೇ ।
ಮನಃ ಕ್ಷಿಪ್ತಂ ಪುನರ್ಹರ್ತುಮನೀಶಾ ಮಥುರಾಂ ಯಯುಃ
॥ ೬೯ ॥

ನಂದಗೋಪ, ಗೋಪಾಲರು ಮತ್ತು ಗೋಪಿಯರ ಚಿತ್ತವು ಭಗವಾನ್ ಶ್ರೀಕೃಷ್ಣನ ಚರಣಕಮಲಗಳಲ್ಲಿ ಎಷ್ಟು ನೆಟ್ಟುಹೋಗಿತ್ತೆಂದರೆ ಅದನ್ನು ಪ್ರಯತ್ನ ಮಾಡಿದರೂ ಹಿಂದಿರುಗಿಸದಾದರು. ಕೊನೆಗೆ ಮನಸ್ಸಿಲ್ಲದೆಯೇ ಅವರು ಮಥುರೆಗೆ ಹೊರಟು ಹೋದರು. ॥ ೬೯ ॥

ಬಂಧುಷು ಪ್ರತಿಯಾತೇಷು ವೃಷ್ಣಯಃ ಕೃಷ್ಣದೇವತಾಃ ।
ವೀಕ್ಷ್ಯ ಪ್ರಾವೃಷಮಾಸನ್ನಾಂ ಯಯುರ್ದ್ವಾರವತೀಂ ಪುನಃ
॥ ೭೦ ॥

ಬಂಧು-ಮಿತ್ರರು ಹೋದನಂತರ ಶ್ರೀಕೃಷ್ಣನನ್ನೇ ಏಕಮಾತ್ರ ಇಷ್ಟದೇವನೆಂದು ಭಾವಿಸಿದ್ದ ಯಾದವರು ವರ್ಷಾಕಾಲವು ಸನ್ನಿಹಿತವಾದುದನ್ನು ಕಂಡು ದ್ವಾರಕೆಗೆ ಪ್ರಯಾಣ ಮಾಡಿದರು. ॥ ೭೦ ॥

ಜನೇಭ್ಯಃ ಕಥಯಾಂಚಕ್ರುರ್ಯದುದೇವಮಹೋತ್ಸವಮ್ ।
ಯದಾಸೀತ್ತೀರ್ಥಯಾತ್ರಾಯಾಂ ಸುಹೃತ್ಸಂದರ್ಶನಾದಿಕಮ್
॥ ೭೧ ॥

ದ್ವಾರಾವತಿಯನ್ನು ಸೇರಿದ ಬಳಿಕ ಅವರೆಲ್ಲರೂ ಅಲ್ಲಿದ್ದ ಪ್ರಜೆಗಳಿಗೆ ವಸುದೇವನ ಯಜ್ಞೋತ್ಸವವನ್ನು, ತೀರ್ಥಯಾತ್ರೆಯ ಪ್ರಸಂಗದಲ್ಲಿ ಸ್ವಜನ-ಸಂಬಂಧಿಗಳ ದರ್ಶನ-ಭೇಟಿ, ವಾರ್ತಾಲಾಪ ಮೊದಲಾದುವನ್ನು ವಿವರಿಸಿ ಹೇಳಿದರು. ॥ ೭೧ ॥

ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೮೪ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ತೀರ್ಥಯಾತ್ರಾನುವರ್ಣನಂ ನಾಮ ಚತುರಶೀತಿತಮೋಽಧ್ಯಾಯಃ ॥ ೮೪ ॥

# ಎಂಭತ್ತೈದನೆಯ ಅಧ್ಯಾಯ

## ಭಗವಂತನು ವಸುದೇವನಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದುದು – ಗತಿಸಿಹೋದ ದೇವಕಿಯ ಆರು ಮಕ್ಕಳನ್ನು ಶ್ರೀಕೃಷ್ಣನು ಹಿಂದಕ್ಕೆ ತಂದುದು

*ಶ್ರೀಬಾದರಾಯಣಿರುವಾಚ*

ಅಥೈಕದಾಽಽತ್ಮಜೌ ಪ್ರಾಪ್ತೌ ಕೃತಪಾದಾಭಿವಂದನೌ ।
ವಸುದೇವೋಽಭಿನಂದ್ಯಾಹ ಪ್ರೀತ್ಯಾ ಸಂಕರ್ಷಣಾಚ್ಯುತೌ
॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ದೈನಂದಿನ ಪದ್ಧತಿಯಂತೆ ಶ್ರೀಕೃಷ್ಣ-ಬಲರಾಮರು ಒಂದು ದಿನ ಪ್ರಾತಃಕಾಲದಲ್ಲಿ ನಮಸ್ಕರಿಸಲು ತಂದೆ-ತಾಯಿಗಳ ಬಳಿಗೆ ಬಂದರು. ಅಭಿವಂದಿಸಿದ ಬಳಿಕ ವಸುದೇವ-ದೇವಕಿಯರು ಪುತ್ರರಿಬ್ಬರನ್ನು ಅತ್ಯಂತ ಪ್ರೇಮದಿಂದ ಪ್ರಶಂಸಿಸುತ್ತಾ ಹೇಳತೊಡಗಿದರು. ॥ ೧ ॥

ಮುನೀನಾಂ ಸ ವಚಃ ಶ್ರುತ್ವಾ ಪುತ್ರಯೋರ್ಧಾಮಸೂಚಕಮ್ ।
ತದ್ವೀರ್ಯೈರ್ಜಾತವಿಶ್ರಂಭಃ ಪರಿಭಾಷ್ಯಾಭ್ಯಭಾಷತ
॥ ೨ ॥

ಕೃಷ್ಣ ಕೃಷ್ಣ ಮಹಾಯೋಗಿನ್ ಸಂಕರ್ಷಣ ಸನಾತನ ।
ಜಾನೇ ವಾಮಸ್ಯ ಯತ್ಸಾಕ್ಷಾತ್ ಪ್ರಧಾನಪುರುಷೌ ಪರೌ
॥ ೩ ॥

ಯತ್ರ ಯೇನ ಯತೋ ಯಸ್ಯ ಯಸ್ಮೈ ಯದ್ಯದ್ಯಥಾ ಯದಾ ।
ಸ್ಯಾದಿದಂ ಭಗವಾನ್ ಸಾಕ್ಷಾತ್ಪ್ರಧಾನಪುರುಷೇಶ್ವರಃ
॥ ೪ ॥

ಏತನ್ನಾನಾವಿಧಂ ವಿಶ್ವಮಾತ್ಮಸೃಷ್ಟಮಧೋಕ್ಷಜ ।
ಆತ್ಮನಾನುಪ್ರವಿಶ್ಯಾತ್ಮನ್ ಪ್ರಾಣೋ ಜೀವೋ ಬಿಭರ್ಷ್ಯಜಃ
॥ ೫ ॥

ಪ್ರಾಣಾದೀನಾಂ ವಿಶ್ವಸೃಜಾಂ ಶಕ್ತಯೋ ಯಾಃ ಪರಸ್ಯ ತಾಃ ।
ಪಾರತಂತ್ರ್ಯಾದ್ ವೈಸಾದೃಶ್ಯಾದ್ ದ್ವಯೋಶ್ಚೇಷ್ಟೈವ ಚೇಷ್ಟತಾಮ್
॥ ೬ ॥

ಕಾಂತಿಸ್ತೇಜಃ ಪ್ರಭಾ ಸತ್ತಾ ಚಂದ್ರಾಗ್ನ್ಯರ್ಕರ್ಕ್ಷವಿದ್ಯುತಾಮ್ ।
ಯತ್ ಸ್ಥೈರ್ಯಂ ಭೂಭೃತಾಂ ಭೂಮೇ-
ರ್ವೃತ್ತಿರ್ಗಂಧೋಽರ್ಥತೋ ಭವಾನ್
॥ ೭ ॥

ತರ್ಪಣಂ ಪ್ರಾಣನಮಪಾಂ ದೇವ ತ್ವಂ ತಾಶ್ಚ ತದ್ರಸಃ ।
ಓಜಃ ಸಹೋ ಬಲಂ ಚೇಷ್ಟಾ ಗತಿರ್ವಾಯೋಸ್ತವೇಶ್ವರ
॥ ೮ ॥

ದಿಶಾಂ ತ್ವಮವಕಾಶೋಽಸಿ ದಿಶಃ ಖಂ ಸ್ಫೋಟ ಆಶ್ರಯಃ ।
ನಾದೋ ವರ್ಣಸ್ತ್ವಮೋಂಕಾರ ಆಕೃತೀನಾಂ ಪೃಥಕ್ಕೃತಿಃ
॥ ೯ ॥

ವಸುದೇವನು ಮಹಾ-ಮಹಾ ಋಷಿಗಳ ಮುಖದಿಂದ ಭಗವಂತನ ಮಹಿಮೆಯನ್ನು ಕೇಳಿದ್ದನು ಮತ್ತು ಐಶ್ವರ್ಯ ಪೂರ್ಣವಾದ ಅವನ ಚರಿತ್ರೆಗಳನ್ನು ಕಣ್ಣಾರೆ ಕಂಡಿದ್ದನು. ಇವನು ಸಾಧಾರಣವಲ್ಲವೆಂದೂ ಸಾಕ್ಷಾತ್ ಭಗವಂತನೇ ಆಗಿರುವನೆಂಬ ಮಾತಿನಲ್ಲಿ ದೃಢವಿಶ್ವಾಸವಿತ್ತು. ಇದರಿಂದ ಅವನು ತನ್ನ ಪುತ್ರರನ್ನು ಪ್ರೇಮಪೂರ್ವಕವಾಗಿ ಸಂಬೋಧಿಸಿ ಹೀಗೆ ಹೇಳಿದನು. ॥ ೨ ॥ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ಮಹಾಯೋಗೀಶ್ವರ ಸಂಕರ್ಷಣನೇ! ನೀವಿಬ್ಬರೂ ಸನಾತನರಾಗಿರುವಿರಿ. ನೀವಿಬ್ಬರೂ ಪ್ರಕೃತಿ-ಪುರುಷ ಸ್ವರೂಪರೆಂದೂ ಸಾಕ್ಷಾತ್ ಈಶ್ವರರೆಂದೂ ನಾನು ತಿಳಿದಿರುತ್ತೇನೆ. ॥ ೩ ॥ ಈ ಜಗತ್ತಿನ ಆಧಾರರೂ, ನಿರ್ಮಾತೃಗಳೂ, ನಿರ್ಮಾಣ ಸಾಮಗ್ರಿಯೂ ನೀವೇ ಆಗಿದ್ದೀರಿ. ಈ ಸಮಸ್ತ ಜಗತ್ತಿನ ಸ್ವಾಮಿಯೂ ನೀವಿಬ್ಬರು ಆಗಿರುವಿರಿ. ಮತ್ತು ನಿಮ್ಮ ಕ್ರೀಡೆ ಗಾಗಿಯೇ ಇದರ ನಿರ್ಮಾಣವಾಗಿದೆ. ಇದು ಯಾವಾಗ, ಯಾವ ರೂಪದಿಂದ, ಏನೆಲ್ಲ ಇರುತ್ತದೋ, ಆಗುತ್ತಿದೆಯೋ ಅದೆಲ್ಲವೂ ನೀವೇ ಆಗಿದ್ದೀರಿ. ಈ ಜಗತ್ತಿನಲ್ಲಿ ಪ್ರಕೃತಿರೂಪದಿಂದ ಭೋಗ್ಯನೂ ಮತ್ತು ಪುರುಷರೂಪದಿಂದ ಭೋಕ್ತಾನು ಹಾಗೂ ಎರಡರಿಂದಲೂ ಅತೀತನೂ, ಎರಡರ ನಿಯಾಮಕರೂ ಆದ ಸಾಕ್ಷಾತ್ ಭಗವಂತನೇ ನೀವಾಗಿರುವಿರಿ. ॥ ೪ ॥ ಇಂದ್ರಿಯಾತೀತನೇ! ಜನ್ಮ-ಸ್ಥಿತಿಯೇ ಮೊದಲಾದ ಭಾವವಿಕಾರದಿಂದ ರಹಿತರಾದ ಪರಮಾತ್ಮನೇ! ಈ ಚಿತ್ರ - ವಿಚಿತ್ರವಾದ ಜಗತ್ತನ್ನು ನೀವೇ ನಿರ್ಮಿಸಿರುವಿರಿ. ಇದರಲ್ಲಿ ನೀವೇ ಆತ್ಮರೂಪದಿಂದ ಪ್ರವೇಶಿಸಿಯೂ ಇದ್ದಿರಿ. ನೀವು ಪ್ರಾಣ (ಕ್ರಿಯಾಶಕ್ತಿ) ಮತ್ತು ಜೀವ (ಜ್ಞಾನಶಕ್ತಿ) ರೂಪದಿಂದ ಇದನ್ನು ಪಾಲಿಸುತ್ತಾ-ಪೋಷಿಸುತ್ತಾ ಇರುವಿರಿ. ॥ ೫ ॥ ಕ್ರಿಯಾಶಕ್ತಿ ಪ್ರಧಾನವಾದ ಪ್ರಾಣವೇ ಮೊದಲಾದುವುಗಳಿಗೆ ಜಗತ್ತಿನ ವಸ್ತುಗಳನ್ನು ಸೃಷ್ಟಿಸುವ ಸಾಮರ್ಥ್ಯವಿದೆಯೋ ಅದು ಅವುಗಳ ಸಾಮರ್ಥ್ಯವಾಗಿರದೆ ನಿನ್ನದೇ ಆಗಿದೆ. ಏಕೆಂದರೆ, ಅವು ನಿನ್ನಂತೆ ಚೇತನರಲ್ಲ ಅಚೇತನರಾಗಿರುವವರು. ಸ್ವತಂತ್ರರಲ್ಲ, ಪರತಂತ್ರರಾಗಿದ್ದಾರೆ. ಆದ್ದರಿಂದ ಆ ಚೇಷ್ಟಾಶೀಲ ಪ್ರಾಣವೇ ಮೊದಲಾದುವುಗಳಲ್ಲಿ ಕೇವಲ ಚೇಷ್ಟಾಮಾತ್ರವಿರುತ್ತದೆ, ಶಕ್ತಿಯಲ್ಲ. ಶಕ್ತಿಯಾದರೋ ನಿನ್ನದೇ ಆಗಿದೆ. ॥ ೬ ॥ ಪ್ರಭೋ! ಚಂದ್ರನಕಾಂತಿ, ಅಗ್ನಿಯತೇಜ, ಸೂರ್ಯನಪ್ರಭೆ, ನಕ್ಷತ್ರ ಮತ್ತು ವಿದ್ಯುತ್ತಿನ ಸ್ಫುರಣರೂಪದ ಸತ್ತೆ, ಪರ್ವತಗಳ ಸ್ಥಿರತೆ, ಪೃಥಿವಿಯ ಆಧಾರ ಶಕ್ತಿರೂಪವಾದ ವೃತ್ತಿ ಮತ್ತು ಗಂಧರೂಪ ಗುಣ - ಇವೆಲ್ಲವೂ ವಾಸ್ತವವಾಗಿ ನೀನೇ ಆಗಿರುವೆ. ॥ ೭ ॥ ಪರಮೇಶ್ವರನೇ! ನೀರಿನಲ್ಲಿರುವ ತೃಪ್ತಿಪಡಿಸುವ, ಜೀವನ ನೀಡುವ, ಶುದ್ಧಿಗೊಳಿಸುವ ಶಕ್ತಿಗಳು ನಿನ್ನದೇ ಸ್ವರೂಪವಾಗಿದೆ. ಜಲ ಮತ್ತು ಅದರ ರಸ ನೀನೇ ಆಗಿರುವೆ. ಪ್ರಭೋ ವಾಯುವಿನಲ್ಲಿರುವ ಇಂದ್ರಿಯ ಶಕ್ತಿ ಅಂತಃಕರಣದ ಶಕ್ತಿ, ಶರೀರದ ಶಕ್ತಿ, ಚೇಷ್ಟೆ, ಗಮನ ಶಕ್ತಿ - ಈ ಶಕ್ತಿಗಳೆಲ್ಲವೂ ನಿನ್ನವುಗಳೇ ಆಗಿವೆ. ॥ ೮ ॥ ದಿಕ್ಕುಗಳಲ್ಲಿರುವ ಅವಕಾಶವು ನೀನೇ ಆಗಿರುವೆ. ಆಕಾಶ ಮತ್ತು ಅದರ ಆಶ್ರಯಭೂತವಾಗಿರುವ ಸ್ಫೋಟ, ಶಬ್ದ ತನ್ಮಾತ್ರೆ ಅಥವಾ ಪರಾವಾಣಿ, ನಾದ-ಪಶ್ಯಂತಿ, ಓಂಕಾರ-ಮಧ್ಯಮಾ ಮತ್ತು ವರ್ಣ (ಅಕ್ಷರ) ಹಾಗೂ ಪದಾರ್ಥಗಳನ್ನು ಬೇರೆ-ಬೇರೆಯಾಗಿ ನಿರ್ದೇಶಿಸುವ ಪದ, ರೂಪ ವೈಖರಿ ವಾಣಿಯೂ ನೀನೇ ಆಗಿರುವೆ. ॥ ೯ ॥

ಇಂದ್ರಿಯಂ ತ್ವಿಂದ್ರಿಯಾಣಾಂ ತ್ವಂ ದೇವಾಶ್ಚ ತದನುಗ್ರಹಃ ।
ಅವಬೋಧೋ ಭವಾನ್ ಬುದ್ಧೇರ್ಜೀವಸ್ಯಾನುಸ್ಮೃತಿಃ ಸತೀ
॥ ೧೦ ॥

ಭೂತಾನಾಮಸಿ ಭೂತಾದಿರಿಂದ್ರಿಯಾಣಾಂ ಚ ತೈಜಸಃ ।
ವೈಕಾರಿಕೋ ವಿಕಲ್ಪಾನಾಂ ಪ್ರಧಾನಮನುಶಾಯಿನಾಮ್
॥ ೧೧ ॥

ನಶ್ವರೇಷ್ವಿಹ ಭಾವೇಷು ತದಸಿ ತ್ವಮನಶ್ವರಮ್ ।
ಯಥಾ ದ್ರವ್ಯವಿಕಾರೇಷು ದ್ರವ್ಯಮಾತ್ರಂ ನಿರೂಪಿತಮ್
॥ ೧೨ ॥

ಸತ್ತ್ವಂ ರಜಸ್ತಮ ಇತಿ ಗುಣಾಸ್ತದ್ವೃತ್ತಯಶ್ಚ ಯಾಃ ।
ತ್ವಯ್ಯದ್ಧಾ ಬ್ರಹ್ಮಣಿ ಪರೇ ಕಲ್ಪಿತಾ ಯೋಗಮಾಯಯಾ
॥ ೧೩ ॥

ತಸ್ಮಾನ್ನ ಸಂತ್ಯಮೀ ಭಾವಾ ಯರ್ಹಿ ತ್ವಯಿ ವಿಕಲ್ಪಿತಾಃ ।
ತ್ವಂ ಚಾಮೀಷು ವಿಕಾರೇಷು ಹ್ಯನ್ಯದಾ ವ್ಯಾವಹಾರಿಕಃ
॥ ೧೪ ॥

ಗುಣಪ್ರವಾಹ ಏತಸ್ಮಿನ್ನಬುಧಾಸ್ತ್ವಖಿಲಾತ್ಮನಃ ।
ಗತಿಂ ಸೂಕ್ಷ್ಮಾಮಬೋಧೇನ ಸಂಸರಂತೀಹ ಕರ್ಮಭಿಃ
॥ ೧೫ ॥

ಯದೃಚ್ಛಯಾ ನೃತಾಂ ಪ್ರಾಪ್ಯ ಸುಕಲ್ಪಾಮಿಹ ದುರ್ಲಭಾನ್ ।
ಸ್ವಾರ್ಥೇ ಪ್ರಮತ್ತಸ್ಯ ವಯೋ ಗತಂ ತ್ವನ್ಮಾಯಯೇಶ್ವರ
॥ ೧೬ ॥

ಅಸಾವಹಂ ಮಮೈವೈತೇ ದೇಹೇ ಚಾಸ್ಯಾನ್ವಯಾದಿಷು ।
ಸ್ನೇಹಪಾಶೈರ್ನಿಬಧ್ನಾತಿ ಭವಾನ್ ಸರ್ವಮಿದಂ ಜಗತ್
॥ ೧೭ ॥

ಯುವಾಂ ನ ನಃ ಸುತೌ ಸಾಕ್ಷಾತ್ಪ್ರಧಾನಪುರುಷೇಶ್ವರೌ ।
ಭೂಭಾರಕ್ಷತ್ರಕ್ಷಪಣ ಅವತೀರ್ಣೌ ತಥಾಽಽತ್ಥ ಹ
॥ ೧೮ ॥

ಇಂದ್ರಿಯಗಳು, ಅವುಗಳ ವಿಷಯ ಪ್ರಕಾಶಿನಿ ಶಕ್ತಿ ಮತ್ತು ಅಧಿಷ್ಠಾತೃದೇವತೆಗಳು ನೀನೆ ಆಗಿರುವೆ. ಬುದ್ಧಿಯ ನಿಶ್ಚಯಾತ್ಮಿಕಾಶಕ್ತಿ ಮತ್ತು ಜೀವಿಯ ವಿಶುದ್ಧ ಸ್ಮರಣಶಕ್ತಿಯೂ ನೀನೇ ಆಗಿರುವೆ. ॥ ೧೦ ॥ ಭೂತಮಾತ್ರರಲ್ಲಿ ಅವುಗಳ ಕಾರಣವಾದ ತಾಮಸಾಹಂಕಾರ ಮತ್ತು ಇಂದ್ರಿಯಗಳಿಗೆ ಕಾರಣವಾದ ತೈಜಸಾಹಂಕಾರ ಹಾಗೂ ಇಂದ್ರಿಯಗಳ ಅಧಿಷ್ಠಾತೃ-ದೇವತೆಗಳಲ್ಲಿ ಅವರ ಕಾರಣವಾದ ಸಾತ್ವಿಕ ಅಹಂಕಾರ ಜೀವನ ಹುಟ್ಟು-ಸಾವಿಗೆ ಕಾರಣವಾದ ಮಾಯೆಯು ನೀನೇ ಆಗಿರುವೆ. ॥ ೧೧ ॥ ಭಗವಂತಾ ! ಮಣ್ಣಿನ ವಸ್ತುಗಳ ವಿಕಾರವಾದ ಗಡಿಗೆ, ಮರ ಮುಂತಾದವುಗಳಲ್ಲಿ ಮಣ್ಣೇ ನಿರಂತರವಾಗಿರುತ್ತದೆ ಮತ್ತು ವಾಸ್ತವವಾಗಿ ಅವು ಕಾರಣ (ಮಣ್ಣು) ರೂಪವೇ ಆಗಿವೆ. ಹಾಗೆಯೇ ನಾಶಹೊಂದುವ ಎಲ್ಲ ಪದಾರ್ಥಗಳಲ್ಲಿಯೂ ನೀನೇ ಕಾರಣರೂಪದಿಂದ ಅವಿನಾಶೀ ತತ್ತ್ವನಾಗಿರುವೆ. ವಾಸ್ತವವಾಗಿ ಅವೆಲ್ಲವೂ ನಿನ್ನ ಸ್ವರೂಪವೇ ಆಗಿವೆ. ॥ ೧೨ ॥ ಪ್ರಭೋ ! ಸತ್ತ್ವ, ರಜ, ತಮ - ಈ ತ್ರಿಗುಣಗಳು ಮತ್ತು ಅವುಗಳ ವೃತ್ತಿಗಳು (ಪರಿಣಾಮ) - ಮಹತ್ತತ್ತ್ವಾದಿಗಳು ಪರಬ್ರಹ್ಮ ಪರಮಾತ್ಮನಾದ ನಿನ್ನಲ್ಲೇ ಯೋಗಮಾಯೆಯಿಂದ ಕಲ್ಪಿತವಾಗಿವೆ. ॥ ೧೩ ॥ ಆದಕ್ಕಾಗಿ ಜನ್ಮ-ಸ್ಥಿತಿ ಮೊದಲಾದ ಈ ಭಾವವಿಕಾರಗಳು ನಿನ್ನಲ್ಲಿ ಖಂಡಿತವಾಗಿಯೂ ಇಲ್ಲ. ನಿನ್ನಲ್ಲಿ ಇವುಗಳನ್ನು ಕಲ್ಪಿಸಿಕೊಂಡಾಗ ನೀನು ಈ ವಿಕಾರಗಳಲ್ಲಿ ಅನುಗತನಾದವನಂತೆ ಕಂಡುಬರುವೆ. ಕಲ್ಪನೆಯ ನಿವೃತ್ತಿ ಉಂಟಾದಾಗ ನಿರ್ವಿಕಲ್ಪ ಪರಮಾರ್ಥ ಸ್ವರೂಪನಾದ ನೀನೇ ಉಳಿದುಬಿಡುವೆ. ॥ ೧೪ ॥ ಈ ಜಗತ್ತು ಸತ್ತ್ವ, ರಜ, ತಮ - ಈ ತ್ರಿಗುಣಗಳ ಪ್ರವಾಹವಾಗಿದೆ. ದೇಹ, ಇಂದ್ರಿಯಗಳು, ಅಂತಃಕರಣ, ಸುಖ, ದುಃಖ, ರಾಗ-ಲೋಭಾದಿಗಳು ಅವುಗಳ ಕಾರ್ಯವಾಗಿದೆ. ಇದರಲ್ಲಿ ಅಜ್ಞಾನಿಗಳಾದವರು ನಿನ್ನ ಸರ್ವಾತ್ಮಕವಾದ ಸೂಕ್ಷ್ಮಸ್ವರೂಪವನ್ನು ತಿಳಿಯುತ್ತಿಲ್ಲ. ಅವರು ತಮ್ಮ ದೇಹಾಭಿಮಾನರೂಪವಾದ ಅಜ್ಞಾನದಿಂದಲೇ ಕರ್ಮ ಗಳಲ್ಲಿ ಸಿಕ್ಕುಹಾಕಿಕೊಂಡು ಪದೇ-ಪದೇ ಹುಟ್ಟು- ಸಾವಿನ ಉರುಳಾಟದಲ್ಲಿ ಅಲೆಯುತ್ತಾ ಇರುತ್ತಾರೆ. ॥ ೧೫ ॥ ಪರಮೇಶ್ವರನೇ ! ನನಗೆ ಶುಭ ಪ್ರಾರಬ್ಧಕ್ಕನುಸಾರವಾಗಿ ಸಶಕ್ತ ಇಂದ್ರಿಗಳಿಂದ ಕೂಡಿದ ಅತ್ಯಂತ ದುರ್ಲಭವಾದ ಮನುಷ್ಯ ಶರೀರವು ದೊರೆತಿದೆ. ಆದರೆ ನಿನ್ನ ಮಾಯೆಗೆ ವಶನಾಗಿ ಪ್ರಮತ್ತನಾಗಿರುವ ನನ್ನ ಆಯುಷ್ಯವೂ ನಿಜವಾದ ಪರಮಾರ್ಥ ಸಾಧನೆಯಲ್ಲಿ ವ್ಯರ್ಥವಾಗಿ ಕಳೆದು ಹೋಯಿತು. ॥ ೧೬ ॥ ಪ್ರಭೋ ! ಈ ಶರೀರವು ನನ್ನದು ಮತ್ತು ಈ ಶರೀರದ ಸಂಬಂಧಿಗಳು ನನ್ನವರಾಗಿದ್ದಾರೆ ಎಂಬ ಅಹಂತೆ-ಮಮತೆಯ ರೂಪವಾದ ಸ್ನೇಹದ ಬಲೆಯಲ್ಲಿ ನೀನೇ ಈ ಸಮಸ್ತ ಜಗತ್ತನ್ನು ಕಟ್ಟಿಹಾಕಿರುವೆ. ॥ ೧೭ ॥ ನೀವಿಬ್ಬರೂ ನನ್ನ ಪುತ್ರರಾಗಿರದೇ ಸಂಪೂರ್ಣ ಪ್ರಕೃತಿ ಮತ್ತು ಜೀವರ ಸ್ವಾಮಿಯಾಗಿರುವಿರಿ ಎಂಬುದು ನಾನು ತಿಳಿದಿರುತ್ತೇನೆ. ಭೂಮಿಗೆ ಭಾರವಾಗಿದ್ದ ರಾಜರನ್ನು ವಿನಾಶಗೊಳಿಸಲೆಂದೇ ನೀವು ಅವತರಿಸಿರುವಿರಿ. ಈ ಮಾತನ್ನು ನೀವು ಹಿಂದೆ ನನಗೆ ಹೇಳಿಯೂ ಇದ್ದೀರಿ. ॥ ೧೮ ॥

ತತ್ತೇ ಗತೋಽಸ್ಮ್ಯರಣಮದ್ಯ ಪದಾರವಿಂದ-
ಮಾಪನ್ನಸಂಸೃತಿಭಯಾಪಹಮಾರ್ತಬಂಧೋ ।
ಏತಾವತಾಲಮಲಮಿಂದ್ರಿಯಲಾಲಸೇನ
ಮರ್ತ್ಯಾತ್ಮದೃಕ್ ತ್ವಯಿ ಪರೇ ಯದಪತ್ಯಬುದ್ಧಿಃ ॥ ೧೯ ॥

ಸೂತೀಗೃಹೇ ನನು ಜಗಾದ ಭವಾನಜೋ ನೌ
ಸಂಜಜ್ಞ ಇತ್ಯನುಯುಗಂ ನಿಜಧರ್ಮಗುಪ್ತ್ಯೈ ।
ನಾನಾತನೂರ್ಗಗನವದ್ವಿದಧಜ್ಜಹಾಸಿ
ಕೋ ವೇದ ಭೂಮ್ನ ಉರುಗಾಯ ವಿಭೂತಿಮಾಯಾಮ್ ॥ ೨೦ ॥

ಶ್ರೀಶುಕ ಉವಾಚ

ಆಕರ್ಣ್ಯೇತ್ಥಂ ಪಿತುರ್ವಾಕ್ಯಂ ಭಗವಾನ್ ಸಾತ್ವತರ್ಷಭಃ ।
ಪ್ರತ್ಯಾಹ ಪ್ರಶ್ರಯಾನಮ್ರಃ ಪ್ರಹಸನ್‌ಶ್ಲಕ್ಷ್ಣಯಾ ಗಿರಾ
॥ ೨೧ ॥

ಶ್ರೀಭಗವಾನುವಾಚ

ವಚೋ ವಃ ಸಮವೇತಾರ್ಥಂ ತಾತೈತದುಪಮನ್ಮಹೇ ।
ಯನ್ನಃ ಪುತ್ರಾನ್ಸಮುದ್ದಿಶ್ಯ ತತ್ತ್ವಗ್ರಾಮ ಉದಾಹೃತಃ
॥ ೨೨ ॥

ಅಹಂ ಯೂಯಮಸಾವಾರ್ಯ ಇಮೇ ಚ ದ್ವಾರಕೌಕಸಃ ।
ಸರ್ವೇಽಪ್ಯೇವಂ ಯದುಶ್ರೇಷ್ಠ ವಿಮೃಶ್ಯಾಃ ಸಚರಾಚರಮ್
॥ ೨೩ ॥

ಆತ್ಮಾ ಹ್ಯೇಕಃ ಸ್ವಯಂಜ್ಯೋತಿರ್ನಿತ್ಯೋಽನ್ಯೋ ನಿರ್ಗುಣೋ ಗುಣೈಃ ।
ಆತ್ಮಸೃಷ್ಟೈಸ್ತತ್ಕೃತೇಷು ಭೂತೇಷು ಬಹುಧೇಯತೇ
॥ ೨೪ ॥

ಖಂ ವಾಯುರ್ಜ್ಯೋತಿರಾಪೋ ಭೂಸ್ತತ್ಕೃತೇಷು ಯಥಾಶಯಮ್ ।
ಆವಿಸ್ತಿರೋಽಲ್ಪಭೂರ್ಯೇಕೋ ನಾನಾತ್ವಂ ಯಾತ್ಯಸಾವಪಿ
॥ ೨೫ ॥

ಶ್ರೀಶುಕ ಉವಾಚ

ಏವಂ ಭಗವತಾ ರಾಜನ್ ವಸುದೇವ ಉದಾಹೃತಮ್ ।
ಶ್ರುತ್ವಾ ವಿನಷ್ಟನಾನಾಧೀಸ್ತೂಷ್ಣೀಂ ಪ್ರೀತಮನಾ ಅಭೂತ್
॥ ೨೬ ॥

ಅದಕ್ಕಾಗಿ ದೀನ ಜನರ ಹಿತೈಷಿಯೇ! ಶರಣಾಗತವತ್ಸಲನೇ! ಶರಣಾಗತರ ಸಂಸಾರಭಯವನ್ನು ದೂರಮಾಡುವಂತಹ ನಿನ್ನ ಚರಣಕಮಲಗಳಲ್ಲಿ ಶರಣಾಗತನಾಗಿದ್ದೇನೆ. ನನಗಿನ್ನು ಈ ಪ್ರಾಪಂಚಿಕ ವಿಷಯಗಳಲ್ಲಿ ಭೋಗಲಾಲಸೆಯು ಉಂಟಾಗದಂತೆ ಕೃಪೆಮಾಡು. ನಶ್ವರವಾದ ಈ ಶರೀರದಲ್ಲಿ ಆತ್ಮಬುದ್ಧಿಯನ್ನು ಹೊಂದಿ, ಸರ್ವೇಶ್ವರನಾದ ನಿನ್ನಲ್ಲಿ ಪುತ್ರನೆಂಬ ಬುದ್ಧಿಯನ್ನು ಹೊಂದಿದೆನು. ॥ ೧೯ ॥ ಶ್ರೀಹರಿಯೇ! ಹುಟ್ಟು ಸಾವುಗಳಿಲ್ಲದ ನೀನು ಧರ್ಮವನ್ನು ಪರಿಪಾಲಿಸಲಿಕ್ಕಾಗಿ ಪ್ರತಿಯುಗದಲ್ಲಿಯೂ ನಮ್ಮಿಬ್ಬರಿಗೂ ಮಗನಾಗಿ ಹುಟ್ಟುವೆನು ಎಂದು ನೀನು ಹುಟ್ಟಿದೊಡನೆಯೇ ಪ್ರಸೂತಿಗೃಹದಲ್ಲಿ ನಮಗೆ ಹೇಳಿದೆಯಲ್ಲವೇ? ಆಕಾಶದಂತೆ ನಿರ್ಲಿಪ್ತನಾಗಿರುವ ನೀನು ನಾನಾ ಅವತಾರಗಳನ್ನು ಧರಿಸುವೆ ಮತ್ತು ಪರಿತ್ಯಜಿಸುವೆ. ವ್ಯಾಪಕವಾದ ನಿನ್ನ ಲೀಲೈಶ್ವರ್ಯಗಳನ್ನು ಯಾರು ತಾನೇ ತಿಳಿಯಬಲ್ಲರು? ಎಲ್ಲ ಜನರೂ ನಿನ್ನ ಕೀರ್ತಿಯನ್ನೇ ಕೊಂಡಾಡುತ್ತಿರುವರು. ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಸುದೇವನ ಈ ವಚನಗಳನ್ನು ಕೇಳಿ ಯದುವಂಶ ಕುಲತಿಲಕ ಭಕ್ತವತ್ಸಲ ಭಗವಾನ್ ಶ್ರೀಕೃಷ್ಣನು ಮುಗುಳ್ನಕ್ಕನು. ಅವನು ವಿನಯದಿಂದ ತಲೆತಗ್ಗಿಸಿಕೊಂಡು ಮಧುರವಾಗಿ ಇಂತೆಂದನು. ॥ ೨೧ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಅಪ್ಪಾ! ನಾವು ನಿನ್ನ ಮಕ್ಕಳೇ ಆಗಿದ್ದೇವೆ. ನಮ್ಮನ್ನು ಕುರಿತೇ ನೀನು ಈ ತತ್ತ್ವಜ್ಞಾನದ ಉಪದೇಶವನ್ನು ಮಾಡಿರುವೆ. ನಿನ್ನ ಒಂದೊಂದು ಮಾತೂ ಕೂಡ ಯುಕ್ತಿಯುಕ್ತವೆಂದು ನಾವು ಭಾವಿಸುತ್ತೇವೆ. ॥ ೨೨ ॥ ತಂದೆಯೇ! ನಾನು, ನೀವು, ನಮ್ಮಣ್ಣ ಬಲರಾಮ, ದ್ವಾರಕೆಯ ಈ ಪ್ರಜೆಗಳೆಲ್ಲರೂ, ಸಂಪೂರ್ಣ ಚರಾಚರ ಜಗತ್ತು-ಸಮಸ್ತವೂ ನೀವು ಹೇಳಿದಂತೆ ಬ್ರಹ್ಮವಸ್ತುವೆಂದೇ ವಿಮರ್ಶಿಸಿ ತಿಳಿಯಬೇಕು. ॥ ೨೩ ॥ ತಂದೆಯೇ! ಆತ್ಮನಾದರೋ ಒಂದೇ ಆಗಿದೆ. ಆದರೆ ಅವನು ತನ್ನಲ್ಲೇ ಗುಣಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಗುಣಗಳ ಮೂಲಕ ಉಂಟಾದ ಪಂಚಭೂತಗಳಲ್ಲಿ ಒಂದೇ ಆಗಿದ್ದರೂ ಅನೇಕ, ಸ್ವಯಂಪ್ರಕಾಶನಾಗಿದ್ದರೂ ದೃಶ್ಯ, ತನ್ನ ಸ್ವರೂಪವೇ ಆಗಿದ್ದರೂ ತನ್ನಿಂದ ಭಿನ್ನ, ನಿತ್ಯನಾಗಿದ್ದರೂ ಅನಿತ್ಯ, ನಿರ್ಗುಣನಾಗಿದ್ದರೂ ಸಗುಣರೂಪದಿಂದ ಕಂಡುಬರುತ್ತಾನೆ. ॥ ೨೪ ॥ ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, – ಈ ಪಂಚಭೂತಗಳು ತಮ್ಮ ಕಾರ್ಯವಾದ ಘಟ-ಪಟಾದಿಗಳಲ್ಲಿ ಪ್ರಕಟ-ಅಪ್ರಕಟ, ದೊಡ್ಡದು-ಸಣ್ಣದು, ಹೆಚ್ಚು-ಕಡಿಮೆ, ಏಕ ಅನೇಕ ಹೀಗೆ ಕಂಡುಬರುತ್ತವೆ. ಆದರೆ ವಾಸ್ತವವಾಗಿ ಸತ್ತಾರೂಪದಿಂದ ಅವು ಒಂದೇ ಆಗಿರುವಂತೆಯೇ ಆತ್ಮನಲ್ಲಿಯೂ ಉಪಾಧಿಗಳ ಭೇದದಿಂದಲೇ ನಾನಾತ್ವದ ಪ್ರತೀತಿ ಆಗುತ್ತದೆ. ಅದಕ್ಕಾಗಿ 'ನಾನೇ ಎಲ್ಲವೂ ಆಗಿದ್ದೇನೆ' ಎಂಬ ನಿನ್ನ ಮಾತು ಸಮುಚಿತವೇ ಆಗಿದೆ. ॥ ೨೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಭಗವಾನ್ ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ವಸುದೇವನ ನಾನಾತ್ವ ಬುದ್ಧಿಯು ಹೊರಟುಹೋಯಿತು. ಆನಂದ ಮಗ್ನನಾಗಿ ಅವನ ಮಾತು ನಿಂತು ಹೋಯಿತು. ಮನಸ್ಸು ನಿರ್ವಿಷಯವಾಯಿತು. ॥ ೨೬ ॥

ಅಥ ತತ್ರ ಕುರುಶ್ರೇಷ್ಠ ದೇವಕೀ ಸರ್ವದೇವತಾ ।
ಶ್ರುತ್ವಾಽಽನೀತಂ ಗುರೋಃ ಪುತ್ರಮಾತ್ಮಜಾಭ್ಯಾಂ ಸುವಿಸ್ಮಿತಾ
॥ ೨೭ ॥

ಕೃಷ್ಣರಾಮೌ ಸಮಾಶ್ರಾವ್ಯ ಪುತ್ರಾನ್ ಕಂಸವಿಹಿಂಸಿತಾನ್ ।
ಸ್ಮರಂತೀ ಕೃಪಣಂ ಪ್ರಾಹ ವೈಕ್ಲವ್ಯಾದಶ್ರುಲೋಚನಾ
॥ ೨೮ ॥

*ದೇವಕ್ಯುವಾಚ*

ರಾಮ ರಾಮಾಪ್ರಮೇಯಾತ್ಮನ್ ಕೃಷ್ಣ ಯೋಗೇಶ್ವರೇಶ್ವರ ।
ವೇದಾಹಂ ವಾಂ ವಿಶ್ವಸೃಜಾಮೀಶ್ವರಾವಾದಿಪೂರುಷೌ
॥ ೨೯ ॥

ಕಾಲವಿಧ್ವಸ್ತಸತ್ತ್ವಾನಾಂ ರಾಜ್ಞಾಮುಚ್ಛಾಸ್ತ್ರವರ್ತಿನಾಮ್ ।
ಭೂಮೇರ್ಭಾರಾಯಮಾಣಾನಾಮವತೀರ್ಣೌ ಕಿಲಾದ್ಯ ಮೇ
॥ ೩೦ ॥

ಯಸ್ಯಾಂಶಾಂಶಾಂಶಭಾಗೇನ ವಿಶ್ವೋತ್ಪತ್ತಿಲಯೋದಯಾಃ ।
ಭವಂತಿ ಕಿಲ ವಿಶ್ವಾತ್ಮಂಸ್ತಂ ತ್ವಾದ್ಯಾಹಂ ಗತಿಂ ಗತಾ
॥ ೩೧ ॥

ಚಿರಾನ್ಮೃತಸುತಾದಾನೇ ಗುರುಣಾ ಕಾಲಚೋದಿತೌ ।
ಆನಿನ್ಯಥುಃ ಪಿತೃಸ್ಥಾನಾದ್ಗುರವೇ ಗುರುದಕ್ಷಿಣಾಮ್
॥ ೩೨ ॥

ತಥಾ ಮೇ ಕುರುತಂ ಕಾಮಂ ಯುವಾಂ ಯೋಗೇಶ್ವರೇಶ್ವರೌ ।
ಭೋಜರಾಜಹತಾನ್ಪುತ್ರಾನ್ ಕಾಮಯೇ ದ್ರಷ್ಟುಮಾಹೃತಾನ್
॥ ೩೩ ॥

*ಋಷಿರುವಾಚ*

ಏವಂ ಸಂಚೋದಿತೌ ಮಾತ್ರಾ ರಾಮಃ ಕೃಷ್ಣಶ್ಚ ಭಾರತ ।
ಸುತಲಂ ಸಂವಿವಿಶತುರ್ಯೋಗಮಾಯಾಮುಪಾಶ್ರಿತೌ
॥ ೩೪ ॥

ತಸ್ಮಿನ್ಪ್ರವಿಷ್ಟಾವುಪಲಭ್ಯ ದೈತ್ಯರಾಡ್
ವಿಶ್ವಾತ್ಮದೈವಂ ಸುತರಾಂ ತಥಾಽಽತ್ಮನಃ ।
ತದ್ದರ್ಶನಾಹ್ಲಾದಪರಿಪ್ಲುತಾಶಯಃ
ಸದ್ಯಃ ಸಮುತ್ಥಾಯ ನನಾಮ ಸಾನ್ವಯಃ ॥ ೩೫ ॥

ಕುರುಶ್ರೇಷ್ಠನೇ! ಆ ಸಮಯದಲ್ಲಿ ಅಲ್ಲಿ ಸಮಸ್ತ ದೇವತಾ ಸ್ವರೂಪಳಾದ ದೇವಕಿಯೂ ಕುಳಿತಿದ್ದಳು. ಬಹಳ ಹಿಂದೆ ಸತ್ತು ಹೋದ ಗುರುಪುತ್ರನನ್ನು ಶ್ರೀಕೃಷ್ಣ-ಬಲರಾಮರು ಯಮಲೋಕ ದಿಂದ ಮರಳಿತಂದಿದ್ದರೆಂದು ಕೇಳಿದ್ದ ಆಕೆಯು ಅತ್ಯಂತ ವಿಸ್ಮಿತ ಳಾಗಿದ್ದಳು. ॥ ೨೭ ॥ ಆಗ ಅವಳಿಗೆ ಕಂಸನು ಕೊಂದುಹಾಕಿದ ತನ್ನ ಆರು ಹಸುಳೆಗಳ ನೆನಪಾಯಿತು. ಒಡನೆಯೇ ಮನಸ್ಸು ಕಳವಳ ಗೊಂಡಿತು. ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಕರುಣಾಜನಕ ಮಾತುಗಳಿಂದ ಆಕೆಯು ಬಲರಾಮ-ಶ್ರೀಕೃಷ್ಣರನ್ನು ಸಂಬೋಧಿಸಿ ಇಂತೆಂದಳು - ॥ ೨೮ ॥

**ದೇವಕಿಯು ಹೇಳಿದಳು** - ಅಪ್ರಮೇಯಾತ್ಮನಾದ ಲೋಕಾಭಿ ರಾಮನಾದ ಬಲರಾಮನೇ! ಯೋಗೇಶ್ವರರಿಗೂ ಈಶ್ವರನಾದ ಶ್ರೀಕೃಷ್ಣನೇ! ನೀವಿಬ್ಬರೂ ಪ್ರಜಾಪತಿಗಳೂ ಈಶ್ವರರಾದ ಆದಿ ಪುರುಷರೆಂಬುದನ್ನು ನಾನು ತಿಳಿದಿರುತ್ತೇನೆ. ॥ ೨೯ ॥ ಕಾಲದ ಮಹಿಮೆಯಿಂದ ಸತ್ತ್ವಗುಣವನ್ನು ಕಳೆದುಕೊಂಡು (ತಾಮಸಿ ಗಳು), ಈ ಕಾರಣದಿಂದಲೇ ಶಾಸ್ತ್ರನಿರ್ದೇಶಗಳನ್ನು ಉಲ್ಲಂಘಿಸುತ್ತಿ ರುವ ಸ್ವೇಚ್ಛಾಚಾರಿಗಳಾದ, ಭೂಮಿಗೆ ಭಾರವಾದ ರಾಜರನ್ನು ಸಂಹರಿಸುವ ಸಲುವಾಗಿಯೇ ನೀವಿಬ್ಬರೂ ನನ್ನ ಗರ್ಭದಲ್ಲಿ ಅವತರಿಸಿರುವಿರೆಂಬುದನ್ನೂ ನಾನು ತಿಳಿದಿರುವೆನು. ॥ ೩೦ ॥ ವಿಶ್ವಾತ್ಮನೇ! ನಿನ್ನ ಪುರುಷರೂಪದ ಅಂಶದಿಂದ ಉತ್ಪನ್ನವಾದ ಮಾಯೆಯಿಂದ ಗುಣಗಳು ಹುಟ್ಟುತ್ತವೆ ಮತ್ತು ಅವುಗಳ ಲೇಶ ಮಾತ್ರ ಅಂಶದಿಂದ ಜಗತ್ತಿನ ಉತ್ಪತ್ತಿ, ವಿಕಾಸ, ಲಯಗಳಾಗುತ್ತವೆ. ಈಗ ನಾನು ಅಂತಃಕರಣಪೂರ್ವಕವಾಗಿ ನಿನಗೆ ಶರಣಾಗತ ಳಾಗಿದ್ದೇನೆ. ॥ ೩೧ ॥ ನಿಮ್ಮ ಗುರುಗಳಾದ ಸಾಂದೀಪನಿಮುನಿಗಳ ಪುತ್ರನು ತೀರಿಹೋಗಿ ಬಹಳ ದಿನಗಳಾಗಿದ್ದವು. ಗುರುದಕ್ಷಿಣೆ ಯನ್ನು ಕೊಡುವುದಕ್ಕಾಗಿ ಗುರುಗಳ ಆಜ್ಞೆಯಂತೆ ಹಾಗೂ ಕಾಲದ ಪ್ರೇರಣೆಯಂತೆ ನೀವಿಬ್ಬರೂ ಅವರ ಸತ್ತುಹೋದ ಪುತ್ರನನ್ನು ಯಮಲೋಕದಿಂದ ಮರಳಿತಂದು ಕೊಟ್ಟಿರಿ ಎಂದೂ ನಾನು ಕೇಳಿದ್ದೇನೆ. ॥ ೩೨ ॥ ನೀವಿಬ್ಬರೂ ಯೋಗೇಶ್ವರರಿಗೂ ಈಶ್ವರ ರಾಗಿರುವಿರಿ. ಆದರಿಂದಾಗಿ ಇಂದು ನನ್ನ ಅಭಿಲಾಷೆಯನ್ನು ಪೂರ್ಣ ಗೊಳಿಸಿರಿ. ನೀವಿಬ್ಬರೂ ಕಂಸನು ಅಂದು ಕೊಂದು ಹಾಕಿದ ನನ್ನ ಪುತ್ರರನ್ನು ತಂದು ಕೊಡಿರಿ. ಅವರನ್ನು ಕಣ್ತುಂಬಾ ನೋಡ ಬೇಕೆಂದು ನಾನು ಬಯಸುತ್ತೇನೆ. ॥ ೩೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪ್ರಿಯ ಪರೀಕ್ಷಿತನೇ! ತಾಯಿಯಾದ ದೇವಕಿಯ ಈ ಮಾತನ್ನು ಕೇಳಿ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರಿಬ್ಬರೂ ಯೋಗಮಾಯೆಯನ್ನು ಆಶ್ರಯಿಸಿ ಸುತಲಲೋಕವನ್ನು ಪ್ರವೇಶಿಸಿದರು. ॥ ೩೪ ॥ ಜಗದಾತ್ಮನೂ, ಇಷ್ಟದೇವನೂ, ತನ್ನ ಪರಮಸ್ವಾಮಿಯೂ ಆದ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ತನ್ನ ಸುತಲಲೋಕಕ್ಕೆ ಆಗಮಿಸಿರು ವರು ಎಂದು ನೋಡಿದ ಬಲಿಚಕ್ರವರ್ತಿಯ ಮನಸ್ಸು ಆನಂದ ಸಾಗರದಲ್ಲಿ ಮುಳುಗಿ ಹೋಯಿತು. ಅವನು ಒಡನೆಯೇ ಆಸನ ದಿಂದೆದ್ದು ಪರಿವಾರ ಸಹಿತನಾಗಿ ಭಗವಂತನ ಚರಣಗಳಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೩೫ ॥

ತಯೋಃ ಸಮಾನೀಯ ವರಾಸನಂ ಮುದಾ
ನಿವಿಷ್ಟಯೋಸ್ತತ್ರ ಮಹಾತ್ಮನೋಸ್ತಯೋಃ ।
ದಧಾರ ಪಾದಾವವನಿಜ್ಯ ತಜ್ಜಲಂ
ಸವೃಂದ ಆಬ್ರಹ್ಮ ಪುನದ್ಯದಂಬು ಹ ॥ ೩೬ ॥

ಸಮರ್ಹಯಾಮಾಸ ಸ ತೌ ವಿಭೂತಿಭಿ-
ರ್ಮಹಾರ್ಹವಸ್ತ್ರಾಭರಣಾನುಲೇಪನೈಃ ।
ತಾಂಬೂಲದೀಪಾಮೃತಭಕ್ಷಣಾದಿಭಿಃ
ಸ್ವಗೋತ್ರವಿತ್ತಾತ್ಮ ಸಮರ್ಪಣೇನ ಚ ॥ ೩೭ ॥

ಸ ಇಂದ್ರಸೇನೋ ಭಗವತ್ಪದಾಂಬುಜಂ
ಬಿಭ್ರನ್ಮುಹುಃ ಪ್ರೇಮವಿಭಿನ್ನಯಾ ಧಿಯಾ ।
ಉವಾಚ ಹಾನಂದಜಲಾಕುಲೇಕ್ಷಣಃ
ಪ್ರಹೃಷ್ಟರೋಮಾ ನೃಪ ಗದ್ಗದಾಕ್ಷರಮ್ ॥ ೩೮ ॥

ಬಲಿರುವಾಚ

ನಮೋಽನಂತಾಯ ಬೃಹತೇ ನಮಃ ಕೃಷ್ಣಾಯ ವೇಧಸೇ ।
ಸಾಂಖ್ಯಯೋಗವಿತಾನಾಯ ಬ್ರಹ್ಮಣೇ ಪರಮಾತ್ಮನೇ ॥ ೩೯ ॥

ದರ್ಶನಂ ವಾಂ ಹಿ ಭೂತಾನಾಂ ದುಷ್ಪ್ರಾಪಂ ಚಾಪ್ಯದುರ್ಲಭಮ್ ।
ರಜಸ್ತಮಃಸ್ವಭಾವಾನಾಂ ಯನ್ನಃ ಪ್ರಾಪ್ತೌ ಯದೃಚ್ಛಯಾ ॥ ೪೦ ॥

ದೈತ್ಯದಾನವಗಂಧರ್ವಾಃ ಸಿದ್ಧವಿದ್ಯಾಧ್ರಚಾರಣಾಃ ।
ಯಕ್ಷರಕ್ಷಃಪಿಶಾಚಾಶ್ಚ ಭೂತಪ್ರಮಥನಾಯಕಾಃ ॥ ೪೧ ॥

ವಿಶುದ್ಧಸತ್ತ್ವಧಾಮ್ನ್ಯದ್ಧಾ ತ್ವಯಿ ಶಾಸ್ತ್ರಶರೀರಿಣಿ ।
ನಿತ್ಯಂ ನಿಬದ್ಧವೈರಾಸ್ತೇ ವಯಂ ಚಾನ್ಯೇ ಚ ತಾದೃಶಾಃ ॥ ೪೨ ॥

ಕೇಚನೋದ್ಬದ್ಧವೈರೇಣ ಭಕ್ತ್ಯಾ ಕೇಚನ ಕಾಮತಃ ।
ನ ತಥಾ ಸತ್ತ್ವಸಂರಬ್ಧಾಃ ಸಂನಿಕೃಷ್ಟಾಃ ಸುರಾದಯಃ ॥ ೪೩ ॥

ಇದಮಿತ್ಥಮಿತಿ ಪ್ರಾಯ ಸ್ತವ ಯೋಗೇಶ್ವರೇಶ್ವರ ।
ನ ವಿದಂತ್ಯಪಿ ಯೋಗೇಶಾ ಯೋಗಮಾಯಾಂ ಕುತೋ ವಯಮ್ ॥ ೪೪ ॥

ಆನಂದತುಂದಿಲನಾದ ದೈತ್ಯರಾಜ ಬಲಿಯು ಶ್ರೀಕೃಷ್ಣ-ಬಲರಾಮರನ್ನು ಶ್ರೇಷ್ಠವಾದ ಸಿಂಹಾಸನಗಳಲ್ಲಿ ಕುಳ್ಳಿರಿಸಿದನು. ಅವರು ಸುಖಾಸೀನರಾದ ಬಳಿಕ ಅವರಿಬ್ಬರ ದಿವ್ಯಪಾದಗಳನ್ನು ತೊಳೆದು ಆ ಚರಣೋದಕವನ್ನು ಪರಿವಾರ ಸಹಿತ ತನ್ನ ತಲೆಯಲ್ಲಿ ಧರಿಸಿಕೊಂಡನು. ಪರೀಕ್ಷಿತನೇ! ಭಗವಂತನ ಚರಣೋದಕವು ಬ್ರಹ್ಮಪರ್ಯಂತವಾಗಿ ಸಮಸ್ತ ಜಗತ್ತನ್ನು ಪವಿತ್ರ ಗೊಳಿಸುತ್ತದೆ. ॥ ೩೬ ॥ ಅನಂತರ ದೈತ್ಯರಾಜನಾದ ಬಲಿಯು ಬಹುಮೂಲ್ಯವಾದ ವಸ್ತ್ರ ಆಭೂಷಣ, ಚಂದನ, ತಾಂಬೂಲ, ಧೂಪ, ದೀಪ, ಅಮೃತೋಪಮವಾದ ಭೋಜನ ಹಾಗೂ ಇತರ ಸಾಮಗ್ರಿಗಳಿಂದ ಭಗವಂತನನ್ನು ಪೂಜಿಸಿ, ತನ್ನ ಸಮಸ್ತ ಪರಿವಾರ, ಧನ, ಶರೀರಾದಿಗಳನ್ನು ಅವನ ಚರಣಗಳಲ್ಲಿ ಸಮರ್ಪಿಸಿದನು. ॥ ೩೭ ॥ ಪರೀಕ್ಷಿತನೇ! ಬಲಿಚಕ್ರವರ್ತಿಯು ಪದೇ-ಪದೇ ಭಗವಂತನ ಚರಣಕಮಲಗಳನ್ನು ತನ್ನ ವಕ್ಷಸ್ಥಳದಲ್ಲಿ ಶಿರದಲ್ಲಿರಿಸಿಕೊಂಡು ಪ್ರೇಮಾನಂದದಿಂದ ವಿಹ್ವಲನಾದನು. ಕಣ್ಣುಗಳಿಂದ ಆನಂದಾಶ್ರುಗಳು ಹರಿಯತೊಡಗಿದವು. ರೋಮಕೋಟಿಗಳು ನಿಮಿರಿನಿಂತವು. ಗದ್ಗದಕಂಠದಿಂದ ಭಗವಂತನನ್ನು ಸ್ತುತಿಸತೊಡಗಿದನು. ॥ ೩೮ ॥

**ದೈತ್ಯರಾಜ ಬಲಿಯು ಹೇಳಿದನು** – ಬಲರಾಮನೇ! ನೀನು ಅನಂತನಾಗಿರುವೆ. ಮಹಾಮಹಿಮನಾದ ನಿನ್ನೊಳಗೆ ಶೇಷನೇ ಮೊದಲಾದ ಸಮಸ್ತ ವಿಗ್ರಹಗಳು ಅಂತರ್ಭೂತವಾಗಿವೆ. ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ಸಮಸ್ತ ಜಗತ್ತನ್ನು ನೀನೇ ಸೃಷ್ಟಿಸಿರುವೆ. ಜ್ಞಾನಯೋಗ-ಭಕ್ತಿಯೋಗಗಳ ಪ್ರವರ್ತಕನೂ ನೀನೇ ಆಗಿದ್ದೀಯೆ. ನೀನೇ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನು. ನಾನು ನಿಮ್ಮಿಬ್ಬರಿಗೂ ನಮಸ್ಕರಿಸುತ್ತೇನೆ. ॥ ೩೯ ॥ ಭಗವಂತಾ! ನಿಮ್ಮಿಬ್ಬರ ದರ್ಶನವು ಪ್ರಾಣಿಗಳಿಗೆ ಅತ್ಯಂತ ದುರ್ಲಭವಾದುದು. ಹೀಗಿದ್ದರೂ ನಿನ್ನ ಕೃಪೆಯಿಂದ ಅದು ಸುಲಭವಾಗುತ್ತದೆ. ಏಕೆಂದರೆ, ಇಂದು ನೀನು ದಯೆಗೈದು ರಜೋಗುಣೀ ಹಾಗೂ ತಮೋಗುಣಿಗಳಾದ ನಮ್ಮಂತಹ ದೈತ್ಯರಿಗೂ ದರ್ಶನವಿತ್ತಿಹೆ. ॥ ೪೦ ॥ ಪ್ರಭುವೇ! ಸಾಕ್ಷಾತ್ ವೇದಮಯವೂ, ವಿಶುದ್ಧಸತ್ತ್ವಮಯವೂ ಆದ ನಿನ್ನ ಶ್ರೀವಿಗ್ರಹವನ್ನು ನಾವು ಮತ್ತು ನಮ್ಮಂತೆಯೇ ಇರುವ ಇತರ ದೈತ್ಯರು ದ್ವೇಷಿಸುತ್ತೇವೆ. ಹಾಗೆಯೇ ದಾನವರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ ಚಾರಣರೂ, ಯಕ್ಷರೂ, ರಾಕ್ಷಸರೂ, ಪಿಶಾಚಿಗಳೂ ಭೂತ-ಪ್ರಮಥಾದಿಗಳು ನಿನ್ನನ್ನು ಭಜಿಸುವುದಿರಲಿ ನಿನ್ನಲ್ಲಿ ಸದಾಕಾಲ ದೃಢವಾದ ವೈರವನ್ನೇ ಇರಿಸುತ್ತಾರೆ. ಆದರಿಂದಲೇ ನಮ್ಮಲ್ಲಿ ಅನೇಕರು ದೃಢವಾದ ವೈರಭಾವದಿಂದ, ಕೆಲವರು ಭಕ್ತಿಯಿಂದ, ಕೆಲವರು ಕಾಮನೆಯಿಂದ ನಿನ್ನನ್ನು ಸ್ಮರಿಸಿ – ನಿನ್ನ ಸನಿಹದಲ್ಲೇ ಇರುವ ಸತ್ತ್ವಪ್ರಧಾನರಾದ ದೇವತೆಗಳಿಗೂ ಪ್ರಾಪ್ತವಾಗದಿರುವ ಆ ಪರಮಪದವನ್ನು ಪಡೆದುಕೊಂಡಿರುವರು. ॥ ೪೧-೪೩ ॥ ಯೋಗೇಶ್ವರರ ಅಧೀಶ್ವರನೇ! ನಿನ್ನ ಯೋಗಮಾಯೆಯು ಹೀಗೆಯೇ ಇದೆ ಎಂಬುದನ್ನು ದೊಡ್ಡ-ದೊಡ್ಡ ಯೋಗೇಶ್ವರರೂ ಪ್ರಾಯಶಃ ತಿಳಿಯಲಾರರು. ಹೀಗಿರುವಾಗ ನಮ್ಮಂತಹವರ ಮಾತೇನು? ॥ ೪೪ ॥

ತನ್ನಃ ಪ್ರಸೀದ ನಿರಪೇಕ್ಷವಿಮೃಗ್ಯಯುಷ್ಮತ್-
ಪಾದಾರವಿಂದಧಿಷಣಾನ್ಯಗೃಹಾಂಧಕೂಪಾತ್ ।
ನಿಷ್ಕ್ರಮ್ಯ ವಿಶ್ವಶರಣಾಂಘ್ರ್ಯುಪಲಬ್ಧವೃತ್ತಿಃ
ಶಾಂತೋ ಯಥೈಕ ಉತ ಸರ್ವಸಖೈಶ್ಚರಾಮಿ ॥ ೪೫ ॥

ಶಾಧ್ಯಸ್ಮಾನೀಶಿತವ್ಯೇಶ ನಿಷ್ಪಾಪಾನ್ಕುರು ನಃ ಪ್ರಭೋ ।
ಪುಮಾನ್ಯಚ್ಛ್ರದ್ಧಯಾऽऽತಿಷ್ಠಂಶ್ಚೋದನಾಯಾ ವಿಮುಚ್ಯತೇ
॥ ೪೬ ॥

*ಶ್ರೀಭಗವಾನುವಾಚ*

ಆಸನ್ ಮರೀಚೇಃ ಷಟ್ ಪುತ್ರಾ
ಊರ್ಣಾಯಾಂ ಪ್ರಥಮೇಽಂತರೇ ।
ದೇವಾಃ ಕಂ ಜಹಸುರ್ವೀಕ್ಷ್ಯ
ಸುತಾಂ ಯಭಿತುಮುದ್ಯತಮ್ ॥ ೪೭ ॥

ತೇನಾಸುರೀಮಗನ್ಯೋನಿಮಧುನಾವದ್ಯಕರ್ಮಣಾ ।
ಹಿರಣ್ಯಕಶಿಪೋರ್ಜಾತಾ ನೀತಾಸ್ತೇ ಯೋಗಮಾಯಯಾ
॥ ೪೮ ॥

ದೇವಕ್ಯಾ ಉದರೇ ಜಾತಾ ರಾಜನ್ ಕಂಸವಿಹಿಂಸಿತಾಃ ।
ಸಾ ತಾನ್ ಶೋಚತ್ಯಾತ್ಮಜಾನ್ಸ್ವಾಂಸ್ತ ಇಮೇಽಧ್ಯಾಸತೇಽಂತಿಕೇ
॥ ೪೯ ॥

ಇತ ಏತಾನ್ಪ್ರಣೇಷ್ಯಾಮೋ ಮಾತೃಶೋಕಾಪನುತ್ತಯೇ ।
ತತಃ ಶಾಪಾದ್ವಿನಿರ್ಮುಕ್ತಾ ಲೋಕಂ ಯಾಸ್ಯಂತಿ ವಿಜ್ವರಾಃ
॥ ೫೦ ॥

ಸ್ಮರೋದ್ಗೀಥಃ ಪರಿಷ್ವಂಗಃ ಪತಂಗಃ ಕ್ಷುದ್ರಭೃದ್ಘೃಣೀ ।
ಷಡಿಮೇ ಮತ್ಪ್ರಸಾದೇನ ಪುನರ್ಯಾಸ್ಯಂತಿ ಸದ್ಗತಿಮ್
॥ ೫೧ ॥

ಇತ್ಯುಕ್ತ್ವಾ ತಾನ್ಸಮಾದಾಯ ಇಂದ್ರಸೇನೇನ ಪೂಜಿತೌ ।
ಪುನರ್ದ್ವಾರವತೀಮೇತ್ಯ ಮಾತುಃ ಪುತ್ರಾನಯಚ್ಛತಾಮ್
॥ ೫೨ ॥

ತಾನ್ ದೃಷ್ಟ್ವಾ ಬಾಲಕಾನ್ ದೇವೀ ಪುತ್ರಸ್ನೇಹಸ್ನುತಸ್ತನೀ ।
ಪರಿಷ್ವಜ್ಯಾಂಕಮಾರೋಪ್ಯ ಮೂರ್ಧ್ನ್ಯಜಿಘ್ರದಭೀಕ್ಷ್ಣಶಃ
॥ ೫೩ ॥

ಆದಕ್ಕಾಗಿ ಸ್ವಾಮಿ ! ಯಾವುದರ ಅಪೇಕ್ಷೆಯೂ ಇಲ್ಲದಿರುವ ಪರಮಹಂಸರು ಸದಾ ಹುಡುಕುತ್ತಿರುವ ನಿನ್ನ ಚರಣಕಮಲಗಳಲ್ಲಿ ನನ್ನ ಚಿತ್ತವೃತ್ತಿಯು ನೆಲೆಗೊಳ್ಳುವಂತೆ ನನ್ನ ಮೇಲೆ ಕೃಪೆಮಾಡು. ಅದನ್ನು ಆಶ್ರಯಿಸಿದ ನಾನು ಅದಕ್ಕಿಂತ ಭಿನ್ನವಾದ ಈ ಅಂಧಕಾರಮಯ ಸಂಸಾರಕೂಪದಿಂದ ಪಾರಾಗಿ ಹೋಗುವೆನು. ಪ್ರಭೋ ! ಹೀಗೆ ಸಮಸ್ತ ಜಗತ್ತಿಗೆ ಏಕಮಾತ್ರ ಆಶ್ರಯವಾದ ನಿನ್ನ ಚರಣಕಮಲಗಳಲ್ಲಿ ಶರಣಾಗಿ ಶಾಂತನಾಗುವೆನು. ಒಬ್ಬಂಟಿಗನಾಗಿ ಸಂಚರಿಸುವೆನು. ಯಾರದಾದರೂ ಸಂಗವನ್ನು ಮಾಡಲೇಬೇಕೆಂದಾಗ ಸಮಸ್ತರ ಪರಮ ಹಿತೈಷಿಗಳಾದ ಸಂತರ ಸಂಗವೇ ಮಾಡುವೆನು. ॥ ೪೫ ॥ ಪ್ರಭೋ ! ನೀನು ಸಮಸ್ತ ಚರಾಚರ ಜಗತ್ತಿನ ನಿಯಾಮಕನೂ, ಒಡೆಯನೂ ಆಗಿರುವೆ. ನೀನು ನಮಗೆ ಆಜ್ಞಾಪಿಸಿ ನಿಷ್ಪಾಪರನ್ನಾಗಿ ಮಾಡು. ನಮ್ಮ ಪಾಪಗಳನ್ನು ನಾಶಮಾಡಿಬಿಡು. ಏಕೆಂದರೆ, ಶ್ರದ್ಧೆಯಿಂದ ನಿನ್ನ ಆಜ್ಞೆಯನ್ನು ಪಾಲಿಸುವವನು ವಿಧಿ-ನಿಷೇಧಗಳ ಬಂಧನಗಳಿಂದ ಬಿಡುಗಡೆ ಹೊಂದುವನು. ॥ ೪೬ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ರಾಜನೇ ! ಸ್ವಾಯಂಭುವ ಮನ್ವಂತರಗಳಲ್ಲಿ ಪ್ರಜಾಪತಿಯಾದ ಮರೀಚಿಯ ಪತ್ನೀ ಊರ್ಣಾಳ ಗರ್ಭದಿಂದ ಆರು ಮಂದಿ ಪುತ್ರರು ಹುಟ್ಟಿದ್ದರು. ಅವರೆಲ್ಲರೂ ದೇವತೆಗಳೇ ಆಗಿದ್ದರು. ಒಮ್ಮೆ ಬ್ರಹ್ಮನು ತನ್ನ ಪುತ್ರಿಯರೊಂದಿಗೆ ಸಮಾಗಮ ಮಾಡಲಿದ್ದುದನ್ನು ಕಂಡು ಅವರು ನಕ್ಕುಬಿಟ್ಟರು. ॥ ೪೭ ॥ ಇಂತಹ ಉಪಹಾಸರೂಪವಾದ ಅಪರಾಧದಿಂದ ಅವರಿಗೆ ಬ್ರಹ್ಮದೇವರು ಶಾಪವನ್ನಿತ್ತರು ಹಾಗೂ ಅವರು ಅಸುರ ಯೋನಿಯಲ್ಲಿ ಹಿರಣ್ಯಕಶಿಪುವಿನ ಪುತ್ರರಾಗಿ ಹುಟ್ಟಿದರು. ಆಗ ಯೋಗಮಾಯೆಯು ಅವರನ್ನು ಅಲ್ಲಿಂದ ತಂದು ದೇವಕಿಯ ಗರ್ಭದಲ್ಲಿರಿಸಿದಳು. ಅವರು ಹುಟ್ಟುತ್ತಲೇ ಕಂಸನು ಕೊಂದುಹಾಕಿದನು. ದೈತ್ಯರಾಜನೇ! ನನ್ನ ತಾಯಿಯಾದ ದೇವಕಿಯು ಆ ಪುತ್ರರಿಗಾಗಿ ಅತ್ಯಂತ ಶೋಕಾತುರಳಾಗಿರುವಳು. ಆ ಮಕ್ಕಳು ನಿನ್ನ ಬಳಿಯಲ್ಲೇ ಇದ್ದಾರೆ. ॥ ೪೮-೪೯ ॥ ಆದ್ದರಿಂದ ನಾವು ನಮ್ಮ ತಾಯಿಯ ಶೋಕವನ್ನು ದೂರಗೊಳಿಸಲಿಕ್ಕಾಗಿ ಇವರನ್ನು ಇಲ್ಲಿಂದ ಕೊಂಡುಹೋಗುವೆವು. ಅನಂತರ ಇವರು ಶಾಪದಿಂದ ಮುಕ್ತರಾಗಿ ಆನಂದಭರಿತರಾಗಿ ತಮ್ಮ ಲೋಕಗಳಿಗೆ ಹೊರಟುಹೋಗುವರು. ॥ ೫೦ ॥ ಈಗ ನಿನ್ನ ಬಳಿಯಲ್ಲಿರುವ ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭೃತ್ ಮತ್ತು ಘೃಣಿ – ಎಂಬ ಈ ಮಕ್ಕಳು. ನನ್ನ ಕೃಪೆಯಿಂದಾಗಿ ಪುನಃ ಅವರಿಗೆ ಸದ್ಗತಿಯು ದೊರೆಯುತ್ತದೆ. ॥ ೫೧ ॥ ಪರೀಕ್ಷಿತನೇ ! ಇಷ್ಟು ಹೇಳಿ ಭಗವಾನ್ ಶ್ರೀಕೃಷ್ಣನು ಸುಮ್ಮನಾದನು. ದೈತ್ಯರಾಜ ಬಲಿಚಕ್ರವರ್ತಿಯು ಪುನಃ ಅವರನ್ನು ಪೂಜಿಸಿದನು. ಅನಂತರ ಶ್ರೀಕೃಷ್ಣ ಬಲರಾಮರು ಆ ಮಕ್ಕಳನ್ನು ಕರೆದುಕೊಂಡು ದ್ವಾರಕೆಗೆ ಬಂದು ತಾಯಿ ದೇವಕಿಗೆ ಒಪ್ಪಿಸಿದರು. ॥ ೫೨ ॥ ಆ ಬಾಲಕರನ್ನು ನೋಡಿ ದೇವಕೀದೇವಿಯ ಹೃದಯ ವಾತ್ಸಲ್ಯದಿಂದ ತುಂಬಿಹೋಗಿ ಸ್ತನಗಳಿಂದ ಹಾಲು ಒಸರತೊಡಗಿತು. ಆಕೆಯು ಮತ್ತೆ-ಮತ್ತೆ ಅವರನ್ನು ಆಲಿಂಗಿಸಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿದಳು. ॥ ೫೩ ॥

ಅಪಾಯಯತ್ ಸ್ತನಂ ಪ್ರೀತಾ ಸುತಸ್ಪರ್ಶಪರಿಪ್ಲುತಾ ।
ಮೋಹಿತಾ ಮಾಯಯಾ ವಿಷ್ಣೋರ್ಯಯಾ ಸೃಷ್ಟಿಃ ಪ್ರವರ್ತತೇ
॥ ೫೪ ॥

ಪುತ್ರರ ಸ್ಪರ್ಶದಿಂದ ಆನಂದಸಾಗರದಲ್ಲಿ ಮುಳುಗಿಹೋಗಿದ್ದ ದೇವಕಿಯು ಅವರೆಲ್ಲರಿಗೂ ಸ್ತನ್ಯಪಾನ ಮಾಡಿಸಿದಳು. ಆ ಸಮಯದಲ್ಲಿ ಆಕೆಯು ಸೃಷ್ಟಿಗೆ ಮೂಲಕಾರಣನಾದ ಭಗವಾನ್ ಶ್ರೀವಿಷ್ಣುವಿನ ಯೋಗಮಾಯೆಯಿಂದ ಮೋಹಿತಳಾಗಿದ್ದಳು. ॥ ೫೪ ॥

ಪೀತ್ವಾಮೃತಂ ಪಯಸ್ತಸ್ಯಾಃ ಪೀತಶೇಷಂ ಗದಾಭೃತಃ ।
ನಾರಾಯಣಾಂಗಸಂಸ್ಪರ್ಶಪ್ರತಿಲಬ್ಧಾತ್ಮದರ್ಶನಾಃ
॥ ೫೫ ॥

ಪರೀಕ್ಷಿತನೇ! ದೇವಕಿಯ ಎದೆ ಹಾಲು ಶ್ರೀಕೃಷ್ಣನು ಉಂಡು ಮಿಕ್ಕಿದ್ದರಿಂದ ಅದು ಅಮೃತಮಯವೇ ಆಗಿತ್ತು. ಆ ಬಾಲಕರೂ ಆ ಅಮೃತಮಯ ಎದೆಹಾಲನ್ನು ಕುಡಿದುದರಿಂದಲೂ, ಶ್ರೀಕೃಷ್ಣನ ಅಂಗಸ್ಪರ್ಶದಿಂದಲೂ ಯೋಗಿಗಳಿಗೂ ದುರ್ಲಭವಾದ ಆತ್ಮ ಸಾಕ್ಷಾತ್ಕಾರವನ್ನೇ ಪಡೆದುಕೊಂಡರು. ॥ ೫೫ ॥

ತೇ ನಮಸ್ಕೃತ್ಯ ಗೋವಿಂದಂ ದೇವಕೀಂ ಪಿತರಂ ಬಲಮ್ ।
ಮಿಷತಾಂ ಸರ್ವಭೂತಾನಾಂ ಯಯುರ್ಧಾಮ ದಿವೌಕಸಾಮ್
॥ ೫೬ ॥

ಅನಂತರ ಆ ಬಾಲಕರು ಭಗವಾನ್ ಶ್ರೀಕೃಷ್ಣನಿಗೆ, ತಾಯಿ ದೇವಕಿಗೆ, ತಂದೆ ವಸುದೇವನಿಗೆ ಮತ್ತು ಬಲರಾಮನಿಗೆ ನಮಸ್ಕಾರ ಮಾಡಿ ಎಲ್ಲರೂ ನೋಡುತ್ತಿರುವಂತೆಯೇ ದೇವಲೋಕಕ್ಕೆ ಹೊರಟು ಹೋದರು. ॥ ೫೬ ॥

ತಂ ದೃಷ್ಟ್ವಾ ದೇವಕೀ ದೇವೀ ಮೃತಾಗಮನನಿರ್ಗಮಮ್ ।
ಮೇನೇ ಸುವಿಸ್ಮಿತಾ ಮಾಯಾಂ ಕೃಷ್ಣಸ್ಯ ರಚಿತಾಂ ನೃಪ
॥ ೫೭ ॥

ಪರೀಕ್ಷಿತನೇ! ದೇವಕೀದೇವಿಯು ತನ್ನ ಸತ್ತುಹೋಗಿರುವ ಮಕ್ಕಳು ಮರಳಿ ಬಂದರು ಮತ್ತು ಪುನಃ ಹೊರಟುಹೋದರು ಇದನ್ನು ಕಂಡು ಅತ್ಯಂತ ವಿಸ್ಮಿತಳಾದಳು. ಇದು ಶ್ರೀಕೃಷ್ಣನ ಯಾವುದೋ ಲೀಲಾ ಕೌಶಲ್ಯವೇ ಆಗಿರಬೇಕೆಂದು ಆಕೆಯು ನಿಶ್ಚಯಿಸಿಕೊಂಡಳು. ॥ ೫೭ ॥

ಏವಂವಿಧಾನ್ಯದ್ಭುತಾನಿ ಕೃಷ್ಣಸ್ಯ ಪರಮಾತ್ಮನಃ ।
ವೀರ್ಯಾಣ್ಯನಂತವೀರ್ಯಸ್ಯ ಸಂತ್ಯನಂತಾನಿ ಭಾರತ
॥ ೫೮ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸಾಕ್ಷಾತ್ ಪರಮಾತ್ಮನಾಗಿದ್ದು, ಅವನ ಶಕ್ತಿ ಅನಂತವಾಗಿದೆ. ಅವನ ಇಂತಹ ಅದ್ಭುತ ಚರಿತ್ರೆಗಳು ಅಪಾರವಾಗಿವೆ. ಎಷ್ಟು ಹೇಳಿದರೂ ಮುಗಿಯದಷ್ಟು ಅವನ ಲೀಲಾಪ್ರಸಂಗಗಳಿವೆ. ॥ ೫೮ ॥

*ಸೂತ ಉವಾಚ*

ಯ ಇದಮನುಶೃಣೋತಿ ಶ್ರಾವಯೇದ್ವಾ ಮುರಾರೇ-
ಶ್ಚರಿತಮಮೃತಕೀರ್ತೇರ್ವರ್ಣಿತಂ ವ್ಯಾಸಪುತ್ರೈಃ ।
ಜಗದಘಭಿದಲಂ ತದ್ ಭಕ್ತಸತ್ಕರ್ಣಪೂರಂ
ಭಗವತಿ ಕೃತಚಿತ್ತೋ ಯಾತಿ ತತ್ ಕ್ಷೇಮಧಾಮ ॥ ೫೯ ॥

**ಸೂತಪುರಾಣಿಕರು ಹೇಳುತ್ತಾರೆ** - ಶೌನಕಾದಿ ಮಹರ್ಷಿಗಳೇ! ಭಗವಾನ್ ಶ್ರೀಕೃಷ್ಣನ ಕೀರ್ತಿಯು ಅಮರವೂ, ಅಮೃತಮಯವೂ ಆಗಿದೆ. ವ್ಯಾಸನಂದನರಾದ ಭಗವಾನ್ ಶ್ರೀಶುಕಮುನಿಯಿಂದ ಹೇಳಲ್ಪಟ್ಟ ಅವನ ಚರಿತಾಮೃತವು ಭಕ್ತಜನರ ಪಾಪ ನಿವಾರಕವೂ, ಶ್ರೋತ್ರಾನಂದಕರವೂ ಆಗಿದೆ. ಇದನ್ನು ಶ್ರವಣಿಸುವವನ, ಇತರರಿಗೆ ಹೇಳುವವನ, ಚಿತ್ತವೃತ್ತಿಗಳು ಭಗವಂತನಲ್ಲಿ ನೆಲೆಸಿ ಪರಮಾತ್ಮನ ಪರಮಪದವನ್ನು ಪಡೆಯುವನು. ॥ ೫೯ ॥

*ಎಂಭತ್ತೈದನೆಯ ಅಧ್ಯಾಯವು ಮುಗಿಯಿತು. ॥ ೮೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಮೃತಾಗ್ರಜಾನಯನಂ ನಾಮ ಪಂಚಾಶೀತಿತಮೋಽಧ್ಯಾಯಃ ॥ ೮೫ ॥

# ಎಂಭತ್ತಾರನೆಯ ಅಧ್ಯಾಯ

## ಸುಭದ್ರಾಹರಣ - ಭಗವಾನ್ ಶ್ರೀಕೃಷ್ಣನು ಮಿಥಿಲೆಯ ರಾಜನಾದ ಜನಕನ ಅರಮನೆಗೂ ಮತ್ತು ಶ್ರುತದೇವ ಬ್ರಾಹ್ಮಣನ ಮನೆಗೂ ಏಕಕಾಲದಲ್ಲಿ ಪ್ರವೇಶಿಸಿದುದು

*ರಾಜೋವಾಚ*

ಬ್ರಹ್ಮನ್ ವೇದಿತುಮಿಚ್ಛಾಮಃ ಸ್ವಸಾರಂ ರಾಮಕೃಷ್ಣಯೋಃ ।
ಯಥೋಪಯೇಮೇ ವಿಜಯೋ
ಯಾ ಮಮಾಸೀತ್ ಪಿತಾಮಹೀ ॥ ೧ ॥

**ಪರೀಕ್ಷಿದ್ರಾಜನು ಕೇಳಿದನು** - ಪೂಜ್ಯರೇ! ನನ್ನ ತಾತನಾದ ಅರ್ಜುನನು ಶ್ರೀಕೃಷ್ಣ-ಬಲರಾಮರ ತಂಗಿಯಾದ, ನನ್ನ ಅಜ್ಜಿಯಾದ ಸುಭದ್ರೆಯನ್ನು ಹೇಗೆ ಮದುವೆಯಾದನು? ಇದನ್ನು ಕೇಳಲು ನಾನು ಬಹಳ ಉತ್ಸುಕನಾಗಿದ್ದೇನೆ. ॥ ೧ ॥

ಶ್ರೀಶುಕ ಉವಾಚ

ಅರ್ಜುನಸ್ತೀರ್ಥಯಾತ್ರಾಯಾಂ ಪರ್ಯಟನ್ನವನೀಂ ಪ್ರಭುಃ ।
ಗತಃ ಪ್ರಭಾಸಮಶೃಣೋನ್ಮಾತುಲೇಯೀಂ ಸ ಆತ್ಮನಃ ॥ ೨ ॥

ದುರ್ಯೋಧನಾಯ ರಾಮಸ್ತಾಂ ದಾಸ್ಯತೀತಿ ನ ಚಾಪರೇ ।
ತಲ್ಲಿಪ್ಸುಃ ಸ ಯತಿರ್ಭೂತ್ವಾ ತ್ರಿದಂಡೀ ದ್ವಾರಕಾಮಗಾತ್ ॥ ೩ ॥

ತತ್ರ ವೈ ವಾರ್ಷಿಕಾನ್ ಮಾಸಾನವಾತ್ಸೀತ್ಸ್ವಾರ್ಥಸಾಧಕಃ ।
ಪೌರೈಃ ಸಭಾಜಿತೋಽಭೀಕ್ಷ್ಣಂ ರಾಮೇಣಾಜಾನತಾ ಚ ಸಃ ॥ ೪ ॥

ಏಕದಾ ಗೃಹಮಾನೀಯ ಆತಿಥ್ಯೇನ ನಿಮಂತ್ರ್ಯ ತಮ್ ।
ಶ್ರದ್ಧಯೋಪಹೃತಂ ಭೈಕ್ಷ್ಯಂ ಬಲೇನ ಬುಭುಜೇ ಕಿಲ ॥ ೫ ॥

ಸೋಽಪಶ್ಯತ್ತತ್ರ ಮಹತೀಂ ಕನ್ಯಾಂ ವೀರಮನೋಹರಾಮ್ ।
ಪ್ರೀತ್ಯುತ್ಫುಲ್ಲೇಕ್ಷಣಸ್ತಸ್ಯಾಂ ಭಾವಕ್ಷುಬ್ಧಂ ಮನೋ ದಧೇ ॥ ೬ ॥

ಸಾಪಿ ತಂ ಚಕಮೇ ವೀಕ್ಷ್ಯ ನಾರೀಣಾಂ ಹೃದಯಂಗಮಮ್ ।
ಹಸಂತೀ ವ್ರೀಡಿತಾಪಾಂಗೀ ತನ್ನ್ಯಸ್ತಹೃದಯೇಕ್ಷಣಾ ॥ ೭ ॥

ತಾಂ ಪರಂ ಸಮನುಧ್ಯಾಯನ್ನಂತರಂ ಪ್ರೇಪ್ಸುರರ್ಜುನಃ ।
ನ ಲೇಭೇ ಶಂ ಭ್ರಮಚ್ಚಿತ್ತಃ ಕಾಮೇನಾತಿಬಲೀಯಸಾ ॥ ೮ ॥

ಮಹತ್ಯಾಂ ದೇವಯಾತ್ರಾಯಾಂ ರಥಸ್ಥಾಂ ದುರ್ಗನಿರ್ಗತಾಮ್ ।
ಜಹಾರಾನುಮತಃ ಪಿತ್ರೋಃ ಕೃಷ್ಣಸ್ಯ ಚ ಮಹಾರಥಃ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿತನೇ ! ಒಮ್ಮೆ ಪ್ರಭಾವಶಾಲಿಯಾದ ಅರ್ಜುನನು ತೀರ್ಥಯಾತ್ರೆಯನ್ನು ಮಾಡುತ್ತಾ ಭೂಮಂಡಲದಲ್ಲಿ ಸಂಚರಿಸುತ್ತಿದ್ದಾಗ ಪ್ರಭಾಸಕ್ಷೇತ್ರಕ್ಕೆ ಆಗಮಿಸಿದನು. ಅಲ್ಲವನು ತಮ್ಮ ಸೋದರ ಮಾವನ ಮಗಳಾದ ಸುಭದ್ರೆಯನ್ನು ದುರ್ಯೋಧನನಿಗೆ ಕೊಟ್ಟು ಮದುವೆ ಮಾಡಲು ಬಲರಾಮನು ನಿಶ್ಚಯಿಸಿದ್ದಾನೆಂದೂ, ಇದಕ್ಕೆ ವಸುದೇವನ ಮತ್ತು ಶ್ರೀಕೃಷ್ಣನ ಸಹಮತವಿಲ್ಲವೆಂದೂ ಕೇಳಿದನು. ಆಗ ಅರ್ಜುನನ ಮನಸ್ಸಿನಲ್ಲಿ ಸುಭದ್ರೆಯನ್ನು ತಾನು ಮದುವೆಯಾಗಬೇಕೆಂಬ ಆಸೆಯು ಅಂಕುರಿಸಿತು. ಇದನ್ನು ಸಾಧಿಸಲಿಕ್ಕಾಗಿ ತ್ರಿದಂಡೀ ಸಂನ್ಯಾಸಿ ವೇಷವನ್ನು ಧರಿಸಿ ಅವನು ದ್ವಾರಕೆಗೆ ಹೋದನು. ॥ ೨-೩ ॥ ಅರ್ಜುನನು ಸುಭದ್ರೆಯನ್ನು ಪಡೆದುಕೊಳ್ಳಲು ದ್ವಾರಕೆಯಲ್ಲಿ ವರ್ಷಾಕಾಲದ ನಾಲ್ಕು ತಿಂಗಳು ತಂಗಿದನು. ಅಲ್ಲಿ ನಗರವಾಸಿಗಳೂ, ಬಲರಾಮನೂ ಅವನನ್ನು ಬಹಳವಾಗಿ ಸನ್ಮಾನಿಸಿದರು. ಆದರೆ ಇವನು ಅರ್ಜುನನೆಂದು ಅವರಿಗೆ ತಿಳಿಯಲಿಲ್ಲ. ॥ ೪ ॥

ಒಂದು ದಿನ ಬಲರಾಮನು ಆತಿಥ್ಯವನ್ನು ನೀಡಲು ಆ ಸಂನ್ಯಾಸಿಯನ್ನು ತಮ್ಮ ಅರಮನೆಗೆ ಕರೆದುಕೊಂಡು ಬಂದನು. ಸಂನ್ಯಾಸಿ ವೇಷಧಾರಿಯಾದ ಅರ್ಜುನನಿಗೆ ಬಲರಾಮನು ಬಹಳ ಶ್ರದ್ಧೆಯೊಂದಿಗೆ ಮೃಷ್ಟಾನ್ನವನ್ನು ಭೋಜನಮಾಡಿಸಿದನು. ॥ ೫ ॥ ಅರ್ಜುನನು ಭೋಜನಮಾಡುವಾಗ ಅಲ್ಲಿ ವಿವಾಹಯೋಗ್ಯಳಾದ ಪರಮ ಸುಂದರಿಯಾದ ಸುಭದ್ರೆಯನ್ನು ನೋಡಿದನು. ಆಕೆಯ ಸೌಂದರ್ಯವು ಮಹಾ-ಮಹಾವೀರರ ಮನಸ್ಸನ್ನು ಅಪಹರಿಸುವಂತಹುದಿತ್ತು. ಆಕೆಯನ್ನು ನೋಡಿ ಅರ್ಜುನನ ಕಣ್ಣುಗಳು ಅರಳಿದವು. ಅವಳನ್ನು ಪಡೆಯಬೇಕೆಂಬ ಆಕಾಂಕ್ಷೆಯಿಂದ ಅವನ ಮನಸ್ಸು ಕ್ಷುಬ್ಧವಾಯಿತು ಮತ್ತು ಅವಳನ್ನು ಪತ್ನಿಯಾಗಿಸಿಕೊಳ್ಳಬೇಕೆಂದು ನಿಶ್ಚಯಿಸಿದನು. ॥ ೬ ॥ ಪರೀಕ್ಷಿತನೇ ! ನಿನ್ನ ತಾತನಾದ ಅರ್ಜುನನೂ ತುಂಬಾ ಸುಂದರನಾಗಿದ್ದನು. ಅವನ ಸೌಂದರ್ಯಕ್ಕೆ ಆಕರ್ಷಿತರಾಗದ ಸ್ತ್ರೀಯರೇ ಇರಲಿಲ್ಲ. ಅಂತಹ ಸುಂದರ ಪುರುಷನನ್ನು ನೋಡಿದ ಸುಭದ್ರೆಯೂ ಕೂಡ ಅವನನ್ನೇ ಪತಿಯನ್ನಾಗಿ ವರಿಸಲು ನಿಶ್ಚಯಿಸಿದಳು. ಅವಳು ಸ್ವಲ್ಪ ಮುಗುಳ್ನಕ್ಕು ನಾಚಿಕೆಯಿಂದ ಕೂಡಿದ ಓರೆಗಣ್ಣನೋಟದಿಂದ ಅವನನ್ನು ನೋಡಿದಳು. ಆಕೆಯು ತನ್ನ ಹೃದಯವನ್ನು ಅವನಿಗೆ ಸಮರ್ಪಿಸಿಬಿಟ್ಟಳು. ॥ ೭ ॥ ಈಗ ಅರ್ಜುನನು ಕೇವಲ ಅವಳ ಚಿಂತೆಯಲ್ಲೇ ಇದ್ದು, ಇವಳನ್ನು ಯಾವಾಗ ಅಪಹರಿಸಿಕೊಂಡು ಹೋಗಬಹುದೆಂದು ಸಂದರ್ಭವನ್ನು ಹುಡುಕುತ್ತಿದ್ದನು. ಸುಭದ್ರೆಯನ್ನು ಪಡೆಯುವ ಉತ್ಕಟ ಕಾಮನೆಯಿಂದ ಅವನ ಚಿತ್ತವು ಚಂಚಲವಾಗಿ, ಅವನಿಗೆ ಸ್ವಲ್ಪವೂ ಶಾಂತಿಯೇ ಇಲ್ಲದಂತಾಯಿತು. ॥ ೮ ॥

ಒಮ್ಮೆ ಸುಭದ್ರೆಯು ದೇವರ ದರ್ಶನಕ್ಕಾಗಿ ರಥದಲ್ಲಿ ಕುಳಿತುಕೊಂಡು ದ್ವಾರಕೆಯ ದುರ್ಗದಿಂದ ಹೊರಗೆ ಹೊರಟಳು. ಅದೇ ಸಮಯದಲ್ಲಿ ಅರ್ಜುನನು ವಸುದೇವ-ದೇವಕಿಯ ಮತ್ತು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಸುಭದ್ರೆಯನ್ನು ಅಪಹರಿಸಿಕೊಂಡು ಹೋದನು. ॥ ೯ ॥

ರಥಸ್ಥೋ ಧನುರಾದಾಯ ಶೂರಾಂಶ್ಚಾರುಂಧತೋ ಭಟಾನ್ ।
ವಿದ್ರಾವ್ಯ ಕ್ರೋಶತಾಂ ಸ್ವಾನಾಂ ಸ್ವಭಾಗಂ ಮೃಗರಾಡಿವ
॥ ೧೦ ॥

ತಚ್ಛ್ರುತ್ವಾಕ್ಷುಭಿತೋ ರಾಮಃ ಪರ್ವಣೀವ ಮಹಾರ್ಣವಃ ।
ಗೃಹೀತಪಾದಃ ಕೃಷ್ಣೇನ ಸುಹೃದ್ಭಿಶ್ಚಾನ್ವಶಾಮ್ಯತ
॥ ೧೧ ॥

ಪ್ರಾಹಿಣೋತ್ಪಾರಿಬರ್ಹಾಣಿ ವರವಧ್ವೋರ್ಮುದಾ ಬಲಃ ।
ಮಹಾಧನೋಪಸ್ಕರೇಭರಥಾಶ್ವನರಯೋಷಿತಃ
॥ ೧೨ ॥

*ಶ್ರೀಶುಕ ಉವಾಚ*

ಕೃಷ್ಣಸ್ಯಾಸೀದ್ದ್ವಿಜಶ್ರೇಷ್ಠಃ ಶ್ರುತದೇವ ಇತಿ ಶ್ರುತಃ ।
ಕೃಷ್ಣೈಕಭಕ್ತ್ಯಾ ಪೂರ್ಣಾರ್ಥಃ ಶಾಂತಃ ಕವಿರಲಂಪಟಃ
॥ ೧೩ ॥

ಸ ಉವಾಸ ವಿದೇಹೇಷು ಮಿಥಿಲಾಯಾಂ ಗೃಹಾಶ್ರಮೀ ।
ಅನೀಹಯಾಽಽಗತಾಹಾರ್ಯನಿರ್ವರ್ತಿತನಿಜಕ್ರಿಯಃ
॥ ೧೪ ॥

ಯಾತ್ರಾಮಾತ್ರಂ ತ್ವಹರಹರ್ದೈವಾದುಪನಮತ್ಯುತ ।
ನಾಧಿಕಂ ತಾವತಾ ತುಷ್ಟಃ ಕ್ರಿಯಾಶ್ಚಕ್ರೇ ಯಥೋಚಿತಾಃ
॥ ೧೫ ॥

ತಥಾ ತದ್ರಾಷ್ಟ್ರಪಾಲೋಽಂಗ ಬಹುಲಾಶ್ವ ಇತಿ ಶ್ರುತಃ ।
ಮೈಥಿಲೋ ನಿರಹಮ್ಮಾನ ಉಭಾವಪ್ಯಚ್ಯುತಪ್ರಿಯೌ
॥ ೧೬ ॥

ತಯೋಃ ಪ್ರಸನ್ನೋ ಭಗವಾನ್ ದಾರುಕೇಣಾಹೃತಂ ರಥಮ್ ।
ಆರುಹ್ಯ ಸಾಕಂ ಮುನಿಭಿರ್ವಿದೇಹಾನ್ಪ್ರಯಯೌ ಪ್ರಭುಃ
॥ ೧೭ ॥

ನಾರದೋ ವಾಮದೇವೋಽತ್ರಿಃ ಕೃಷ್ಣೋ ರಾಮೋಽಸಿತೋಽರುಣಿಃ ।
ಅಹಂ ಬೃಹಸ್ಪತಿಃ ಕಣ್ವೋ ಮೈತ್ರೇಯಶ್ಚ್ಯವನಾದಯಃ
॥ ೧೮ ॥

ತತ್ರ ತತ್ರ ತಮಾಯಾಂತಂ ಪೌರಾ ಜಾನಪದಾ ನೃಪ ।
ಉಪತಸ್ಥುಃ ಸಾರ್ಘ್ಯಹಸ್ತಾ ಗ್ರಹೈಃ ಸೂರ್ಯಮಿವೋದಿತಮ್
॥ ೧೯ ॥

ರಥಾರೂಢನಾದ ವೀರ ಅರ್ಜುನನು ಧನುಸ್ಸನ್ನು ಎತ್ತಿಕೊಂಡು ತನ್ನನ್ನು ತಡೆಯಲು ಬಂದ ಸೈನಿಕರನ್ನು ಹೊಡೆದು ಓಡಿಸಿದನು. ಸುಭದ್ರೆಯ ಆಪ್ತವರ್ಗವು ಅಳುತ್ತಾಗೋಳಾಡುತ್ತಿದ್ದಂತೆ ಸಿಂಹವು ತನಗೆ ಸೇರಬೇಕಾದ ಭಾಗವನ್ನು ನಿರ್ಭಯವಾಗಿ ಎತ್ತಿಕೊಂಡು ಹೋಗುವಂತೆ ಅರ್ಜುನನು ಸುಭದ್ರೆಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದನು. ॥ ೧೦ ॥ ಈ ಸಮಾಚಾರವನ್ನು ಕೇಳಿದ ಬಲರಾಮನ ಕೋಪವು ಹುಣ್ಣಿಮೆಯ ದಿನ ಸಮುದ್ರವು ಉಕ್ಕೇರುವಂತೆ, ಉಕ್ಕೇರಿಬಂದಿತು. ಆದರೆ ಭಗವಾನ್ ಶ್ರೀಕೃಷ್ಣನು ಹಾಗೂ ಇತರ ಸುಹೃದ್ ಸಂಬಂಧಿಗಳು ಅವನ ಕಾಲುಗಳನ್ನು ಹಿಡಿದುಕೊಂಡು ನಾನಾ ವಿಧದಿಂದ ಸಮಾಧಾನಪಡಿಸಿದಾಗ ಶಾಂತನಾದನು. ॥ ೧೧ ॥ ಅನಂತರ ಬಲರಾಮನು ಪ್ರಸನ್ನನಾಗಿ ವಧೂ-ವರರಿಗೆ ಅಪಾರವಾದ ಧನವನ್ನು ನಾನಾ ಸಾಮಗ್ರಿಗಳನ್ನು ಆನೆ, ಕುದುರೆ, ರಥ ಮತ್ತು ದಾಸೀ-ದಾಸರನ್ನು ಬಳುವಳಿಯಾಗಿ ಕಳಿಸಿಕೊಟ್ಟನು. ॥ ೧೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಿದೇಹರಾಜ್ಯದ ರಾಜಧಾನಿಯಾದ ಮಿಥಿಲಾಪಟ್ಟಣದಲ್ಲಿ ಶ್ರುತದೇವನೆಂಬ ಒಬ್ಬ ಗೃಹಸ್ಥ ಬ್ರಾಹ್ಮಣನಿದ್ದನು. ಅವನು ಭಗವಾನ್ ಶ್ರೀಕೃಷ್ಣನ ಪರಮಭಕ್ತನಾಗಿದ್ದನು. ಅವನು ಏಕಮಾತ್ರ ಭಗವದ್ಭಕ್ತಿಯಿಂದ ಪೂರ್ಣಮನೋರಥನೂ, ಪರಮಶಾಂತನೂ, ಜ್ಞಾನಿಯೂ, ವಿರಕ್ತನೂ ಆಗಿದ್ದನು. ॥ ೧೩ ॥ ಅವನು ಗೃಹಸ್ಥಾಶ್ರಮದಲ್ಲಿ ಇರುತ್ತಿದ್ದರೂ ಜೀವನ ನಿರ್ವಹಣೆಗಾಗಿ ಯಾವುದೇ ಉದ್ಯೋಗವನ್ನು ಮಾಡುತ್ತಿರಲಿಲ್ಲ, ಭಗವಂತನ ದಯೆಯಿಂದ ದೊರೆತುದರಲ್ಲೇ ಜೀವನ ಸಾಗಿಸುತ್ತಿದ್ದನು. ॥ ೧೪ ॥ ಪ್ರಾರಬ್ಧವಶದಿಂದ ಅವನಿಗೆ ಪ್ರತಿದಿನವೂ ಜೀವನನಿರ್ವಾಹಕ್ಕಾಗುವಷ್ಟು ಸಾಮಗ್ರಿಯು ದೊರೆಯುತ್ತಿತ್ತು. ಹೆಚ್ಚಿಗೆ ಮಿಗುತ್ತಿರಲಿಲ್ಲ. ಅವನು ಅಷ್ಟರಲ್ಲೇ ಸಂತುಷ್ಟನಾಗಿದ್ದು ತನ್ನ ವರ್ಣಾಶ್ರಮಕ್ಕನುಸಾರ ಧರ್ಮವನ್ನು ಪಾಲಿಸುವುದರಲ್ಲಿ ತತ್ಪರನಾಗಿರುತ್ತಿದ್ದನು. ॥ ೧೫ ॥ ಪ್ರಿಯ ಪರೀಕ್ಷಿತನೇ! ಆ ದೇಶದ ರಾಜನೂ ಕೂಡ ಬ್ರಾಹ್ಮಣನಂತೆಯೇ ಭಕ್ತಿಯುಳ್ಳವನಾಗಿದ್ದನು. ಮಿಥಿಲಾ ಪಟ್ಟಣದ ಆ ಪ್ರತಿಷ್ಠಿತ ನರಪತಿಯ ಹೆಸರು ಬಹುಲಾಶ್ವನೆಂದಿತ್ತು. ಅವನಲ್ಲಿ ಅಹಂಕಾರ ಲೇಶಮಾತ್ರವೂ ಇರಲಿಲ್ಲ. ಶ್ರುತದೇವ ಮತ್ತು ಬಹುಲಾಶ್ವರಿಬ್ಬರೂ ಭಗವಾನ್ ಶ್ರೀಕೃಷ್ಣನ ಪರಮಭಕ್ತರಾಗಿದ್ದರು. ॥ ೧೬ ॥

ಒಮ್ಮೆ ಭಗವಾನ್ ಶ್ರೀಕೃಷ್ಣನು ಅವರಿಬ್ಬರ ಮೇಲೆ ಪ್ರಸನ್ನನಾಗಿ ದಾರುಕನಿಂದ ರಥವನ್ನು ಸಿದ್ಧಗೊಳಿಸಿ, ಆ ರಥವನ್ನು ಹತ್ತಿ ದ್ವಾರಕೆಯಿಂದ ವಿದೇಹ ನಗರಕ್ಕೆ ಪ್ರಯಾಣ ಬೆಳೆಸಿದನು. ॥ ೧೭ ॥ ಭಗವಂತನೊಂದಿಗೆ ನಾರದರು, ವಾಮದೇವ, ಅತ್ರಿ, ವೇದವ್ಯಾಸರು, ಪರಶುರಾಮರು, ಅಸಿತ, ಆರುಣಿ, ಬೃಹಸ್ಪತಿ, ಕಣ್ವ, ಮೈತ್ರೇಯ, ಚ್ಯವನ ಮೊದಲಾದ ಋಷಿಗಳೊಂದಿಗೆ ನಾನೂ (ಶುಕರು) ಅವರಲ್ಲಿ ಸೇರಿಕೊಂಡಿದ್ದೆ. ॥ ೧೮ ॥ ಪರೀಕ್ಷಿತನೇ! ಅವರು ಹೋದಲೆಲ್ಲ ಅಲ್ಲಿಯ ನಾಗರೀಕರೂ, ಗ್ರಾಮನಿವಾಸಿಗಳೂ ಪೂಜಾಸಾಮಗ್ರಿಗಳೊಂದಿಗೆ ಉಪಸ್ಥಿತರಿದ್ದರು. ಗ್ರಹಗಳೊಂದಿಗೆ ಸಾಕ್ಷಾತ್ ಸೂರ್ಯನಾರಾಯಣನೇ ಉದಯಿಸಿ ಬಂದಿರುವನೋ ಎಂದು ತಿಳಿದು ಭಗವಂತನನ್ನು ಭಕ್ತಿಯಿಂದ ಪೂಜಿಸುತ್ತಿದ್ದರು. ॥ ೧೯ ॥

ಆನರ್ತಧನ್ವಕುರುಜಾಂಗಲಕಂಕಮತ್ಸ್ಯ-
ಪಾಂಚಾಲಕುಂತಿಮಧುಕೇಕಯಕೋಸಲಾರ್ಣಾಃ ।
ಅನ್ಯೇ ಚ ತನ್ಮುಖಸರೋಜಮುದಾರಹಾಸ-
ಸ್ನಿಗ್ಧೇಕ್ಷಣಂ ನೃಪ ಪಪುರ್ದೃಶಿಭಿರ್ನೃನಾರ್ಯಃ ॥ ೨೦ ॥

ತೇಭ್ಯಃ ಸ್ವವೀಕ್ಷಣವಿನಷ್ಟತಮಿಸ್ರದೃಗ್ಭ್ಯಃ
ಕ್ಷೇಮಂ ತ್ರಿಲೋಕಗುರುರರ್ಥದೃಶಂ ಚ ಯಚ್ಛನ್ ।
ಶೃಣ್ವನ್ ದಿಗಂತಧವಲಂ ಸ್ವಯಶೋಽಶುಭಘ್ನಂ
ಗೀತಂ ಸುರೈರ್ನೃಭಿರಗಾಚ್ಛನಕೈರ್ವಿದೇಹಾನ್ ॥ ೨೧ ॥

ತೇಽಚ್ಯುತಂ ಪ್ರಾಪ್ತಮಾಕರ್ಣ್ಯ ಪೌರಾ ಜಾನಪದಾ ನೃಪ ।
ಅಭೀಯುರ್ಮುದಿತಾಸ್ತಸ್ಮೈ ಗೃಹೀತಾರ್ಹಣಪಾಣಯಃ
॥ ೨೨ ॥

ದೃಷ್ಟ್ವಾ ತ ಉತ್ತಮಶ್ಲೋಕಂ ಪ್ರೀತ್ಯುತ್ಫುಲ್ಲಾನನಾಶಯಾಃ ।
ಕೈರ್ಧೃತಾಂಜಲಿಭಿರ್ನೇಮುಃ ಶ್ರುತಪೂರ್ವಾಂಸ್ತಥಾ ಮುನೀನ್
॥ ೨೩ ॥

ಸ್ವಾನುಗ್ರಹಾಯ ಸಂಪ್ರಾಪ್ತಂ ಮನ್ವಾನೌ ತಂ ಜಗದ್ಗುರುಮ್ ।
ಮೈಥಿಲಃ ಶ್ರುತದೇವಶ್ಚ ಪಾದಯೋಃ ಪೇತತುಃ ಪ್ರಭೋಃ
॥ ೨೪ ॥

ನ್ಯಮಂತ್ರಯೇತಾಂ ದಾಶಾರ್ಹಮಾತಿಥ್ಯೇನ ಸಹ ದ್ವಿಜೈಃ ।
ಮೈಥಿಲಃ ಶ್ರುತದೇವಶ್ಚ ಯುಗಪತ್ಸಂಹತಾಂಜಲೀ
॥ ೨೫ ॥

ಭಗವಾಂಸ್ತದಭಿಪ್ರೇತ್ಯ ದ್ವಯೋಃ ಪ್ರಿಯಚಿಕೀರ್ಷಯಾ ।
ಉಭಯೋರಾವಿಶದ್ಗೇಹಮುಭಾಭ್ಯಾಂ ತದಲಕ್ಷಿತಃ
॥ ೨೬ ॥

ಶ್ರೋತುಮಪ್ಯಸತಾಂ ದೂರಾನ್ ಜನಕಃ ಸ್ವಗೃಹಾಗತಾನ್ ।
ಆನೀತೇಷ್ವಾಸನಾಗ್ರ್ಯೇಷು ಸುಖಾಸೀನಾನ್ಮಹಾಮನಾಃ
॥ ೨೭ ॥

ಪ್ರವೃದ್ಧಭಕ್ತ್ಯಾ ಉದ್ಧರ್ಷಹೃದಯಾಸ್ರಾವಿಲೇಕ್ಷಣಃ ।
ನತ್ವಾ ತದಂಘ್ರೀನ್ ಪ್ರಕ್ಷಾಲ್ಯ ತದಪೋ ಲೋಕಪಾವನೀಃ
॥ ೨೮ ॥

ಪರೀಕ್ಷಿತನೇ ! ದಾರಿಯಲ್ಲಿ ಅನರ್ತ, ಧನ್ವ, ಕುರುಜಾಂಗಲ, ಕಂಕ, ಮತ್ಸ್ಯ, ಪಾಂಚಾಲ, ಕುಂತೀ, ಮಧು, ಕೇಕಯ, ಕೋಸಲ, ಅರ್ಣ ಮೊದಲಾದ ಅನೇಕ ದೇಶದ ನರ-ನಾರಿಯರು ತಮ್ಮ ನೇತ್ರಗಳೆಂಬ ದ್ರೋಣಗಳಿಂದ ಭಗವಾನ್ ಶ್ರೀಕೃಷ್ಣನ ಉನ್ಮುಕ್ತ ಹಾಸ್ಯವನ್ನೂ, ಪ್ರೇಮಪೂರ್ಣ ಕಟಾಕ್ಷದಿಂದ ಕೂಡಿದ ಮುಖಾರವಿಂದದ ಮಕರಂದವನ್ನು ಪಾನಮಾಡಿದರು. ॥ ೨೦ ॥ ಮೂರು ಲೋಕಗಳ ಗುರುವಾದ ಭಗವಾನ್ ಶ್ರೀಕೃಷ್ಣನ ದರ್ಶನದಿಂದ ಆ ಜನರ ಅಜ್ಞಾನದೃಷ್ಟಿಯು ನಾಶವಾಯಿತು. ಪ್ರಭುವು ದರ್ಶನ ಮಾಡುವ ನರ-ನಾರಿಯರಿಗೆ ತನ್ನ ಕರುಣಾ ದೃಷ್ಟಿಯಿಂದ ಪರಮ ಶ್ರೇಯಸ್ಸನ್ನು, ಆತ್ಮಜ್ಞಾನವನ್ನು ಕರುಣಿಸುತ್ತಾ ಮುಂದರಿಯುತ್ತಿದ್ದನು. ಅಲ್ಲಲ್ಲಿ ಮನುಷ್ಯರು, ದೇವತೆಗಳು - ಸಮಸ್ತ ದಿಕ್ಕುಗಳನ್ನು ಉಜ್ಜ್ವಲಗೊಳಿಸುವಂತಹ, ಸಮಸ್ತ ಅಶುಭಗಳನ್ನು ನಾಶಮಾಡುವಂತಹ ಭಗವಂತನ ಮಂಗಳ ಕೀರ್ತಿಯನ್ನು ಹಾಡುತ್ತಿದ್ದರು. ಅಂತಹ ಸ್ತೋತ್ರಗಳನ್ನು ಆಲಿಸುತ್ತಾ ಭಗವಾನ್ ಶ್ರೀಕೃಷ್ಣನು ಮಿಥಿಲಾ ಪಟ್ಟಣವನ್ನು ಸೇರಿದನು. ॥ ೨೧ ॥

ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನ ಶುಭಾಗಮನದ ಸಮಾಚಾರವನ್ನು ಕೇಳಿದ ಮಿಥಿಲಾಪುರ ನಿವಾಸಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಅವರು ಕೈಗಳಲ್ಲಿ ವಿವಿಧ ಪೂಜಾಸಾಮಗ್ರಿಗಳನ್ನು ಹಿಡಿದುಕೊಂಡು ಶ್ರೀಕೃಷ್ಣನನ್ನು ಸ್ವಾಗತಿಸಲು ಧಾವಿಸಿ ಬಂದರು. ॥ ೨೨ ॥ ಭಗವಾನ್ ಶ್ರೀಕೃಷ್ಣನ ದರ್ಶನವನ್ನು ಪಡೆದು ಅವರ ಹೃದಯ ಮತ್ತು ಮುಖಕಮಲಗಳು ಆನಂದದಿಂದ ವಿಕಸಿತವಾದುವು. ಅವರೆಲ್ಲರೂ ಭಗವಂತನ ಹಾಗೂ ಮುನಿಗಳ ಹೆಸರುಗಳನ್ನು ಮಾತ್ರ ಕೇಳಿದ್ದರೇ ವಿನಹ ನೋಡಿರಲಿಲ್ಲ. ಈಗ ಪ್ರತ್ಯಕ್ಷವಾಗಿ ನೋಡಿ ಕೈಜೋಡಿಸಿ, ತಲೆತಗ್ಗಿಸಿ ವಂದಿಸಿಕೊಂಡರು. ॥ ೨೩ ॥ ಜಗದ್ಗುರು ಭಗವಾನ್ ಶ್ರೀಕೃಷ್ಣನು ನಮ್ಮ ಮೇಲೆ ಅನುಗ್ರಹಿಸಲಿಕ್ಕಾಗಿಯೇ ಆಗಮಿಸಿರುವನೆಂದು ತಿಳಿದ ಮಿಥಿಲೇಶಬಹುಲಾಶ್ವ ಮತ್ತು ಶ್ರುತದೇವರು ಅವನ ಚರಣಗಳಲ್ಲಿ ಬಿದ್ದು ನಮಸ್ಕರಿಸಿಕೊಂಡರು. ॥ ೨೪ ॥ ಬಹುಲಾಶ್ವ ಹಾಗೂ ಶ್ರುತದೇವರಿಬ್ಬರೂ ಒಟ್ಟಿಗೆ ಕೈಜೋಡಿಸಿಕೊಂಡು ಮುನಿಮಂಡಲಿಯೊಂದಿಗೆ ಭಗವಾನ್ ಶ್ರೀಕೃಷ್ಣನಿಗೆ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿಕೊಂಡರು. ॥ ೨೫ ॥ ಭಗವಾನ್ ಶ್ರೀಕೃಷ್ಣನು ಇಬ್ಬರ ಪ್ರಾರ್ಥನೆಯನ್ನು ಸ್ವೀಕರಿಸಿ ಇಬ್ಬರನ್ನು ಸಂತೋಷಪಡಿಸಲಿಕ್ಕಾಗಿ ಒಂದೇ ಬಾರಿಗೆ ಬೇರೆ-ಬೇರೆ ರೂಪಗಳಿಂದ ಇಬ್ಬರ ಮನೆಗಳಿಗೂ ತೆರಳಿದನು. ಆದರೆ ಭಗವಾನ್ ಶ್ರೀಕೃಷ್ಣನು ನನ್ನ ಮನೆಗೆ ಬಂದಿರುವನು ಬೇರೆಲ್ಲೂ ಹೋಗಲಿಲ್ಲ ಎಂಬ ವಿಷಯ ತಿಳಿಯಲೇ ಇಲ್ಲ. ॥ ೨೬ ॥ ದುಷ್ಟ-ದುರಾಚಾರಿ ಅಸತ್ಪುರುಷರು ಯಾರ ಹೆಸರೂ ಕೂಡ ಕೇಳಲಾರರೋ ಅಂತಹ ಭಗವಾನ್ ಶ್ರೀಕೃಷ್ಣನು ಮತ್ತು ಋಷಿ-ಮುನಿಗಳು ತನ್ನ ಮನೆಗೆ ಆಗಮಿಸಿದ್ದನ್ನು ನೋಡಿದ ಮಹಾನುಭಾವನಾದ ಬಹುಲಾಶ್ವನು ಸುಂದರವಾದ ಆಸನಗಳನ್ನು ತರಿಸಿ ಭಗವಂತನನ್ನು ಹಾಗೂ ಋಷಿ - ಮುನಿಗಳನ್ನು ಕುಳ್ಳಿರಿಸಿದನು. ಆ ಸಮಯದಲ್ಲಿ ಬಹುಲಾಶ್ವನಿಗೆ ಪ್ರೇಮ - ಭಕ್ತಿಯ ಉದ್ರೇಕದಿಂದ ಹೃದಯ ತುಂಬಿಬಂತು. ಕಣ್ಣುಗಳಲ್ಲಿ ಆನಂದಾಶ್ರುಗಳು ಚಿಮ್ಮಿದವು. ಅವನು ತನ್ನ ಪರಮಪೂಜ್ಯ ಅತಿಥಿಯ

ಸಕುಟುಂಬೋ ವಹನ್ಮೂರ್ಧ್ನಾ ಪೂಜಯಾಂಚಕ್ರ ಈಶ್ವರಾನ್ ।
ಗಂಧಮಾಲ್ಯಾಂಬರಾಕಲ್ಪಧೂಪದೀಪಾರ್ಘ್ಯಗೋವೃಷೈಃ
॥ ೨೯ ॥

ವಾಚಾ ಮಧುರಯಾ ಪ್ರೀಣನ್ನಿದಮಾಹಾನ್ನತರ್ಪಿತಾನ್ ।
ಪಾದಾವಂಕಗತೌ ವಿಷ್ಣೋಃ ಸಂಸ್ಪೃಶನ್ ಶನಕೈರ್ಮುದಾ
॥ ೩೦ ॥

ರಾಜೋವಾಚ

ಭವಾನ್ ಹಿ ಸರ್ವಭೂತಾನಾಮಾತ್ಮಾ ಸಾಕ್ಷೀ ಸ್ವದೃಗ್ವಿಭೋ ।
ಅಥ ನಸ್ತ್ವತ್ಪದಾಂಭೋಜಂ ಸ್ಮರತಾಂ ದರ್ಶನಂ ಗತಃ
॥ ೩೧ ॥

ಸ್ವವಚಸ್ತದೃತಂ ಕರ್ತುಮಸ್ಮದ್ದೃಗ್ಗೋಚರೋ ಭವಾನ್ ।
ಯದಾತ್ಥೈಕಾಂತಭಕ್ತಾನ್ಮೇ ನಾನಂತಃ ಶ್ರೀರಜಃ ಪ್ರಿಯಃ
॥ ೩೨ ॥

ಕೋ ನು ತ್ವಚ್ಚರಣಾಂಭೋಜಮೇವಂವಿದ್ವಿಸೃಜೇತ್ಪುಮಾನ್ ।
ನಿಷ್ಕಿಂಚನಾನಾಂ ಶಾಂತಾನಾಂ ಮುನೀನಾಂ ಯಸ್ತ್ವಮಾತ್ಮದಃ
॥ ೩೩ ॥

ಯೋಽವತೀರ್ಯ ಯದೋರ್ವಂಶೇ ನೃಣಾಂ ಸಂಸರತಾಮಿಹ ।
ಯಶೋ ವಿತೇನೇ ತಚ್ಛಾಂತ್ಯೈ ತ್ರೈಲೋಕ್ಯವೃಜಿನಾಪಹಮ್
॥ ೩೪ ॥

ನಮಸ್ತುಭ್ಯಂ ಭಗವತೇ ಕೃಷ್ಣಾಯಾಕುಂಠಮೇಧಸೇ ।
ನಾರಾಯಣಾಯ ಋಷಯೇ ಸುಶಾಂತಂ ತಪ ಈಯುಷೇ
॥ ೩೫ ॥

ದಿನಾನಿ ಕತಿಚಿದ್ಭೂಮನ್ ಗೃಹಾನ್ ನೋ ನಿವಸ ದ್ವಿಜೈಃ ।
ಸಮೇತಃ ಪಾದರಜಸಾ ಪುನೀಹೀದಂ ನಿಮೇಃ ಕುಲಮ್
॥ ೩೬ ॥

ಇತ್ಯುಪಾಮಂತ್ರಿತೋ ರಾಜ್ಞಾ ಭಗವಾನ್ಲೋಕಭಾವನಃ ।
ಉವಾಸ ಕುರ್ವನ್ ಕಲ್ಯಾಣಂ ಮಿಥಿಲಾನರಯೋಷಿತಾಮ್
॥ ೩೭ ॥

ಶ್ರುತದೇವೋಽಚ್ಯುತಂ ಪ್ರಾಪ್ತಂ ಸ್ವಗೃಹಾನ್ಜನಕೋ ಯಥಾ ।
ನತ್ವಾ ಮುನೀನ್ ಸುಸಂಹೃಷ್ಟೋ ಧುನ್ವನ್ವಾಸೋ ನನರ್ತ ಹ
॥ ೩೮ ॥

ಚರಣಗಳಲ್ಲಿ ನಮಸ್ಕಾರ ಮಾಡಿ, ಪಾದಗಳನ್ನು ತೊಳೆದು ಆ ಪವಿತ್ರ ಚರಣೋದಕವನ್ನು ತನ್ನ ಕುಟುಂಬದವರೊಂದಿಗೆ ತಲೆಯಲ್ಲಿ ಧರಿಸಿಕೊಂಡನು. ಮತ್ತೆ ಭಗವಂತನನ್ನು ಮತ್ತು ಭಗವತ್ಸ್ವರೂಪಿಗಳಾದ ಋಷಿಗಳನ್ನು ಗಂಧ, ಪುಷ್ಪಮಾಲೆ, ವಸ್ತ್ರಾಲಂಕಾರ, ಧೂಪ, ದೀಪ, ಅರ್ಘ್ಯ, ಗೋ, ವೃಷಭ ಮುಂತಾದುವನ್ನು ಸಮರ್ಪಿಸಿ ಭಕ್ತಿಯಿಂದ ಪೂಜೆಮಾಡಿದನು. ॥ ೨೭-೨೯ ॥ ಎಲ್ಲ ಜನರೂ ಭೋಜನಾದಿಗಳಿಂದ ತೃಪ್ತರಾದಾಗ ಬಹುಲಾಶ್ವರಾಜನು ಭಗವಾನ್ ಶ್ರೀಕೃಷ್ಣನ ಚರಣಗಳನ್ನು ತನ್ನ ತೊಡೆಯಲ್ಲಿ ಎತ್ತಿಕೊಂಡು ಅತ್ಯಂತ ಆನಂದದಿಂದ ನಿಧಾನವಾಗಿ ಕಾಲುಗಳನ್ನೊತ್ತುತ್ತಾ, ಮಧುರವಾದ ಮಾತುಗಳಿಂದ ಭಗವಂತನನ್ನು ಸ್ತುತಿಸತೊಡಗಿದನು. ॥ ೩೦ ॥

**ಬಹುಲಾಶ್ವರಾಜನು ಹೇಳಿದನು** – ಪ್ರಭುವೇ ! ನೀನು ಸಮಸ್ತ ಪ್ರಾಣಿಗಳ ಆತ್ಮಸ್ವರೂಪದ ಸಾಕ್ಷಿಯೂ, ಸ್ವಯಂ ಪ್ರಕಾಶನೂ ಆಗಿರುವೆ. ನಾವು ಯಾವಾಗಲೂ ನಿನ್ನ ಚರಣ ಕಮಲಗಳ ಸ್ಮರಣೆಯನ್ನು ಮಾಡುತ್ತಲೇ ಇದ್ದೇವೆ. ಆದರಿಂದಲೇ ನೀನು ನಮಗೆ ದಿವ್ಯದರ್ಶನವನ್ನಿತ್ತು ನಮ್ಮನ್ನು ಕೃತಾರ್ಥರನ್ನಾಗಿ ಮಾಡಿರುವೆ.॥ ೩೧ ॥ ಭಗವಂತಾ ! ನನ್ನಲ್ಲಿ ಅನನ್ಯವಾದ ಭಕ್ತಿಯಿರುವ ಏಕಾಂತ ಭಕ್ತರು – ನನ್ನ ಸ್ವರೂಪರೇ ಆಗಿದ್ದಾರೆ. ಅವರು ಅನಂತನಿಗಿಂತಲೂ, ಅರ್ಧಾಂಗಿನೀ ಲಕ್ಷ್ಮೀದೇವಿಗಿಂತಲೂ, ಪುತ್ರನಾದ ಬ್ರಹ್ಮದೇವರಿಗಿಂತಲೂ ಹೆಚ್ಚು ಪ್ರಿಯರಾದವರು ಎಂದು ಹೇಳಿರುವ ನಿನ್ನ ಮಾತನ್ನು ಸತ್ಯಗೊಳಿಸುವ ಸಲುವಾಗಿಯೇ ನೀನು ನಮಗೆ ದರ್ಶನವನ್ನು ಕೊಟ್ಟಿರುವೆ. ॥ ೩೨ ॥ ನಿನ್ನ ಇಂತಹ ಪರಮ ದಯೆಯನ್ನೂ, ಪ್ರೇಮಪರವಶತೆಯನ್ನು ತಿಳಿದಿರುವ ಯಾವನು ತಾನೇ ನಿನ್ನ ಚರಣಕಮಗಳನ್ನು ತ್ಯಜಿಸಬಲ್ಲನು ? ನಿನ್ನನ್ನು ಬಿಟ್ಟು ಬೇರೆ ತಮ್ಮದೆಂಬ ಯಾವ ವಸ್ತುವೂ ಇಲ್ಲದಿರುವ ಶಾಂತಾತ್ಮರಾದ ಮುನಿಗಳಿಗೆ ನೀನು ನಿನ್ನನ್ನೇ ಕೊಟ್ಟುಕೊಳ್ಳುವೆ. ॥ ೩೩ ॥ ನೀನು ಯದುವಂಶದಲ್ಲಿ ಅವತರಿಸಿ ಹುಟ್ಟು ಸಾವುಗಳೆಂಬ ಚಕ್ರದಲ್ಲಿ ಸಿಕ್ಕಿ ನರಳುತ್ತಿರುವ ಮನುಷ್ಯರನ್ನು ಉದ್ಧರಿಸುವ ಸಲುವಾಗಿ, ಮೂರು ಲೋಕಗಳ ಪಾಪಗಳನ್ನು ತೊಡೆದು ಹಾಕುವಂತಹ ನಿನ್ನ ಧವಳ ಕೀರ್ತಿಯನ್ನು ವಿಸ್ತರಿಸಿರುವೆ. ॥ ೩೪ ॥ ಅಚಿಂತ್ಯ ಮಹಿಮನಾದ, ಪಾಪಹರನಾದ, ತಡೆಯಿಲ್ಲದ ಮೇಧಾಶಕ್ತಿಯುಳ್ಳ ನಾರಾಯಣ ಋಷಿಸ್ವರೂಪನೂ, ಶಾಂತತಪಸ್ಕನೂ ಆದ ಶ್ರೀಕೃಷ್ಣ ನಿನಗೆ ನಮಸ್ಕರಿಸುತ್ತೇನೆ. ॥ ೩೫ ॥ ಪರಬ್ರಹ್ಮ ಸ್ವರೂಪನೇ ! ನೀನು ಕೆಲವು ದಿವಸಗಳಾದರೂ ಋಷಿಮುನಿಗಳೊಡನೆ ನಮ್ಮ ಆತಿಥ್ಯವನ್ನು ಸ್ವೀಕರಿಸುತ್ತಾ ನಮ್ಮ ಅರಮನೆಯಲ್ಲೇ ಇದ್ದು, ನಿನ್ನ ಚರಣಕಮಲಗಳ ಧೂಳಿನಿಂದ ನಿಮಿವಂಶವನ್ನು ಪವಿತ್ರಗೊಳಿಸು. ॥ ೩೬ ॥ ಪರೀಕ್ಷಿತನೇ ! ಎಲ್ಲರ ಜೀವನದಾತ್ಯವಾದ ಭಗವಾನ್ ಶ್ರೀಕೃಷ್ಣನು ಬಹುಲಾಶ್ವರಾಜನ ಈ ಪ್ರಾರ್ಥನೆಯನ್ನು ಮನ್ನಿಸಿ ಮಿಥಿಲೆಯ ನರ-ನಾರಿಯರ ಕಲ್ಯಾಣವನ್ನುಂಟುಮಾಡುತ್ತಾ ಕೆಲವು ದಿವಸಗಳ ವರೆಗೆ ಅಲ್ಲೇ ಇದ್ದನು. ॥ ೩೭ ॥

ಪ್ರಿಯ ಪರೀಕ್ಷಿತನೇ ! ಇತ್ತ ರಾಜಾಬಹುಲಾಶ್ವನಂತೆಯೇ ಶ್ರುತದೇವನೂ ಭಗವಾನ್ ಶ್ರೀಕೃಷ್ಣನನ್ನು ಮತ್ತು ಋಷಿಮುನಿಗಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಶ್ರೀಕೃಷ್ಣನಿಗೂ, ಮುನಿಗಳಿಗೂ ನಮಸ್ಕರಿಸಿ ಆನಂದತುಂದಿಲನಾಗಿ ವಸ್ತ್ರವನ್ನು ಮೇಲಕ್ಕೆ ಹಾರಿಸುತ್ತಾ ಕುಣಿದಾಡಿದನು. ॥ ೩೮ ॥

ತೃಣಪೀಠಬೃಸೀಷ್ವೇತಾನಾನೀತೇಷೂಪವೇಶ್ಯ ಸಃ ।
ಸ್ವಾಗತೇನಾಭಿನಂದ್ಯಾಂಘ್ರೀನ್ ಸಭಾರ್ಯೋಽವನಿಜೇ ಮುದಾ
॥ ೩೯ ॥

ತದಂಭಸಾ ಮಹಾಭಾಗ ಆತ್ಮಾನಂ ಸಗೃಹಾನ್ವಯಮ್ ।
ಸ್ನಾಪಯಾಂಚಕ್ರ ಉದ್ಧರ್ಷೋ ಲಬ್ಧಸರ್ವಮನೋರಥಃ
॥ ೪೦ ॥

ಫಲಾರ್ಹಣೋಶೀರಶಿವಾಮೃತಾಂಬುಭಿ-
ರ್ಮೃದಾ ಸುರಭ್ಯಾ ತುಲಸೀಕುಶಾಂಬುಜೈಃ ।
ಆರಾಧಯಾಮಾಸ ಯಥೋಪಪನ್ನಯಾ
ಸಪರ್ಯಯಾ ಸತ್ತ್ವವಿವರ್ಧನಾಂಧಸಾ ॥ ೪೧ ॥

ಸ ತರ್ಕಯಾಮಾಸ ಕುತೋ ಮಮಾನ್ವಭೂ-
ದ್ಗೃಹಾಂಧಕೂಪೇ ಪತಿತಸ್ಯ ಸಂಗಮಃ ।
ಯಃ ಸರ್ವತೀರ್ಥಾಸ್ಪದಪಾದರೇಣುಭಿಃ
ಕೃಷ್ಣೇನ ಚಾಸ್ಯಾತ್ಮನಿಕೇತಭೂಸುರೈಃ ॥ ೪೨ ॥

ಸೂಪವಿಷ್ಟಾನ್ ಕೃತಾತಿಥ್ಯಾನ್ ಶ್ರುತದೇವ ಉಪಸ್ಥಿತಃ ।
ಸಭಾರ್ಯಸ್ವಜನಾಪತ್ಯ ಉವಾಚಾಂಘ್ರ್ಯಭಿಮರ್ಶನಃ
॥ ೪೩ ॥

ಶ್ರುತದೇವ ಉವಾಚ

ನಾದ್ಯ ನೋ ದರ್ಶನಂ ಪ್ರಾಪ್ತಃ ಪರಂ ಪರಮಪೂರುಷಃ ।
ಯರ್ಹೀದಂ ಶಕ್ತಿಭಿಃ ಸೃಷ್ಟ್ವಾ ಪ್ರವಿಷ್ಟೋ ಹ್ಯಾತ್ಮಸತ್ತಯಾ
॥ ೪೪ ॥

ಯಥಾ ಶಯಾನಃ ಪುರುಷೋ ಮನಸೈವಾತ್ಮಮಾಯಯಾ ।
ಸೃಷ್ಟ್ವಾ ಲೋಕಂ ಪರಂ ಸ್ವಾಪ್ನಮನುವಿಶ್ಯಾವಭಾಸತೇ
॥ ೪೫ ॥

ಶೃಣ್ವತಾಂ ಗದತಾಂ ಶಶ್ವದರ್ಚತಾಂ ತ್ವಾಭಿವಂದತಾಮ್ ।
ನೃಣಾಂ ಸಂವದತಾಮಂತರ್ಹೃದಿ ಭಾಸ್ಯಮಲಾತ್ಮನಾಮ್
॥ ೪೬ ॥

ಶ್ರುತದೇವನು ಮಣೆ, ಚಾಪೆ, ದರ್ಭಾಸನಗಳನ್ನು ಹಾಸಿ ಭಗವಾನ್ ಶ್ರೀಕೃಷ್ಣನನ್ನು ಮತ್ತು ಮುನಿಗಳನ್ನು ಕುಳ್ಳಿರಿಸಿ ಸ್ವಾಗತ ಭಾಷಣಗಳ ಮೂಲಕ ಅವರನ್ನು ಅಭಿನಂದಿಸಿ, ತನ್ನ ಪತ್ನಿಯೊಂದಿಗೆ ಅತ್ಯಂತ ಆನಂದದಿಂದ ಎಲ್ಲರ ಕಾಲುಗಳನ್ನು ತೊಳೆದನು. ॥ ೩೯ ॥ ಬಳಿಕ ಮಹಾ ಸೌಭಾಗ್ಯಶಾಲಿಯಾದ ಶ್ರುತದೇವನು ಭಗವಂತನ ಹಾಗೂ ಋಷಿಗಳ ಚರಣೋದಕವನ್ನು ಮನೆ-ಕುಟುಂಬದವರಿಗೆ ಸಿಂಪಡಿಸಿ, ತಾನೂ ತಲೆಯಲ್ಲಿ ಧರಿಸಿಕೊಂಡನು. ಆ ಸಮಯದಲ್ಲಿ ಅವನ ಸಕಲಮನೋರಥಗಳು ಪೂರ್ಣಗೊಂಡವು. ಅವನು ಹರ್ಷಾತಿರೇಕದಿಂದ ಉನ್ಮತ್ತನಂತಾಗಿದ್ದನು. ॥ ೪೦॥ ಅನಂತರ ಅವನು ಫಲ, ಗಂಧ, ಲಾವಂಚದಿಂದ ಸುವಾಸಿತವಾದ, ನಿರ್ಮಲ ವಾದ, ಸುಮಧುರವಾದ ಶುದ್ಧೋದಕ, ಸುಗಂಧಿತ ಮೃತ್ತಿಕೆ, ತುಲಸೀ, ದರ್ಭೆ, ಕಮಲ ಮುಂತಾದ ಸುಲಭವಾಗಿ ದೊರೆಯುವ ಪೂಜಾಸಾಮಗ್ರಿಗಳಿಂದಲೂ, ಸತ್ತ್ವಗುಣವನ್ನು ಹೆಚ್ಚಿಸುವ ಮೃಷ್ಟಾನ್ನದಿಂದಲೂ ಎಲ್ಲರ ಆರಾಧನೆಯನ್ನು ಮಾಡಿದನು. ॥ ೪೧ ॥ ಆ ಸಮಯದಲ್ಲಿ ಶ್ರುತದೇವನು ತನ್ನಲ್ಲೇ ಹೀಗೆ ಯೋಚಿಸಿದನು – 'ನಾನಾದರೋ ಮನೆ-ಮಠ ಎಂಬ ಸಂಸಾರದ ಕಗ್ಗತ್ತಲೆಯ ಬಾವಿಯಲ್ಲಿ ಬಿದ್ದ ನಿರ್ಭಾಗ್ಯನಾಗಿದ್ದೇನೆ. ನನಗೆ ಸಮಸ್ತ ತೀರ್ಥಗಳನ್ನು ತೀರ್ಥೀಕರಿಸುವ ಪರಮ ಪವಿತ್ರವಾದ ಪಾದಧೂಳಿ ಯನ್ನು ಹೊಂದಿರುವ ಭಗವಾನ್ ಶ್ರೀಕೃಷ್ಣನ ಮತ್ತು ಭಾಗವ ತೋತ್ತಮರ ಸಂಗವು ಹೇಗೆ ತಾನೇ ಪ್ರಾಪ್ತವಾಯಿತು ? ॥ ೪೨ ॥ ಅತಿಥಿಗಳೆಲ್ಲರೂ ಆದರದ ಆತಿಥ್ಯವನ್ನು ಸ್ವೀಕರಿಸಿ ಸುಖಾಸನ ಗಳಲ್ಲಿ ಕುಳಿತನಂತರ ಶ್ರುತದೇವನು ತನ್ನ ಪತ್ನೀ-ಪುತ್ರರೊಡನೆ ಹಾಗೂ ಇತರ ಸಂಬಂಧಿಗಳೊಂದಿಗೆ ಅವರ ಸೇವೆಯಲ್ಲಿ ತೊಡಗಿ ದನು. ಭಗವಾನ್ ಶ್ರೀಕೃಷ್ಣನ ಚರಣಕಮಲಗಳನ್ನು ಹಿಡಿದು ಕೊಂಡು ಅವನು ಪರಿ-ಪರಿಯಾಗಿ ಸ್ತುತಿಸಿದನು – ॥ ೪೩ ॥

**ಶ್ರುತದೇವನು ಹೇಳಿದನು –** ಪ್ರಭೋ! ನೀನು ವ್ಯಕ್ತಾವ್ಯಕ್ತ ರೂಪೀ ಪ್ರಕೃತಿ ಮತ್ತು ಜೀವರಿಂದ ಅತೀತನಾದ ಪುರುಷೋತ್ತಮ ನಾಗಿರುವೆ. ನೀನು ನನಗೆ ಇಂದೇ ದರ್ಶನ ಕೊಟ್ಟಿರುವೆ ಎಂದೇನಿಲ್ಲ. ನೀನು ನಿನ್ನ ಶಕ್ತಿಗಳಿಂದ ಈ ಜಗತ್ತನ್ನು ಸೃಷ್ಟಿಸಿ, ಆತ್ಮಸತ್ತೆಯ ರೂಪದಿಂದ ಇದರಲ್ಲಿ ಪ್ರವೇಶಿಸಿದೆ. ಅಂದಿನಿಂದಲೂ ನಮಗೆಲ್ಲ ರಿಗೆ ದೊರೆತಿರುವೆ. ॥ ೪೪ ॥ ಮಲಗಿರುವ ಮನುಷ್ಯನು ಸ್ವಪ್ನಾವಸ್ಥೆ ಯಲ್ಲಿ ಅವಿದ್ಯಾವಶನಾಗಿ ಮನಸ್ಸಿನಿಂದಲೇ ಸ್ವಪ್ನಜಗತ್ತನ್ನು ಸೃಷ್ಟಿಸಿ, ಆ ಜಗತ್ತಿನಲ್ಲೇ ಅನೇಕ ರೂಪಗಳಿಂದ ಕರ್ಮಮಾಡುತ್ತಿರುವಂತೆ ತೋರುತ್ತದೆ. ಹಾಗೆಯೇ ನೀನು ನಿನ್ನಲ್ಲೇ ನಿನ್ನ ಮಾಯೆಯಿಂದ ಜಗತ್ತನ್ನು ರಚಿಸಿ ಅದರಲ್ಲಿ ಪ್ರವಿಷ್ಟನಾಗಿ ಅನೇಕ ರೂಪಗಳಿಂದ ಪ್ರಕಾಶಿಸುತ್ತಿರುವೆ. ॥ ೪೫ ॥ ಸದಾಕಾಲವೂ ನಿನ್ನ ಲೀಲಾಕಥೆಗಳನ್ನು ಶ್ರವಣ-ಕೀರ್ತನೆ ಮತ್ತು ನಿನ್ನ ಪ್ರತಿಮೆಗಳ ಅರ್ಚನೆ-ವಂದನೆ ಮಾಡುತ್ತಾ, ಪರಸ್ಪರವಾಗಿ ನಿನ್ನ ಕುರಿತಾಗಿಯೇ ಚರ್ಚಿಸುತ್ತಿರು ವವರ ಹೃದಯ ಶುದ್ಧವಾಗುತ್ತದೆ ಮತ್ತು ನೀನು ಅದರಲ್ಲಿ ಪ್ರಕಾಶಿತನಾಗುವೆ. ॥ ೪೬ ॥

ಹೃದಿಸ್ಥೋಽಪ್ಯತಿದೂರಸ್ಥಃ ಕರ್ಮವಿಕ್ಷಿಪ್ತಚೇತಸಾಮ್ ।
ಆತ್ಮಶಕ್ತಿಭಿರಗ್ರಾಹ್ಯೋಽಪ್ಯಂತ್ಯುಪೇತಗುಣಾತ್ಮನಾಮ್
॥ ೪೭ ॥

ನಮೋಽಸ್ತು ತೇಽಧ್ಯಾತ್ಮವಿದಾಂ ಪರಾತ್ಮನೇ
ಅನಾತ್ಮನೇ ಸ್ವಾತ್ಮವಿಭಕ್ತಮೃತ್ಯವೇ ।
ಸಕಾರಣಾಕಾರಣಲಿಂಗಮೀಯುಷೇ
ಸ್ವಮಾಯಯಾಸಂವೃತರುದ್ಧದೃಷ್ಟಯೇ ॥ ೪೮ ॥

ಸ ತ್ವಂ ಶಾಧಿ ಸ್ವಭೃತ್ಯಾನ್ ನಃ ಕಿಂ ದೇವ ಕರವಾಮಹೇ ।
ಏತದಂತೋ ನೃಣಾಂ ಕ್ಲೇಶೋ ಯದ್ಭವಾನಕ್ಷಿಗೋಚರಃ
॥ ೪೯ ॥

*ಶ್ರೀಶುಕ ಉವಾಚ*

ತದುಕ್ತಮಿತ್ಯುಪಾಕರ್ಣ್ಯ ಭಗವಾನ್ ಪ್ರಣತಾರ್ತಿಹಾ ।
ಗೃಹೀತ್ವಾ ಪಾಣಿನಾ ಪಾಣಿಂ ಪ್ರಹಸಂಸ್ತಮುವಾಚ ಹ
॥ ೫೦ ॥

*ಶ್ರೀಭಗವಾನುವಾಚ*

ಬ್ರಹ್ಮಂಸ್ತೇಽನುಗ್ರಹಾರ್ಥಾಯ
ಸಂಪ್ರಾಪ್ತಾನ್ ವಿದ್ಧ್ಯಮೂನ್ ಮುನೀನ್ ।
ಸಂಚರಂತಿ ಮಯಾ ಲೋಕಾನ್
ಪುನಂತಃ ಪಾದರೇಣುಭಿಃ ॥ ೫೧॥

ದೇವಾಃ ಕ್ಷೇತ್ರಾಣಿ ತೀರ್ಥಾನಿ ದರ್ಶನಸ್ಪರ್ಶನಾರ್ಚನೈಃ ।
ಶನೈಃ ಪುನಂತಿ ಕಾಲೇನ ತದಪ್ಯರ್ಹತ್ತಮೇಕ್ಷಯಾ
॥ ೫೨ ॥

ಬ್ರಾಹ್ಮಣೋ ಜನ್ಮನಾ ಶ್ರೇಯಾನ್ಸರ್ವೇಷಾಂ ಪ್ರಾಣಿನಾಮಿಹ ।
ತಪಸಾ ವಿದ್ಯಯಾ ತುಷ್ಟ್ಯಾ ಕಿಮು ಮತ್ಕಲಯಾ ಯುತಃ
॥ ೫೩ ॥

ನ ಬ್ರಾಹ್ಮಣಾನ್ಮೇ ದಯಿತಂ ರೂಪಮೇತಚ್ಚತುರ್ಭುಜಮ್ ।
ಸರ್ವವೇದಮಯೋ ವಿಪ್ರಃ ಸರ್ವದೇವಮಯೋ ಹ್ಯಹಮ್
॥ ೫೪ ॥

ನೀನು ಸಮಸ್ತರ ಹೃದಯದಲ್ಲಿ ನೆಲೆಸಿದ್ದರೂ ಕಾಮ್ಯಕರ್ಮಗಳಲ್ಲಿ ತೊಡಗಿ ಚಂಚಲ ಚಿತ್ತರಾದವರಿಂದ ನೀನು ಬಹಳ ದೂರನಾಗಿರುವೆ. ಆದರೆ ನಿನ್ನ ಗುಣಗಾನದಿಂದ ತಮ್ಮ ಅಂತಃಕರಣವನ್ನು ಸದ್ಗುಣ ಸಂಪನ್ನವಾಗಿಸಿಕೊಂಡವರಿಗೆ ಚಿತ್ತವೃತ್ತಿಗಳಿಂದ ಅಗ್ರಾಹ್ಯನಾದರೂ ನೀನು ಅತ್ಯಂತ ಸಮೀಪದವನಾಗುವೆ. ॥ ೪೭ ॥

ಪ್ರಭೋ ! ಅಧ್ಯಾತ್ಮತತ್ತ್ವವನ್ನು ತಿಳಿದ ಜ್ಞಾನಿಗಳಿಗೆ ನೀನು ಆತ್ಮಸ್ವರೂಪನಾಗಿ ಅವರ ಹೃದಯದಲ್ಲಿ ಬೆಳಗುವೆ. ದೇಹಾತ್ಮಬುದ್ಧಿಯುಳ್ಳವರಿಗೆ ನೀನು ಅವರಿಗೆ ಪ್ರಾಪ್ತವಾಗುವ ಮೃತ್ಯುವಿನ ಸ್ವರೂಪನಾಗಿರುವೆ. ಮಹತ್ತತ್ತ್ವವೇ ಮೊದಲಾದ ಕಾರ್ಯಕಾರಣ ರೂಪವಾದ ಪ್ರಕೃತಿಯ ನಿಯಾಮಕನೂ, ಶಾಸಕನೂ ನೀನೇ ಆಗಿರುವೆ. ನಿನ್ನಿಂದಲೇ ಸೃಷ್ಟಿಸಲ್ಪಟ್ಟ ಮಾಯೆಯು ನಿನ್ನನ್ನು ಮುಚ್ಚಲಾರದು. ನೀನು ಮಾಯೆಗೆ ಅತೀತನಾಗಿರುವೆ. ಆದರೆ ಆ ಮಾಯೆಯು ಇತರರ ದೃಷ್ಟಿಯನ್ನು ಮುಚ್ಚಿಬಿಡುತ್ತದೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೪೮ ॥ ದೇವದೇವ ! ನಿನ್ನ ಸೇವಕರಾಗಿರುವ ನಾವು ನಿನ್ನ ಯಾವ ಸೇವೆ ಮಾಡಲಿ ಎಂದು ಆಜ್ಞಾಪಿಸು. ಕಣ್ಣುಗಳಿಂದ ನಿನ್ನ ದರ್ಶನವಾಗುವ ತನಕ ಜೀವರಿಗೆ ಕ್ಲೇಶಗಳಿರುತ್ತವೆ. ನಿನ್ನ ದರ್ಶನವಾಗುತ್ತಲೇ ಸಮಸ್ತ ಕ್ಲೇಶಗಳು ಹೊರಟುಹೋಗುತ್ತವೆ. ॥ ೪೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಶರಣಾಗತಭಯಹಾರಿಯಾದ ಭಗವಾನ್ ಶ್ರೀಕೃಷ್ಣನು ಶ್ರುತದೇವನ ಪ್ರಾರ್ಥನೆಯನ್ನು ಕೇಳಿ, ತನ್ನ ಕೈಯಿಂದ ಅವನ ಕೈ ಹಿಡಿದುಕೊಂಡು ಮುಗುಳ್ನಗುತ್ತಾ ಇಂತೆಂದನು. ॥ ೫೦ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಶ್ರುತದೇವನೇ ! ಈ ಮಹಾ-ಮಹಾ-ಋಷಿ-ಮುನಿಗಳು ನಿನ್ನನ್ನು ಅನುಗ್ರಹಿಸಲೆಂದೇ ಇಲ್ಲಿಗೆ ಆಗಮಿಸಿದ್ದಾರೆ. ಇವರು ತಮ್ಮ ಚರಣಕಮಲಗಳ ಧೂಳಿಯಿಂದ ಜನರನ್ನು ಮತ್ತು ಲೋಕಗಳನ್ನು ಪವಿತ್ರಗೊಳಿಸುತ್ತಾ ನನ್ನೊಡನೆ ಸಂಚರಿಸುತ್ತಿರುವರು. ॥ ೫೧ ॥ ದೇವತೆಗಳು, ಪುಣ್ಯಕ್ಷೇತ್ರಗಳು, ತೀರ್ಥಗಳು – ಇವೆಲ್ಲ ದರ್ಶನ, ಸ್ಪರ್ಶನ, ಅರ್ಚನ ಮುಂತಾದವುಗಳ ಮೂಲಕ ನಿಧಾನವಾಗಿ ಬಹಳ ದಿನಗಳಲ್ಲಿ ಪವಿತ್ರಗೊಳಿಸುತ್ತವೆ. ಆದರೆ ಸತ್ಪುರುಷರಾದವರು ತಮ್ಮ ದೃಷ್ಟಿಯಿಂದಲೇ ಪವಿತ್ರರಾಗಿಸಿಬಿಡುತ್ತಾರೆ. ಇಷ್ಟೇ ಅಲ್ಲ, ದೇವತಾದಿಗಳಲ್ಲಿರುವ ಪವಿತ್ರ ಮಾಡುವ ಶಕ್ತಿಯೂ ಕೂಡ ಅವರಿಗೆ ಸಂತರ ದೃಷ್ಟಿಯಿಂದಲೇ ದೊರೆತಿದೆ. ॥ ೫೨ ॥ ಶ್ರುತದೇವ ! ಹುಟ್ಟಿನಿಂದಲೇ ಬ್ರಾಹ್ಮಣನು ಸಕಲ ಪ್ರಾಣಿಗಳಿಗೂ ಶ್ರೇಷ್ಠನೆನಿಸುತ್ತಾನೆ. ಹೀಗಿರುವಾಗ ಅವನು ತಪಸ್ಸು ವಿದ್ಯೆ, ಸಂತೋಷ ಮತ್ತು ನನ್ನ ಉಪಾಸನೆ ನನ್ನ ಭಕ್ತಿಯಿಂದ ಕೂಡಿದ್ದರೆ ಹೇಳುವುದೇನಿದೆ ? ॥ ೫೩ ॥ ನನಗೆ ಈ ನನ್ನ ಚತುರ್ಭುಜಗಳಿಂದ ಕೂಡಿದ ಶರೀರವೂ ಕೂಡ ಬ್ರಾಹ್ಮಣರಷ್ಟು ಪ್ರಿಯವಲ್ಲ, ಏಕೆಂದರೆ, ಬ್ರಾಹ್ಮಣನು ಸರ್ವವೇದಮಯನಾಗಿದ್ದಾನೆ. ನಾನು ಸರ್ವದೇವಮಯನಾಗಿರುವೆನು. ಸರ್ವದೇವತೆಗಳು ವೇದಕ್ಕೆ ಅಧೀನರಲ್ಲವೇ ? ॥ ೫೪ ॥

ದುಷ್ಪ್ರಜ್ಞಾ ಅವಿದಿತ್ವೈವಮವಜಾನಂತ್ಯಸೂಯವಃ ।
ಗುರುಂ ಮಾಂ ವಿಪ್ರಮಾತ್ಮಾನಮರ್ಚಾದಾವಿಜ್ಯದೃಷ್ಟಯಃ
॥ ೫೫ ॥

ದುರ್ಬುದ್ಧಿ ಯುಳ್ಳ ಮನುಷ್ಯರು ಇದನ್ನು ತಿಳಿಯದೆ ಕೇವಲ ಶಿಲಾ-ಲೋಹವಿಗ್ರಹಗಳಲ್ಲಿಯೇ ಪೂಜ್ಯಬುದ್ಧಿಯನ್ನಿಡುತ್ತಾ, ಗುಣಗಳಲ್ಲಿ ದೋಷವನ್ನೇ ಹುಡುಕುತ್ತಾ, ಸರ್ವರಿಗೂ ಗುರುವಾದ ಬ್ರಾಹ್ಮಣರನ್ನು ಮತ್ತು ನನ್ನನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ॥ ೫೫ ॥ ಬ್ರಾಹ್ಮಣರು ನನ್ನ ಸಾಕ್ಷಾತ್ಕಾರವನ್ನು ಪಡೆದು ಈ ಚರಾಚರ ಜಗತ್ತು, ಇದರ ಸಂಬಂಧಿಸಿದ ಎಲ್ಲ ಭಾವನೆಗಳು, ಇದರ ಕಾರಣಗಳಾದ ಪ್ರಕೃತಿ-ಮಹತ್ತತ್ತ್ವವೇ ಮೊದಲಾದ ಎಲ್ಲವೂ ಆತ್ಮಸ್ವರೂಪೀ ಭಗವಂತನ ರೂಪಗಳೇ ಆಗಿವೆ ಎಂದು ತಮ್ಮ ಚಿತ್ತದಲ್ಲಿ ನಿಶ್ಚಯಿಸಿಕೊಳ್ಳುವರು. ॥ ೫೬ ॥ ಅದಕ್ಕಾಗಿ ಶ್ರುತದೇವನೇ! ನೀನು ಈ ಮಹರ್ಷಿಗಳನ್ನು ನನ್ನ ಸ್ವರೂಪರೆಂದೇ ತಿಳಿದು ಪೂರ್ಣ ಶ್ರದ್ಧೆಯಿಂದ ಇವರನ್ನು ಪೂಜಿಸು. ನೀನು ಹೀಗೆ ಮಾಡಿದರೆ ಆಯಾಸವಿಲ್ಲದೆ ಸಾಕ್ಷಾತ್ ನನ್ನ ಪೂಜೆಯನ್ನೇ ಮಾಡಿದಂತಾಗುವುದು. ಇಲ್ಲದಿದ್ದರೆ ಬಹುಮೂಲ್ಯ ಪೂಜಾಸಾಮಗ್ರಿಗಳಿಂದಲೂ ಮಾಡಿದ ಅರ್ಚನೆಯು ನನ್ನ ಪೂಜೆಯಾಗಲಾರದು. ॥ ೫೭ ॥

ಚರಾಚರಮಿದಂ ವಿಶ್ವಂ ಭಾವಾ ಯೇ ಚಾಸ್ಯ ಹೇತವಃ ।
ಮದ್ರೂಪಾಣೀತಿ ಚೇತಸ್ಯಾಧತ್ತೇ ವಿಪ್ರೋ ಮದೀಕ್ಷಯಾ
॥ ೫೬ ॥

ತಸ್ಮಾದ್ ಬ್ರಹ್ಮಋಷೀನೇತಾನ್ ಬ್ರಹ್ಮನ್ ಮಚ್ಛ್ರದ್ಧಯಾರ್ಚಯ ।
ಏವಂ ಚೇದರ್ಚಿತೋಽಸ್ಮ್ಯದ್ಧಾ ನಾನ್ಯಥಾ ಭೂರಿಭೂತಿಭಿಃ
॥ ೫೭ ॥

ಶ್ರೀಶುಕ ಉವಾಚ

ಸ ಇತ್ಥಂ ಪ್ರಭುಣಾಽಽದಿಷ್ಟಃ ಸಹಕೃಷ್ಣಾನ್ ದ್ವಿಜೋತ್ತಮಾನ್ ।
ಆರಾಧ್ಯೈಕಾತ್ಮಭಾವೇನ ಮೈಥಿಲಶ್ಚಾಪ ಸದ್ಗತಿಮ್
॥ ೫೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಈ ಆದೇಶವನ್ನು ಕೇಳಿ ಶ್ರುತದೇವನು ಶ್ರೀಕೃಷ್ಣನನ್ನು ಮತ್ತು ಆ ಬ್ರಹ್ಮರ್ಷಿಗಳನ್ನು ಏಕಾತ್ಮಭಾವನೆಯಿಂದ ಆರಾಧಿಸಿದನು ಹಾಗೂ ಅವರ ಕೃಪೆಯಿಂದ ಅವನು ಭಗವತ್ಸ್ವರೂಪವನ್ನು ಹೊಂದಿದನು. ಬಹುಲಾಶ್ವರಾಜನೂ ಅದೇ ಸದ್ಗತಿಯನ್ನು ಪಡೆದನು. ॥ ೫೮ ॥ ಪ್ರಿಯ ಪರೀಕ್ಷಿತನೇ! ಭಕ್ತನಾದವನು ಭಗವಂತನಲ್ಲಿ ಹೇಗೆ ಭಕ್ತಿಯನ್ನಿಡುವನೋ ಹಾಗೆಯೇ ಭಗವಂತನೂ ಕೂಡ ಭಕ್ತರ ಕುರಿತು ಭಕ್ತಿಯನ್ನಿಡುತ್ತಾನೆ. ಇಬ್ಬರೂ ಭಕ್ತರಿಗೆ ಸಂತೋಷಪಡಿಸಲಿಕ್ಕಾಗಿ ಕೆಲವು ದಿನಗಳವರೆಗೆ ಶ್ರೀಕೃಷ್ಣನು ಮಿಥಿಲೆಯಲ್ಲೇ ಇದ್ದು, ಅವರಿಗೆ ಸಾಧು ಸತ್ಪುರುಷರ ಮಾರ್ಗದ ಉಪದೇಶವನ್ನಿತ್ತು ದ್ವಾರಕೆಗೆ ಮರಳಿದನು. ॥ ೫೯ ॥

ಏವಂ ಸ್ವಭಕ್ತಯೋ ರಾಜನ್ ಭಗವಾನ್ ಭಕ್ತಭಕ್ತಿಮಾನ್ ।
ಉಷಿತ್ವಾಽಽದಿಶ್ಯ ಸನ್ಮಾರ್ಗಂ ಪುನರ್ದ್ವಾರವತೀಮಗಾತ್
॥ ೫೯ ॥

ಎಂಭತ್ತಾರನೆಯ ಅಧ್ಯಾಯವು ಮುಗಿಯಿತು. ॥ ೮೬ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ಶ್ರುತದೇವಾನುಗ್ರಹೋ ನಾಮ ಷಡಶೀತಿತಮೋಽಧ್ಯಾಯಃ ॥ ೮೬ ॥

# ಎಂಭತ್ತೇಳನೆಯ ಅಧ್ಯಾಯ

## ವೇದಸ್ತುತಿ

ಪರೀಕ್ಷಿದುವಾಚ

ಬ್ರಹ್ಮನ್ ಬ್ರಹ್ಮಣ್ಯನಿರ್ದೇಶ್ಯೇ ನಿರ್ಗುಣೇ ಗುಣವೃತ್ತಯಃ ।
ಕಥಂ ಚರಂತಿ ಶ್ರುತಯಃ ಸಾಕ್ಷಾತ್ ಸದಸತಃ ಪರೇ
॥ ೧ ॥

**ಪರೀಕ್ಷಿದ್ರಾಜನು ಕೇಳಿದನು** - ಬ್ರಾಹ್ಮಣೋತ್ತಮರೇ! ಪರಬ್ರಹ್ಮತತ್ತ್ವವು ಕಾರ್ಯ-ಕಾರಣಗಳಿಂದ ಸರ್ವಥಾ ಅತೀತವಾಗಿದೆ. ಮನಸ್ಸು-ವಾಣಿಯ ಮೂಲಕ ಸಂಕೇತರೂಪದಿಂದಲೂ ಅದನ್ನು ನಿರ್ದೇಶಿಸಲಾಗುವುದಿಲ್ಲ. ಆದರೆ ಶ್ರುತಿಗಳು ಗುಣಗಳ ವಿಷಯದಲ್ಲೇ ಹೇಳಬಲ್ಲವು. ನಿರ್ಗುಣ ತತ್ತ್ವದ ಸ್ವರೂಪವಾದರೋ ಅವುಗಳಿಗೆ ನಿಲುಕಲಾರದು. ಹೀಗಿರುವಾಗ ಶ್ರುತಿಗಳು ನಿರ್ಗುಣ ಬ್ರಹ್ಮವನ್ನು ಹೇಗೆ ಪ್ರತಿಪಾದಿಸುತ್ತವೆ? ॥ ೧ ॥

*ಶ್ರೀಶುಕ ಉವಾಚ*

**ಬುದ್ಧೀಂದ್ರಿಯಮನಃಪ್ರಾಣಾನ್ ಜನಾನಾಮಸೃಜತ್ಪ್ರಭುಃ ।**
**ಮಾತ್ರಾರ್ಥಂ ಚ ಭವಾರ್ಥಂ ಚ ಆತ್ಮನೇಽಕಲ್ಪನಾಯ ಚ**
**॥ ೨ ॥**

**ಸೈಷಾ ಹ್ಯುಪನಿಷದ್ಬ್ರಾಹ್ಮೀ ಪೂರ್ವೇಷಾಂ ಪೂರ್ವಜೈರ್ಧೃತಾ ।**
**ಶ್ರದ್ಧಯಾ ಧಾರಯೇದ್ಯಸ್ತಾಂ ಕ್ಷೇಮಂ ಗಚ್ಛೇದಕಿಂಚನಃ**
**॥ ೩ ॥**

**ಅತ್ರ ತೇ ವರ್ಣಯಿಷ್ಯಾಮಿ ಗಾಥಾಂ ನಾರಾಯಣಾನ್ವಿತಾಮ್ ।**
**ನಾರದಸ್ಯ ಚ ಸಂವಾದಮೃಷೇರ್ನಾರಾಯಣಸ್ಯ ಚ**
**॥ ೪ ॥**

**ಏಕದಾ ನಾರದೋ ಲೋಕಾನ್ ಪರ್ಯಟನ್ ಭಗವತ್ಪ್ರಿಯಃ ।**
**ಸನಾತನಮೃಷಿಂ ದ್ರಷ್ಟುಂ ಯಯೌ ನಾರಾಯಣಾಶ್ರಮಮ್**
**॥ ೫ ॥**

**ಯೋ ವೈ ಭಾರತವರ್ಷೇಽಸ್ಮಿನ್ ಕ್ಷೇಮಾಯ ಸ್ವಸ್ತಯೇ ನೃಣಾಮ್ ।**
**ಧರ್ಮಜ್ಞಾನಶಮೋಪೇತಮಾಕಲ್ಪಾದಾಸ್ಥಿತಸ್ತಪಃ**
**॥ ೬ ॥**

**ತತ್ರೋಪವಿಷ್ಟಮೃಷಿಭಿಃ ಕಲಾಪಗ್ರಾಮವಾಸಿಭಿಃ ।**
**ಪರೀತಂ ಪ್ರಣತೋಽಪೃಚ್ಛದಿದಮೇವ ಕುರೂದ್ವಹ**
**॥ ೭ ॥**

**ತಸ್ಮೈ ಹ್ಯವೋಚದ್ಭಗವಾನ್ಋಷೀಣಾಂ ಶೃಣ್ವತಾಮಿದಮ್ ।**
**ಯೋ ಬ್ರಹ್ಮವಾದಃ ಪೂರ್ವೇಷಾಂ ಜನಲೋಕನಿವಾಸಿನಾಮ್**
**॥ ೮ ॥**

*ಶ್ರೀಭಗವಾನುವಾಚ*

**ಸ್ವಾಯಂಭುವ ಬ್ರಹ್ಮಸತ್ರಂ ಜನಲೋಕೇಽಭವತ್ಪುರಾ ।**
**ತತ್ರಸ್ಥಾನಾಂ ಮಾನಸಾನಾಂ ಮುನೀನಾಮೂರ್ಧ್ವರೇತಸಾಮ್**
**॥ ೯ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನು ಮನುಷ್ಯರಿಗಾಗಿ ಮನ, ಬುದ್ಧಿ, ಇಂದ್ರಿಯಗಳನ್ನು ಮತ್ತು ಪ್ರಾಣಗಳನ್ನೂ, ಜೊತೆಗೆ ವಿಷಯಗಳನ್ನು ಸೃಷ್ಟಿಸಿದನು. ಅದರಿಂದ ಅವರು ಆ ವಿಷಯಗಳನ್ನು ಅನುಭವಿಸುತ್ತಾ ಜೀವನ ಧಾರಣಮಾಡಬಲ್ಲರು. ಇದರಿಂದ ಸೃಷ್ಟಿಯ ಪರಂಪರೆಯೂ ನಡೆಯುತ್ತಿರುವುದು ಮತ್ತು ಅವರು ಧರ್ಮವನ್ನು ಆಚರಿಸ ಬಲ್ಲರು, ಕರ್ಮಫಲವನ್ನು ಭೋಗಿಸಬಲ್ಲರು. ಜೊತೆಗೆ ಅವರು ತಮ್ಮ ಆತ್ಮಸ್ವರೂಪವನ್ನು ಅರಿತುಕೊಂಡು ಸಂಸಾರಬಂಧನದಿಂದ ಮುಕ್ತರೂ ಆಗುವರು. ॥ ೨ ॥

ಬ್ರಹ್ಮನನ್ನು ಪ್ರತಿಪಾದಿಸುವ ಈ ಉಪನಿಷತ್ತನ್ನು ಪೂರ್ವಜರಿಗೂ ಪೂರ್ವಜರಾದ ಸನಕಾದಿ ಋಷಿಗಳು ಧರಿಸಿದ್ದರು. ಯಾರಿಗೆ ಯಾವುದೇ ಕಾಮನೆ ಇಲ್ಲವೋ ಅವರೇ ಇದನ್ನು ಶ್ರದ್ಧೆಯಿಂದ ಧರಿಸಬಲ್ಲರು. ಅವರೇ ಕಲ್ಯಾಣ ಸ್ವರೂಪವಾದ ಪರಬ್ರಹ್ಮ ಪರಮಾತ್ಮನನ್ನು ಪಡೆದುಕೊಳ್ಳುತ್ತಾರೆ. ॥ ೩ ॥ ಈ ವಿಷಯದಲ್ಲಿ ಭಗವಾನ್ ನಾರಾಯಣನಿಗೆ ಸಂಬಂಧಿಸಿದ ಒಂದು ಕಥೆಯನ್ನು ಹೇಳುವೆನು. ಅದರಲ್ಲಿ ದೇವಋಷಿ ನಾರದರು ಮತ್ತು ಋಷಿಶ್ರೇಷ್ಠ ನಾರಾಯಣನ ಸಂವಾದವಿದೆ. ॥ ೪ ॥ ಒಮ್ಮೆ ಭಗವಂತನ ಪ್ರಿಯಭಕ್ತರಾದ ದೇವಋಷಿ ನಾರದರು ಬೇರೆ-ಬೇರೆ ಲೋಕ ಗಳಲ್ಲಿ ಸಂಚರಿಸುತ್ತಾ ಸನಾತನ ಋಷಿಗಳಾದ ಭಗವಾನ್ ನಾರಾಯಣನನ್ನು ದರ್ಶಿಸಲು ಬದರಿಕಾಶ್ರಮಕ್ಕೆ ತೆರಳಿದನು. ॥ ೫ ॥ ಭಗವಾನ್ ನಾರಾಯಣನು ಮನಷ್ಯರ ಅಭ್ಯುದಯ (ಲೌಕಿಕ ಕಲ್ಯಾಣ)ಕ್ಕಾಗಿ ಮತ್ತು ನಿಃಶ್ರೇಯಸ್ಸಿಗಾಗಿ (ಮೋಕ್ಷ ಪ್ರಾಪ್ತಿಗಾಗಿ) ಈ ಭಾರತ ವರ್ಷದಲ್ಲಿ ಕಲ್ಪದ ಪ್ರಾರಂಭದಿಂದಲೇ ಧರ್ಮ, ಜ್ಞಾನ, ಸಂಯಮದೊಂದಿಗೆ ಮಹಾತಪಸ್ಸನ್ನು ಮಾಡುತ್ತಿದ್ದನು. ॥ ೬ ॥ ನಾರದರು ಬದರಿಕಾಶ್ರಮಕ್ಕೆ ಹೋಗಿ ಭಗವಾನ್ ನಾರಾಯಣನಿಗೆ ನಮಸ್ಕಾರ ಮಾಡಿ ವಿನಮ್ರಭಾವದಿಂದ ಕುಳಿತು ತತ್ತ್ವದ ಬಗೆಗೆ ಇದೇ ಪ್ರಶ್ನೆ ಮಾಡಿದರು. ಭಗವಂತನು ಆ ಕಲಾಪಗ್ರಾಮ ವಾಸಿಗಳಾದ ಋಷಿಗಳ ಸಮಕ್ಷಮದಲ್ಲೇ ಈ ವಿಷಯವಾಗಿ ತಿಳಿಸಿದ್ದನು. ಪ್ರಿಯ ಪರೀಕ್ಷಿತನೇ! ನೀನೂ ಕೂಡ ಈಗ ನನ್ನಲ್ಲಿ ಆ ಬ್ರಹ್ಮನ ವಿಷಯದಲ್ಲೇ ಕೇಳುತ್ತಿರುವೆ. ಬ್ರಹ್ಮನ ಸ್ವರೂಪದ ವಿಷಯದಲ್ಲಿ ನಾನು ನಿನಗೆ ಹೇಳುವುದನ್ನು ನೀನು ಭಗವಾನ್ ನಾರಾಯಣನ ಶಬ್ದಗಳಲ್ಲೇ ಕೇಳು, ಇದನ್ನು ಬಹಳ ಹಿಂದೆ ಸ್ವತಃ ಭಗವಾನ್ ನಾರಾಯಣನು ಜನೋಲೋಕ ನಿವಾಸಿಗಳಾದ ಸನಕಾದಿ ಋಷಿಗಳಿಗೆ ಹೇಳಿದ್ದನು. ಅಲ್ಲಿಯೂ ಬ್ರಹ್ಮವಿಷಯಕ ವಾದ ಚರ್ಚೆಯೇ ನಡೆಯುತ್ತಿತ್ತು. ॥ ೮ ॥

**ಭಗವಾನ್ ನಾರಾಯಣನು ಹೇಳಿದನು** – ಪ್ರಿಯನಾರದನೇ! ಒಮ್ಮೆ ಜನೋಲೋಕದಲ್ಲಿ ಇಂತಹುದೇ ಒಂದು ಬ್ರಹ್ಮಸತ್ರ ನಡೆದಿತ್ತು. ಆ ಸತ್ರವು ಅಲ್ಲಿ ವಾಸಿಸುವ ಬ್ರಹ್ಮಮಾನಸ ಪುತ್ರರಾದ ಸನಕ, ಸನಂದನ, ಸನಾತನ, ಸನತ್ಕುಮಾರ ಇವರ ನಡುವೆ ನಡೆ ದಿತ್ತು. ಇವರು ನಾಲ್ವರೂ ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದಾರೆ. ॥ ೯ ॥

ಶ್ವೇತದ್ವೀಪಂ ಗತವತಿ ತ್ವಯಿ ದ್ರಷ್ಟುಂ ತದೀಶ್ವರಮ್ ।
ಬ್ರಹ್ಮವಾದಃ ಸುಸಂವೃತ್ತಃ ಶ್ರುತಯೋ ಯತ್ರ ಶೇರತೇ ।
ತತ್ರ ಹಾಯಮಭೂತ್ ಪ್ರಶ್ನಸ್ತ್ವಂ ಮಾಂ ಯಮನುಪೃಚ್ಛಸಿ
॥ ೧೦ ॥

ತುಲ್ಯ ಶ್ರುತತಪಃಶೀಲಾಸ್ತುಲ್ಯಸ್ವೀಯಾರಿಮಧ್ಯಮಾಃ ।
ಅಪಿ ಚಕ್ರುಃ ಪ್ರವಚನಮೇಕಂ ಶುಶ್ರೂಷವೋಽಪರೇ
॥ ೧೧ ॥

*ಸನಂದನ ಉವಾಚ*

ಸ್ವಸೃಷ್ಟಮಿದಮಾಪೀಯ ಶಯಾನಂ ಸಹ ಶಕ್ತಿಭಿಃ ।
ತದಂತೇ ಬೋಧಯಾಂಚಕ್ರುಸ್ತಲ್ಲಿಂಗೈಃ ಶ್ರುತಯಃ ಪರಮ್
॥ ೧೨ ॥

ಯಥಾ ಶಯಾನಂ ಸಮ್ರಾಜಂ ವಂದಿನಸ್ತತ್ಪರಾಕ್ರಮೈಃ ।
ಪ್ರತ್ಯೂಷೇಽಭ್ಯೇತ್ಯ ಸುಶ್ಲೋಕೈರ್ಬೋಧಯಂತ್ಯನುಜೀವಿನಃ
॥ ೧೩ ॥

*ಶ್ರುತಯ ಊಚುಃ*

ಜಯ ಜಯ ಜಹ್ಯಜಾಮಜಿತ ದೋಷಗೃಭೀತಗುಣಾಂ
ತ್ವಮಸಿ ಯದಾತ್ಮನಾ ಸಮವರುದ್ಧಸಮಸ್ತಭಗಃ ।
ಅಗಜಗದೋಕಸಾಮಖಿಲಶಕ್ತ್ಯವಬೋಧಕ ತೇ
ಕ್ವಚಿದಜಯಾಽಽತ್ಮನಾ ಚ ಚರತೋಽನುಚರೇನ್ನಿಗಮಃ
॥ ೧೪ ॥

ಆ ಸಮಯದಲ್ಲಿ ನೀನು ಶ್ವೇತದ್ವೀಪಾಧಿಪತಿಯಾದ ನನ್ನ ಅನಿರುದ್ಧ ಮೂರ್ತಿಯನ್ನು ದರ್ಶನ ಮಾಡಲು ಹೋಗಿದ್ದೆ. ಆ ಸಮಯದಲ್ಲಿ ಜನೋಲೋಕದಲ್ಲಿ ಬ್ರಹ್ಮನ ವಿಷಯದಲ್ಲಿ ಬಹಳ ಸುಂದರವಾದ ಚರ್ಚೆನಡೆಯಿತು. ಈ ವಿಷಯದಲ್ಲಿ ಶ್ರುತಿಗಳೂ ಕೂಡ ವರ್ಣಿಸಲಾರವು. ಅಲ್ಲಿ 'ಶ್ರುತಿಗಳು ಹೇಗೆ ನಿರ್ಗುಣ ಬ್ರಹ್ಮನನ್ನು ವರ್ಣಿಸಬಲ್ಲವು?' ಎಂದು ನೀನು ನನ್ನಲ್ಲಿ ಕೇಳಿರುವ ಪ್ರಶ್ನೆಯೇ ಪ್ರಸ್ತುತವಾಗಿತ್ತು. ॥ ೧೦ ॥ ಸನಕಾದಿ ನಾಲ್ವರೂ ಋಷಿಗಳು ಶಾಸ್ತ್ರೀಯ ಜ್ಞಾನದಿಂದ ಸಂಪನ್ನರಾಗಿದ್ದರು. ತಪಸ್ಸು ಶೀಲ-ಸ್ವಭಾವಗಳಲ್ಲಿಯೂ ಸಮಾನರಾಗಿದ್ದರು. ಅವರ ದೃಷ್ಟಿಯಲ್ಲಿ ಶತ್ರು-ಮಿತ್ರ ಉದಾಸೀನ - ಇವರುಗಳು ಒಂದೇ ಆಗಿದ್ದರು. ಅವರು ತಮ್ಮಲ್ಲಿ ಸನಂದನನ್ನು ಪ್ರವಚನಕಾರನನ್ನಾಗಿ ಮಾಡಿ ಉಳಿದ ಮೂವರೂ ಶ್ರೋತೃಗಳಾದರು. ॥ ೧೧ ॥

**ಸನಂದನರು ಹೇಳುತ್ತಾರೆ** - ಪರಮಾತ್ಮನು ತಾನೇ ಸೃಷ್ಟಿಸಿದ್ದ ಜಗತ್ತನ್ನು ತನ್ನೊಳಗೆ ಲೀನವಾಗಿಸಿಕೊಂಡು ತನ್ನ ಶಕ್ತಿಗಳೊಂದಿಗೆ ಯೋಗನಿದ್ರಾವಶನಾಗಿ ಮಲಗಿದ್ದು ಪ್ರಳಯಕಾಲವು ಮುಗಿದು ಪುನಃ ಸೃಷ್ಟಿಯ ಸಮಯವು ಬಂದಾಗ - ಮಲಗಿರುವ ಸಾಮ್ರಾಟನನ್ನು ಎಚ್ಚರಿಸಲು ಪ್ರಾತಃಕಾಲದಲ್ಲಿ ರಾಜೋಪಜೀವಿಗಳಾದ ವಂದಿಜನರು ಬಂದು ಅವನ ಪರಾಕ್ರಮಗಳನ್ನು ಮತ್ತು ಸತ್ಕೀರ್ತಿಯನ್ನು ವರ್ಣಿಸಿ ಎಬ್ಬಿಸುವಂತೆಯೇ-ಶುತ್ರಿಗಳು ಪರಮಾತ್ಮನನ್ನು ಪ್ರತಿಪಾದಿಸುವ ಸೂಕ್ತಗಳಿಂದ ಎಚ್ಚರಗೊಳಿಸಿದವು. ॥ ೧೨-೧೩ ॥

**ಶ್ರುತಿಗಳು ಹೇಳುತ್ತವೆ** - ಅಜಿತನೇ! ನೀನು ಸರ್ವಶ್ರೇಷ್ಠನಾಗಿರುವೆ. ನಿನಗೆ ಜಯವಾಗಲಿ! ಜಯವಾಗಲಿ! ಈ ಚರಾಚರ ಜಗತ್ತಿನ ಆನಂದಾದಿ ಗುಣಗಳನ್ನು ಮರೆಮಾಡುವುದಕ್ಕಾಗಿಯೇ ಈ ಮಾಯೆಯು ಸತ್ತ್ವಾದಿ ಗುಣಗಳನ್ನು ಸ್ವೀಕರಿಸಿದೆ. ಅಂತಹ ಮಾಯೆಯನ್ನು ನೀನು ನಾಶಗೊಳಿಸು. ಏಕೆಂದರೆ, ನೀನೇ ಸಾಕ್ಷಾತ್ತಾಗಿ ಸಮಸ್ತ ಐಶ್ವರ್ಯಗಳಿಂದ ಪರಿಪೂರ್ಣನಾಗಿರುವೆ. ಆದ್ದರಿಂದ ಮನುಷ್ಯರೇ ಆದಿಯಾಗಿ ಸಮಸ್ತ ಪ್ರಾಣಿಗಳ ಜ್ಞಾನ ವೈರಾಗ್ಯ ಮುಂತಾದ ಶಕ್ತಿಗಳನ್ನು ಜಾಗ್ರತಗೊಳಿಸುವವನೂ ನೀನೇ ಆಗಿರುವೆ. ಕೆಲವೊಮ್ಮೆ ನೀನು ಮಾಯೆಯಿಂದ ಜಗತ್ತಿನ ರೂಪದಲ್ಲಿ ಪ್ರಕಟನಾಗುವೆ. ಕೆಲವೊಮ್ಮೆ ಸಚ್ಚಿದಾನಂದ ಸ್ವರೂಪದಲ್ಲಿ ಸ್ಥಿತನಾಗಿರುವೆ. ಎಂದಾದರೂ ನೀನು ವಿಶ್ವವನ್ನು ನಿರ್ಮಿಸುವ ಸಂಕಲ್ಪವನ್ನೂ ಮಾಡಿದಾಗ ಸೃಷ್ಟಿ, ಸ್ಥಿತಿ, ಸಂಹಾರದ ಲೀಲೆಯನ್ನು ಮಾಡುವೆ. (ಅಥವಾ ಜಗತ್ತಿನ ಕಲ್ಯಾಣಕ್ಕಾಗಿ, ಅವತರಿಸಿಯೂ ಲೀಲೆ ಮಾಡುವೆ.) ಅಂತಹ ನಿನ್ನ ಸಗುಣರೂಪವನ್ನು ವರ್ಣಿಸುವುದರಲ್ಲಿ ಶ್ರುತಿಗಳಾದ ನಾವು ಯತ್ಕಿಂಚಿತ್ ಸಮರ್ಥರಾಗುತ್ತೇವೆ. ॥ ೧೪ ॥

ಪ್ರಭುವೇ! ಈ ಸಮಸ್ತ ಜಗತ್ತು ನಿನ್ನಿಂದಲೇ ಉತ್ಪನ್ನವಾಗಿದೆ. ಆದಕ್ಕಾಗಿ ಈ ಸಂಪೂರ್ಣ ಜಗತ್ತು ಬ್ರಹ್ಮನದೇ ಸ್ವರೂಪವಾಗಿದೆ. ಪರಮಜ್ಞಾನಿಗಳು ಇಡೀ ವಿಶ್ವವನ್ನು ಬ್ರಹ್ಮಮಯವಾಗಿ ಭಾವಿಸುತ್ತಾರೆ. ಏಕೆಂದರೆ, ಇದು ಬ್ರಹ್ಮನಿಂದಲೇ ಉತ್ಪನ್ನವಾಗಿದೆ ಮತ್ತು ಬ್ರಹ್ಮನಲ್ಲೇ ವಿಲೀನಗೊಳ್ಳುವುದು. ಶೇಷವಾಗಿ ಪರಮಾತ್ಮನೇ

ಬೃಹದುಪಲಬ್ಧಮೇತದವಯಂತ್ಯವಶೇಷತಯಾ

ಯತ ಉದಯಾಸ್ತಮಯೌ ವಿಕೃತೇರ್ಮೃದಿ ವಾವಿಕೃತಾತ್ ।

ಅತ ಋಷಯೋ ದಧುಸ್ತ್ವಯಿ ಮನೋವಚನಾಚರಿತಂ

ಕಥಮಯಥಾ ಭವಂತಿ ಭುವಿ ದತ್ತಪದಾನಿ ನೃಣಾಮ್

॥ ೧೫ ॥

ಇತಿ ತವ ಸೂರಯಸ್ತ್ರ್ಯಧಿಪತೇಽಖಿಲಲೋಕಮಲ-

ಕ್ಷಪಣಕಥಾಮೃತಾಬ್ಧಿಮವಗಾಹ್ಯ ತಪಾಂಸಿ ಜಹುಃ ।

ಕಿಮುತ ಪುನಃ ಸ್ವಧಾಮವಿಧುತಾಶಯಕಾಲಗುಣಾಃ

ಪರಮ ಭಜಂತಿ ಯೇ ಪದಮಜಸ್ರಸುಖಾನುಭವಮ್

॥ ೧೬ ॥

ಉಳಿಯುವವನು. ಆದಕ್ಕಾಗಿ ತತ್ತ್ವದೃಷ್ಟಿಯಿಂದ ಏಕಮಾತ್ರ ಪರಬ್ರಹ್ಮನ ಸತ್ತೆಯೆ ಇದೆ. ಮಣ್ಣಿನಿಂದ ನಿರ್ಮಿಸಿದ ನಾನಾ ತರಹದ ಪಾತ್ರೆಗಳಲ್ಲಿ ಬೇರೆ-ಬೇರೆ ಆಕೃತಿಗಳು ಇರುತ್ತವೆ. ಪಾತ್ರೆಗಳು ಆಗುವ ಮೊದಲು ಮಣ್ಣೇ ಇತ್ತು; ಪಾತ್ರೆಗಳು ನಾಶವಾದಾಗಲೂ ಮಣ್ಣೇ ಉಳಿಯುತ್ತದೆ. ಮಣ್ಣು ಅವಿಕಾರೀ-ರೂಪದಿಂದ ಒಂದೇ ಆಗಿರುತ್ತದೆ. ಹಾಗೆಯೇ ಪ್ರಪಂಚದ ನಿರ್ಮಾಣವು ನಿನ್ನಿಂದಲೇ ಆಗುವುದರಿಂದ ಇದರ ಆದಿ-ಮಧ್ಯ-ಅಂತ್ಯಗಳಲ್ಲಿ ಅವಿಕಾರೀರೂಪದಿಂದ ನೀನೇ ಇರುತ್ತೀಯೆ. ಪ್ರಕೃತಿಯ ಕಾರ್ಯರೂಪವಾದ ಜಗತ್ತಿನಲ್ಲಿ ಪ್ರತಿಕ್ಷಣವೂ ಪರಿವರ್ತನೆಯಾಗುತ್ತಾ ಇರುತ್ತದೆ. ಅದಕ್ಕಾಗಿ ಋಷಿಗಳ ಮನಸ್ಸಿನಿಂದಾಗುವ ಚಿಂತನೆ, ವಾಣಿಯಿಂದ ಹೇಳುವ ಮಾತು, ಅವೆಲ್ಲವೂ ಪರಬ್ರಹ್ಮನ ಚಿಂತನ-ಮನನ, ವರ್ಣನೆಯೇ ಆಗುತ್ತದೆ. ಮನುಷ್ಯನು ಎಲ್ಲೇ ಕಾಲಿಟ್ಟರೂ ಅದು ಪೃಥಿವಿಯ ಮೇಲೆಯೇ ಇಟ್ಟಂತಾಗುವುದು. ಏಕೆಂದರೆ, ಅವೆಲ್ಲವೂ ಪೃಥಿವಿಯ ಸ್ವರೂಪವೇ ಆಗಿದೆ. ಹಾಗೆಯೇ ಅಗ್ನಿ, ವರುಣ, ಇಂದ್ರ ಮುಂತಾದರೂಪಗಳಲ್ಲಿ ಮಾಡುವ ಉಪಾಸನೆಯೆಲ್ಲವೂ ಬ್ರಹ್ಮನ ಉಪಾಸನೆಯೇ ಆಗಿದೆ. ಅದಕ್ಕಾಗಿ ಶ್ರುತಿಗಳಾದನಾವು ಯಾವುದೇ ನಾಮ ರೂಪದಿಂದ ವರ್ಣಿಸಿದರೂ ಅದೆಲ್ಲವೂ ನಿನ್ನ ವರ್ಣನೆಯೇ ಆಗುವುದು. ॥ ೧೫ ॥

ಓ ತ್ರೈಲೋಕ್ಯಾಧಿಪತಿಯೇ! ಪರಮಾತ್ಮನೇ! ನಿನ್ನ ತತ್ತ್ವ ರಹಸ್ಯವನ್ನು ತಿಳಿದ ಭಕ್ತರಲ್ಲಿ ಎಷ್ಟೋ ಭಕ್ತರಾದರೋ ನಿನ್ನ ಲೀಲಾ ಕಥಾಮೃತ ಸಾಗರದಲ್ಲಿ ಮುಳುಗಿ ತಮ್ಮ ಪಾಪ-ತಾಪಗಳನ್ನು ತೊಳೆದುಕೊಂಡು ನಿನ್ನನ್ನೇ ಹೊಂದುತ್ತಾರೆ. ಇತರ ಎಷ್ಟೋ ಭಕ್ತರು ಜ್ಞಾನಮಾರ್ಗದ ಮೂಲಕ ರಾಗ-ದ್ವೇಷಾದಿಗಳನ್ನು ಇಲ್ಲವಾಗಿಸಿ ಕರ್ಮವಾಸನೆ ಕ್ಷೀಣವಾದಾಗ ನಿನ್ನ ಸ್ವರೂಪದಲ್ಲೇ ಒಂದಾಗಿ ನಿನ್ನನ್ನೇ ಹೊಂದುತ್ತಾರೆ. ಈ ಪ್ರಕಾರ ನಿನ್ನ ಆ ಭಕ್ತರು ತಮ್ಮ ಅಂತಃಕರಣವನ್ನು ಆತ್ಮಜ್ಞಾನದ ಮೂಲಕ ಶಾಂತವೂ, ಪರಿಶುದ್ಧವೂ ಮಾಡಿಕೊಂಡಿರುವರು. ಆದ್ದರಿಂದ ಅವರಿಗೆ ಶರೀರದಲ್ಲಾಗುವ ಕಾಲಧರ್ಮಗಳಾದ ಜರಾ-ಮರಣವೇ ಮುಂತಾದ ದೋಷಗಳೂ ಬಾಧಿಸಲಾರವು. ಅವರಾದರೋ ನಿರಂತರವಾಗಿ ಪರಮಾನಂದವನ್ನು ಅನುಭವಿಸುತ್ತಾ ನಿನ್ನ ಭಜನೆ-ಧ್ಯಾನದಲ್ಲೇ ತೊಡಗಿರುತ್ತಾರೆ. ॥ ೧೬ ॥

ಪರಮಾತ್ಮನೇ! ಪ್ರಾಣಿಯು ನಿನ್ನ ಭಜನೆ-ಪೂಜೆ ಮುಂತಾದುವನ್ನು ಮಾಡಿದಾಗಲೇ ಅವರ ಜೀವನ ಸಾರ್ಥಕವಾಗುತ್ತದೆ. ಇಲ್ಲದಿದ್ದರೆ ಅವನು ಉಸಿರಾಡುವುದು ಕಮ್ಮಾರನ ತಿದಿಯಂತೆ ವ್ಯರ್ಥವೇ ಆಗಿದೆ. ಮಹತತ್ತ್ವಾದಿ ಇರುವ ತತ್ತ್ವಗಳೆಲ್ಲವೂ ಜಡವಾಗಿವೆ. ಸೃಷ್ಟಿರಚನಾಕಾರ್ಯದಲ್ಲಿ ಇವುಗಳು ಸಫಲವಾಗದಿದ್ದಾಗ ನೀನೇ ಕೃಪೆದೋರಿ ಈ ತತ್ತ್ವಗಳಲ್ಲಿ ಅನುಪ್ರವೇಶ ಮಾಡಿದಾಗಲೇ ಇವು ಸೃಷ್ಟಿನಿರ್ಮಾಣ ಕಾರ್ಯದಲ್ಲಿ ಸಫಲರಾದುವು. ಹೀಗೆ ನಿನ್ನ ಅನುಗ್ರಹದಿಂದಲೇ ಸೃಷ್ಟಿಯ ನಿರ್ಮಾಣವಾಯಿತು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಕೋಶಗಳಲ್ಲಿ ಆಯಾಯ ಶರೀರಕ್ಕನುಸಾರವಾಗಿ ನೀನೇ ಪುರುಷರೂಪದಿಂದ ಇರುತ್ತೀಯೆ.

ದೃತಯ ಇವ ಶ್ವಸಂತ್ಯಸುಭೃತೋ ಯದಿ ತೇಽನುವಿಧಾ
ಮಹದಹಮಾದಯೋಽಂಡಮಸೃಜನ್ ಯದನುಗ್ರಹತಃ ।
ಪುರುಷವಿಧೋಽನ್ವಯೋಽತ್ರ ಚರಮೋಽನ್ನಮಯಾದಿಷು
ಯಃ ಸದಸತಃ ಪರಂ ತ್ವಮಥ ಯದೇಷ್ವವಶೇಷಮೃತಮ್
॥ ೧೭ ॥

ಇವುಗಳಲ್ಲಿ ಕಡೆಯದಾದ ಆನಂದಮಯಕೋಶವು ನಿನ್ನದೇ ಸ್ವರೂಪವಾಗಿದೆ. ಆ ಆನಂದಮಯ ಕೋಶವು ನಿನ್ನನ್ನು ಪಡೆಯುವ ಸ್ಥಾನವಾಗಿದೆ. ನೀನು ಅದರಿಂದಲೂ ಬೇರೆ ಆಗಿರುವೆ. ಸತ್-ಅಸತ್ ಅರ್ಥಾತ್ ಕಾರ್ಯ-ಕಾರಣರೂಪವಾದ ಜಗತ್ತಿಗಿಂತ ನೀನು ಅತೀತನಾಗಿರುವೆ. ಆದ್ದರಿಂದ ಜ್ಞಾನಿಗಳು ಈ ಸಮಗ್ರ ಜಗತ್ತನ್ನು 'ನೇತಿ-ನೇತಿ' ಈ ಉಪನಿಷದ್ವಾಕ್ಯದಿಂದ ನಿರಾಕರಣ ಮಾಡಿದ ಮೇಲೆ ಉಳಿಯುವ ಪರಮಾತ್ಮ ತತ್ತ್ವವನ್ನೇ ಋತ್ ಅರ್ಥಾತ್ ಸತ್ಯವೆಂದು ತಿಳಿಯುತ್ತಾರೆ. ಆ ಸತ್ಯ-ತತ್ತ್ವವು ನೀನೇ ಆಗಿರುವೆ. ॥ ೧೭ ॥

ಉದರಮುಪಾಸತೇ ಯ ಋಷಿವರ್ತ್ಮಸು ಕೂರ್ಪದೃಶಃ
ಪರಿಸರಪದ್ಧತಿಂ ಹೃದಯಮಾರುಣಯೋ ದಹರಮ್ ।
ತತ ಉದಗಾದನಂತ ತವ ಧಾಮ ಶಿರಃ ಪರಮಂ
ಪುನರಿಹ ಯತ್ಸಮೇತ್ಯ ನ ಪತಂತಿ ಕೃತಾಂತಮುಖೇ
॥ ೧೮ ॥

ಪ್ರಭುವೇ! ಋಷಿಗಳು ನಿನ್ನ ಪ್ರಾಪ್ತಿಗಾಗಿ ಅನೇಕ ಮಾರ್ಗಗಳನ್ನು ಹೇಳಿರುವರು. ಅವರಲ್ಲಿ ಸ್ಥೂಲದೃಷ್ಟಿಯುಳ್ಳವರು ಮಣಿಪೂರ ಚಕ್ರದಲ್ಲಿ (ನಾಭಿಯಲ್ಲಿ) ಅಗ್ನಿರೂಪದಿಂದ ನಿನ್ನನ್ನು ಉಪಾಸಿಸುತ್ತಾರೆ. ಇತರ ಅರುಣ ವಂಶದ ಋಷಿಗಳು ಸಮಸ್ತ ನಾಡಿಗಳಿಗೂ ಪ್ರಸರಣ ಸ್ಥಾನವೆನಿಸಿದ ಅನಾಹತಚಕ್ರದಲ್ಲಿ (ಹೃದಯದಲ್ಲಿ) ದಹರಾಕಾಶರೂಪವಾದ ಬ್ರಹ್ಮನನ್ನು ಉಪಾಸಿಸುತ್ತಾರೆ. ಹೇ ಅನಂತ! ನಿನ್ನನ್ನು ಪಡೆಯುವ ಶ್ರೇಷ್ಠಮಾರ್ಗವಾದ ಹೃದಯದಿಂದ ಮಸ್ತಿಷ್ಕದಲ್ಲಿ ಬ್ರಹ್ಮರಂಧ್ರ (ಸಹಸ್ರಾರ)ದವರೆಗೆ ಹೋಗಿರುವ ಸುಷುಮ್ನಾನಾಡಿಯಾದ ಜ್ಯೋತಿರ್ಮಯ ಮಾರ್ಗದ ಮೂಲಕ ಯೋಗಿಯು ಮೇಲಕ್ಕೆ ಹೋಗಿ ನಿನ್ನನ್ನು ಪಡೆದುಕೊಳ್ಳುವನು. ಇದಕ್ಕೆ ಅರ್ಚಿರಾದಿ ಮಾರ್ಗವೆಂದು ಹೇಳುತ್ತಾರೆ. ನಿನ್ನನ್ನು ಪಡೆದ ಮೇಲೆ ಜೀವನು ಜನ್ಮ-ಮರಣ ಚಕ್ರದಿಂದ ಬಿಡುಗಡೆ ಹೊಂದುವನು. ॥ ೧೮ ॥

ಸ್ವಕೃತವಿಚಿತ್ರಯೋನಿಷು ವಿಶನ್ನಿವ ಹೇತುತಯಾ
ತರತಮತಶ್ಚಕಾಸ್ಸ್ಯನಲವತ್ ಸ್ವಕೃತಾನುಕೃತಿಃ ।
ಅಥ ವಿತಥಾಸ್ವಮೂಷ್ವವಿತಥಂ ತವ ಧಾಮ ಸಮಂ
ವಿರಜಧಿಯೋಽನ್ವಯಂತ್ಯಭಿವಿಪಣ್ಯವ ಏಕರಸಮ್
॥ ೧೯ ॥

ಭಗವಂತನೇ! ನೀನೇ ನಾನಾ ಪ್ರಕಾರದ ಯೋನಿಗಳನ್ನು ನಿರ್ಮಿಸಿ, ಅವುಗಳಲ್ಲಿ ಕಾರಣರೂಪದಿಂದ ಪ್ರವೇಶಿಸಿರುವಂತೆ ಕಾಣುವೆ. ನೀನಾದರೋ ಸರ್ವವ್ಯಾಪಕನಾಗಿರುವೆ. ಮತ್ತೆ ನೀನು ಪ್ರವೇಶಮಾಡಿದೆ ಎಂಬ ಮಾತು ಹೇಗೆ ಹೇಳಬಹುದು? ಹೀಗಿದ್ದರೂ ಪ್ರವೇಶಿಸಿದಂತೆಯೇ ಅನಿಸುವುದು. ಅಗ್ನಿಯು ಎಲ್ಲ ಕಡೆಗಳಲ್ಲಿ ಸಮಾನವಾಗಿ ಇದ್ದರೂ ಕಟ್ಟಿಗೆಯ ಆಕೃತಿಯ ಭೇದದಿಂದ ಬೇರೆ-ಬೇರೆ ರೂಪದಲ್ಲಿ ಕಂಡುಬರುವಂತೆಯೇ ನೀನು ಸದಾ ಸರ್ವದಾ ಸರ್ವತ್ರ ಏಕರಸವಾಗಿ ಸಮಭಾವದಿಂದ ವ್ಯಾಪಕನಾಗಿರುವೆ. ಆನಂದ ಸ್ವರೂಪನಾಗಿರುವೆ, ಸತ್ಯಸ್ವರೂಪನಾಗಿರುವೆ. ಹೀಗಿದ್ದರೂ ಕೆಲವು ಕಡೆ ಉತ್ತಮರೂಪದಿಂದಲೂ, ಕೆಲವೆಡೆಗಳಲ್ಲಿ ಕನಿಷ್ಠರೂಪದಲ್ಲಿಯೂ ಕಾಣಿಸಿಕೊಳ್ಳುವೆ. ನಿರ್ಮಲ ಬುದ್ಧಿಯುಳ್ಳ ಮಹಾಪುರುಷರು ಕರ್ಮಗಳ ಫಲದ ಕಾಮನೆಯಿಂದ ರಹಿತರಾಗಿ ಪ್ರಾಪಂಚಿಕ ಸತ್ತೆಯನ್ನು ಹಾಗೂ ಆ ಆಕೃತಿಗಳನ್ನು ಮಿಥ್ಯೆಯೆಂದು ತಿಳಿದು ಹೊರಗಿನ ನಾಮ-ರೂಪಗಳನ್ನು ತ್ಯಜಿಸಿ ತತ್ತ್ವರೂಪದಿಂದ ಏಕಮಾತ್ರ ಪರಮಾತ್ಮಸತ್ತೆಯನ್ನೇ ಯಾವಾಗಲೂ ಎಲ್ಲೆಡೆಯಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ॥ ೧೯ ॥

ಸ್ವಕೃತಪುರೇಷ್ವಮೀಷ್ವಬಹಿರಂತರಸಂವರಣಂ
ತವ ಪುರುಷಂ ವದಂತ್ಯಖಿಲಶಕ್ತಿಧೃತೋಽಂಶಕೃತಮ್ ।
ಇತಿ ನೃಗತಿಂ ವಿವಿಚ್ಯ ಕವಯೋ ನಿಗಮಾವಪನಂ
ಭವತ ಉಪಾಸತೇಽಂಘ್ರಿಮಭವಂ ಭುವಿ ವಿಶ್ವಸಿತಾಃ ॥ ೨೦ ॥

ಜೀವಿಯ ಎಲ್ಲ ಶರೀರಗಳನ್ನು ನೀನೇ ನಿರ್ಮಾಣ ಮಾಡಿರುವೆ. ಆ ಶರೀರಗಳಲ್ಲಿರುವ ಜೀವನು ಏಕಮಾತ್ರ ನಿನ್ನದೇ ಸನಾತನ ಅಂಶನಾಗಿರುವವನು. (**ಮಮೈವಾಂಶೋ ಜೀವಲೋಕೇ ಜೀವ ಭೂತಃ ಸನಾತನಃ** - ಭಗವದ್ಗೀತೆ) ಜಡತತ್ತ್ವಗಳಿಂದ ನಿನ್ನ ಸ್ವರೂಪವು ಅತೀತವಾಗಿರುವಂತೆಯೇ ನಿನ್ನದೇ ಅಂಶನಾದ ಕಾರಣ ನಿನಗೆ ಪಿತಾ-ಪುತ್ರರಂತೆ ಸಂಬಂಧವಿದೆ. ಇವನ ವಾಸ್ತವಿಕ ಸ್ವರೂಪವೂ ಜಡದಿಂದ ಪೂರ್ಣವಾಗಿ ಅತೀತವಾಗಿದೆ. ನಿನ್ನಿಂದ ರಚಿಸಲ್ಪಟ್ಟ ಶರೀರಗಳಲ್ಲಿ ಜೀವನು (ಅಂತಃಸಂವರಣಮ್ ಅರ್ಥಾತ್ - ಪ್ರಕೃತಿಯ ಕಾರಣದ ಆವರಣ ಮತ್ತು ಬಹಿಃ ಸಂವರಣಮ್ ಅರ್ಥಾತ್ - ಪ್ರಕೃತಿಯ ಕಾರ್ಯರೂಪವಾದ ಶರೀರದ-ಆವರಣ) ಈ ಎರಡೂ ಆವರಣಗಳಿಂದ ರಹಿತನಾಗಿದ್ದಾನೆ. ಅರ್ಥಾತ್-ಜಡ ಪ್ರಕೃತಿಗಿಂತ ಪರನಾಗಿದ್ದಾನೆ. ನಿನ್ನ ವಾಸ್ತವಿಕ ಸ್ವರೂಪವು ಶುದ್ಧ ಚೇತನವು ಆನಂದ ಸ್ವರೂಪವೂ, ಅವಿನಾಶಿಯೂ ಆಗಿರುವಂತೆಯೇ ಜೀವನೂ ಕೂಡ ಚೇತನನೂ, ಶುದ್ಧನೂ, ಸಹಜಸುಖರಾಶಿಯೂ, ಅವಿನಾಶಿಯೂ ಆಗಿರುವನು. ತತ್ತ್ವಜ್ಞಾನಿಗಳು ಇವನನ್ನು ಸಮಸ್ತ ಶಕ್ತಿಗಳನ್ನು ಧರಿಸುವಂತಹ ನಿನ್ನದೇ ಸನಾತನ ಅಂಶವೆಂದು ಭಾವಿಸುತ್ತಾರೆ. ಜೀವಿಯ ಇಂತಹ ಮಹತ್ವವನ್ನು ಅರಿತು ಜ್ಞಾನಿಗಳು ನಿನ್ನ ಚರಣಗಳ ಉಪಾಸನೆಯನ್ನೇ ಮಾಡುತ್ತಾರೆ. ನಿನ್ನ ಚರಣಗಳ ಸೇವೆ-ಪೂಜೆಗಳು ಸಂಸಾರ ಚಕ್ರವನ್ನು ನಾಶಮಾಡುತ್ತವೆ. ಎಲ್ಲ ವಿಧದ ಲೌಕಿಕ-ವೈದಿಕ ಕರ್ಮಗಳ ಸಮರ್ಪಣ ಸ್ಥಾನವೂ ನಿನ್ನ ಈ ಚರಣಕಮಲಗಳೇ ಆಗಿವೆ. ಇಂತಹ ದೃಢನಿಶ್ಚಯದೊಂದಿಗೆ ನಿನ್ನ ಉಪಾಸನೆ ಮಾಡುತ್ತಾ ನಿನ್ನ ಭಕ್ತರು ವೈಕುಂಠಧಾಮಕ್ಕೆ ಹೋಗುತ್ತಾರೆ. ॥ ೨೦ ॥

ದುರವಗಮಾತ್ಮತತ್ತ್ವನಿಗಮಾಯ ತವಾತ್ತತನೋ-
ಶ್ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ ।
ನ ಪರಿಲಷಂತಿ ಕೇಚಿದಪವರ್ಗಮಪೀಶ್ವರ ತೇ
ಚರಣಸರೋಜಹಂಸಕುಲಸಂಗವಿಸೃಷ್ಟಗೃಹಾಃ ॥ ೨೧ ॥

ಈಶ್ವರನೇ ! ಪರಮಾತ್ಮತತ್ತ್ವದ ಜ್ಞಾನವನ್ನು ಪಡೆಯುವುದು ಬಹಳ ಕಠಿಣವಾಗಿದೆ. ಹೀಗೆ ವಿಚಾರಮಾಡಿ, ಜೀವಿಗಳ ಮೇಲೆ ಅನುಗ್ರಹವನ್ನು ಮಾಡುವುದಕ್ಕಾಗಿ ಹಾಗೂ ಅವರನ್ನು ಸಂಸಾರ ಚಕ್ರದಿಂದ ಬಿಡುಗಡೆಗೊಳಿಸಲು ನೀನು ನಾನಾ ಪ್ರಕಾರದ ಅವತಾರಗಳನ್ನು ಧರಿಸಿ ಅಮೃತ ಸಾಗರದಂತೆ ಲೀಲೆಗಳನ್ನು ಮಾಡುವೆ. ಆ ಸಾಗರದಲ್ಲಿ ಮುಳುಗಿ-ಮುಳುಗಿ ಜೀವನು ಸಾಂಸಾರಿಕ ಕ್ಲೇಶ-ಬಾಧೆಗಳನ್ನು ಶಾಂತೊಳಿಸುವನು. ಸಂಸಾರ ಭ್ರಮಣೆಯ ಬಳಲಿಕೆಯನ್ನು ಕಳೆದುಕೊಳ್ಳುವನು. ಆದ್ದರಿಂದ ನಿನ್ನ ಭಕ್ತರು ನಿನ್ನ ಚರಣ-ಕಮಲಗಳ ಪ್ರೇಮಿಗಳಾದ ಪರಮಹಂಸರ ಸತ್ಸಂಗದಲ್ಲೇ ಅನಂತ ಆನಂದವನ್ನು ಅನುಭವಿಸುತ್ತಾರೆ. ಅವರು ಮತ್ತೆ ಮನೆ ಮಠ, ಪತ್ನೀ-ಪುತ್ರರನ್ನೂ ನೆನೆಯುವುದೂ ಇಲ್ಲ. ಅವರು ಕಥಾಮೃತದ ಆನಂದವಲ್ಲದೆ ಮೋಕ್ಷವನ್ನು ಬಯಸುವುದಿಲ್ಲ. ಏಕೆಂದರೆ, ನಿನ್ನ ಕಥೆಯು ಒಂದು ಅಮೃತದ ತರಂಗಿತ ಸಾಗರವೇ ಆಗಿದೆ. ಅವರ ಚಿತ್ತವು ಪೂರ್ಣರೂಪದಿಂದ ನಿನ್ನಲ್ಲೇ ನೆಲೆಸಿರುತ್ತದೆ. ಆದ್ದರಿಂದ ನೀನು ಅವತರಿಸುವುದೂ ಕೂಡ ಜೀವಿಗಳ ಮೇಲೆ ನಿನ್ನ ಪರಮಾನುಗ್ರಹವೇ ಆಗಿದೆ. ॥ ೨೧ ॥

ತ್ವದನುಪಥಂ ಕುಲಾಯಮಿದಮಾತ್ಮಸುಹೃತ್ಪ್ರಿಯವ-
ಚ್ಚರತಿ ತಥೋನ್ಮುಖೇ ತ್ವಯಿ ಹಿತೇ ಪ್ರಿಯ ಆತ್ಮನಿ ಚ ।
ನ ಬತ ರಮನ್ತ್ಯಹೋ ಅಸದುಪಾಸನಯಾಽಽತ್ಮಹನೋ
ಯದನುಶಯಾ ಭ್ರಮನ್ತ್ಯುರುಭಯೇ ಕುಶರೀರಭೃತಃ
॥ ೨೨ ॥

ಪರಮಾತ್ಮನೇ ! ಈ ಪಾಂಚಭೌತಿಕ ಶರೀರವು ನಿನ್ನನ್ನು ಪಡೆಯುವ ಒಂದು ಸಾಧನವಾಗಿದೆ. ಇದನ್ನು ನಿನ್ನ ಪ್ರಾಪ್ತಿಯ ಮಾರ್ಗಕ್ಕೆ ತೊಡಗಿಸಿದರೆ ಇದೇ ತನ್ನ ಆತ್ಮೀಯ, ಪ್ರಿಯ ಸುಹೃದನಂತೆ ಆಚರಿಸುತ್ತದೆ. ಏಕೆಂದರೆ, ನೀನು ಜೀವಿಯ ಮಿಲನಕ್ಕೆ ಸದಾ ಸಿದ್ಧನಾಗಿರುವೆ. ಅವನ ಮುಂದೆಯೇ ಇರುವೆ. ಹೆಚ್ಚೇನು ಹೇಳಲಿ ನೀನು ಎಲ್ಲರ ಸುಹೃದನೂ, ಪ್ರಿಯನೂ, ಆತ್ಮನೂ ಆಗಿರುವೆ. ಇಂತಹ ಸ್ಥಿತಿಯಲ್ಲಿ ನಿನ್ನ ಕಡೆಯಿಂದ ನಿನ್ನನ್ನು ಪಡೆಯಲು ಸಾಕಷ್ಟು ಸಾಮಗ್ರಿಯನ್ನು ನೀನೇ ಪ್ರಸ್ತುತಪಡಿಸಿರುವೆ. ಹೀಗಿದ್ದರೂ ಜೀವನು ಅಸತ್ ಭೋಗಗಳ ಕಾಮನೆಗಳನ್ನು ಮಾಡುತ್ತಾ ಅವುಗಳಲ್ಲೇ ರಮಿಸಿಹೋಗುತ್ತಾನೆ ಮತ್ತು ಕಾಮನಾ ಪೂರ್ತಿಗಾಗಿ ತೊಡಗುತ್ತಾನೆ. ಇದು ಎಂತಹ ದುಃಖದ ಮಾತಾಗಿದೆ. ಈ ಪ್ರಕಾರವಾಗಿ ಅವರು ತಮ್ಮ ಆತ್ಮವನ್ನೇ ಹನನ ಮಾಡುತ್ತಿದ್ದಾರೆ. ಇಂತಹ ಜೀವಿಗಳು ಶರೀರ ಧರಿಸುವುದು ಒಂದು ರೀತಿಯಿಂದ ಜನ್ಮ-ಮೃತ್ಯುವಿನ ಚಕ್ರದಲ್ಲಿ ಅಲೆಯುವುದೇ ಆಗಿದೆ. ಇವರ ಜೀವನವೂ ವ್ಯರ್ಥವೇ ಆಗಿದೆ. ॥ ೨೨ ॥

ನಿಭೃತಮರುನ್ಮನೋಽಕ್ಷದೃಢಯೋಗಯುಜೋ ಹೃದಿಯನ್
ಮುನಯ ಉಪಾಸತೇ ತದರಯೋಽಪಿ ಯಯುಃ ಸ್ಮರಣಾತ್ ।
ಸ್ತ್ರಿಯ ಉರಗೇಂದ್ರಭೋಗಭುಜದಂಡವಿಷಕ್ತಧಿಯೋ
ವಯಮಪಿ ತೇ ಸಮಾಃ ಸಮದೃಶೋಽಂಘ್ರಿಸರೋಜಸುಧಾಃ
॥ ೨೩ ॥

ಪ್ರಭೋ ! ನಿನಗೆ ಎಲ್ಲರ ಕುರಿತು ಸಮಾನ ಭಾವವಿದೆ. ಜೊತೆಗೇ ಸಮಸ್ತ ಜೀವರ ಕುರಿತು ನಿನಗೆ ಅಪಾರ ಕರುಣೆ ಇದೆ. ಇದರ ಪ್ರಮಾಣ - ಪ್ರಾಣಾಯಾಮಾದಿಗಳ ಮೂಲಕ ಮನ ಇಂದ್ರಿಯಗಳನ್ನು ವಶಪಡಿಸಿಕೊಂಡಿರುವ ಯೋಗಿಗಳೂ ನಿನ್ನ ಉಪಾಸನೆಯನ್ನೇ ಮಾಡುತ್ತಾ ನಿನ್ನನ್ನೇ ಹೊಂದುತ್ತಾರೆ. ಅದೇ ಪ್ರಕಾರದಿಂದ ನಿನ್ನನ್ನು ಶತ್ರುಭಾವದಿಂದ ಸ್ಮರಿಸುವವರೂ (ರಾವಣ, ಕಂಸ, ಶಿಶುಪಾಲರೇ ಮುಂತಾದವರು) ಕೂಡ ನಿನ್ನನ್ನೇ ಪಡೆದುಕೊಳ್ಳುತ್ತಾರೆ. ಇದಲ್ಲದೆ ಸರ್ಪರಾಜನಂತೆ ನೀಳವಾದ ಭುಜಗಳುಳ್ಳ ನಿನ್ನಲ್ಲೇ ಬುದ್ಧಿಯನ್ನು ನೆಲೆಸಿಬಿಟ್ಟಿರುವ ಗೋಪಿಯರೇ ಆದಿ ಸ್ತ್ರೀಯರು ಹಾಗೂ ಇತರ ಕಾಮಭಾವದಿಂದ ಪ್ರೇಮಿಸುವ ಸ್ತ್ರೀಯರೂ ಕೂಡ ನಿನ್ನನ್ನು ಪ್ರೇಮಭಾವದಿಂದ ಸ್ಮರಿಸಿ ನಿನ್ನನ್ನೇ ಪಡೆದುಕೊಂಡರು. ನಿನ್ನ ಚರಣಕಮಲಗಳನ್ನು ಚೆನ್ನಾಗಿ ಧರಿಸಿಕೊಂಡಿರುವ ಶ್ರುತಿಗಳಾದ ನಾವೂ ಕೂಡ ನಿನ್ನನ್ನೇ ಸೇರುತ್ತೇವೆ. ಅರ್ಥಾತ್ ನಿನ್ನ ಸ್ಮರಣೆಯನ್ನು ಯಾವುದೇ ಭಾವದಿಂದ ಮಾಡಿದರೂ ಕೊನೆಗೆ ನಿನ್ನ ಪ್ರಾಪ್ತಿಯೇ ಆಗುತ್ತದೆ. ಹೀಗೆ ನಿನಗೆ ಎಲ್ಲರ ಕುರಿತು ಸಮಾನ ಭಾವವಿದೆ. ॥ ೨೩ ॥

ಕ ಇಹ ನು ವೇದ ಬತಾವರಜನ್ಮಲಯೋಽಗ್ರಸರಂ
ಯತ ಉದಗಾದೃಷಿರ್ಯಮನು ದೇವಗಣಾ ಉಭಯೇ ।
ತರ್ಹಿ ನ ಸನ್ನ ಚಾಸದುಭಯಂ ನ ಚ ಕಾಲಜವಃ
ಕಿಮಪಿ ನ ತತ್ರ ಶಾಸ್ತ್ರ ಮವಕೃಷ್ಯ ಶಯೀತ ಯದಾ
॥ ೨೪ ॥

ಭಗವಂತನೇ ! ನೀನೆ ಎಲ್ಲರ ಆದಿಕಾರಣನಾಗಿರುವೆ. ನಿನ್ನಿಂದಲೆ ಮೊಟ್ಟಮೊದಲಿಗೆ ಬ್ರಹ್ಮದೇವರ ಉತ್ಪತ್ತಿಯಾಯಿತು. ಅನಂತರ ಎರಡೂ ಪ್ರಕಾರದ (ಆಧ್ಯಾತ್ಮಿಕ ಮತ್ತು ಆಧಿದೈವಿಕ) ದೇವತೆಗಳು (ಆಧ್ಯಾತ್ಮಿಕ ಅರ್ಥಾತ್ ಶರೀರದಲ್ಲಿರುವ ಮನ-ಇಂದ್ರಿಯಗಳ ಅಭಿಮಾನಿ ದೇವತೆಗಳು.) ಆಧಿದೈವಿಕ (ಅರ್ಥಾತ್-ಹೊರಗಿನ ಇತರ ಲೋಕಪಾಲರು) ಉತ್ಪನ್ನರಾದರು. ಹೀಗೆ ಎಲ್ಲರೂ ನಿನ್ನಿಂದಲೇ ಉತ್ಪನ್ನರಾದವರು ಎಲ್ಲರಿಗೂ ಮೂಲಕಾರಣನಾದ ನಿನ್ನ ವಾಸ್ತವಿಕ ಸ್ವರೂಪವನ್ನು ನಿನ್ನ ಅನಂತರ ಹುಟ್ಟಿದವರು ಹೀಗೆ ತಾನೆ ತಿಳಿಯಬಲ್ಲರು ? ಹುಟ್ಟಿದವರ ಸಾವು ನಿಶ್ಚಿತವಾಗಿದೆಯಲ್ಲ ! ಅವಿನಾಶಿಯಾದ ನೀನು ಸಮಗ್ರ ಪ್ರಪಂಚವನ್ನು ಅಡಗಿಸಿಕೊಂಡು

ಜನಿಮಸತಃ ಸತೋ ಮೃತಿಮುತಾತ್ಮನಿ ಯೇ ಚ ಭಿದಾಂ
ವಿಪಣಮೃತಂ ಸ್ಮರಂತ್ಯುಪದಿಶಂತಿ ತ ಆರುಪಿತೈಃ ।

ತ್ರಿಗುಣಮಯಃ ಪುಮಾನಿತಿ ಭಿದಾ ಯದಬೋಧಕೃತಾ
ತ್ವಯಿ ನ ತತಃ ಪರತ್ರ ಸ ಭವೇದವಬೋಧರಸೇ ॥ ೨೫ ॥

ಸದಿವ ಮನಸ್ತ್ರಿವೃತ್ತ್ವಯಿ ವಿಭಾತ್ಯಸದಾಮನುಜಾತ್
ಸದಭಿಮೃಶಂತ್ಯಶೇಷಮಿದಮಾತ್ಮತಯಾಽತ್ಮವಿದಃ ।

ನ ಹಿ ವಿಕೃತಿಂ ತ್ಯಜಂತಿ ಕನಕಸ್ಯ ತದಾತ್ಮತಯಾ
ಸ್ವಕೃತಮನುಪ್ರವಿಷ್ಟಮಿದಮಾತ್ಮತಯಾವಸಿತಮ್ ॥ ೨೬ ॥

ಮಲಗಿದ್ದಾಗ ಕಾರಣವಾಗಲೀ, ಕಾರ್ಯವಾಗಲೀ ಇರುವುದಿಲ್ಲ. ಅರ್ಥಾತ್ - ಸೂಕ್ಷ್ಮ ಮತ್ತು ಸ್ಥೂಲ ಎರಡು ಬಗೆಯ ಸೃಷ್ಟಿಯೂ ಇರುವುದಿಲ್ಲ, ಕಾಲದ ಅವಯವಗಳೂ ವೇಗವೂ ಇರುವುದಿಲ್ಲ, ಯಾವುದೇ ಶಾಸ್ತ್ರವೂ ಇರುವುದಿಲ್ಲ. ಇಂತಹ ಸ್ಥಿತಿಯಲ್ಲಿ ನೀನು ಹೇಗಿದ್ದೀಯೇ ಎಂಬುದರ ಕುರಿತು ಕಲ್ಪನೆಯನ್ನಾದರೂ ಹೇಗೆ ಮಾಡಬಹುದು ? ॥ ೨೪ ॥

ಈ ಪ್ರಕಾರವಾಗಿ ನಿನ್ನ ವಾಸ್ತವಿಕ ತತ್ತ್ವದ ಜ್ಞಾನ ಪಡೆಯುವುದು ಸುಲಭವಲ್ಲ. ಇದರಿಂದಲೇ ಉಪದೇಶಕರಲ್ಲಿ ಅನೇಕ ಬಗೆಯ ಮತಭೇದಗಳು ಉಂಟಾಗುತ್ತವೆ. ಅವರಲ್ಲಿ ಕೆಲವರು ನಾಸ್ತಿಕ ವಾದವನ್ನು ಒಪ್ಪುವವರು - ಈ ಪ್ರಪಂಚದ ಉತ್ಪತ್ತಿಯು ಜಡ ದಿಂದ ಉಂಟಾಗಿದೆ. ಅರ್ಥಾತ್-ಸ್ತ್ರೀ-ಪುರುಷರ ಸಂಯೋಗ ದಿಂದ ಪ್ರಕೃತಿಯ ಮೂಲಕ ಈ ಜಗತ್ತಿನ ಉತ್ಪತ್ತಿಯಾಯಿತು. ಉತ್ಪನ್ನವಾದುದು ಒಂದು ದಿನ ನಾಶವೂ ಆಗುತ್ತದೆ ; ಅದೂ ಪ್ರಕೃತಿಯ ಮೂಲಕವೇ ಎಂದು ಹೇಳುತ್ತಾರೆ. ಕೆಲವರು ದುಃಖದ ನಾಶವಾದ ಬಳಿಕವೇ ಮುಕ್ತಿ ಎಂದೂ ತಿಳಿಯುತ್ತಾರೆ. ಇತರ ಕೆಲವರು ಕರ್ಮ ಮತ್ತು ಅದರ ಫಲವನ್ನು ಸತ್ಯವೆಂದೇ ತಿಳಿಯುತ್ತಾರೆ. ಇನ್ನೂ ಕೆಲವರು ಆತ್ಮನನ್ನು ಅನೇಕ ರೂಪಗಳಲ್ಲಿ ಇದೆ ಎಂದು ಹೇಳುತ್ತಾರೆ. ಇವೆಲ್ಲವನ್ನೂ ಭ್ರಮೆಯಿಂದ ಆರೋ ಪಿಸಿಯೇ ಹೀಗೆ ಹೇಳುತ್ತಾರೆ. ಕೆಲವರು ಜೀವನನ್ನು ತ್ರಿಗುಣ ಮಯವೆಂದು ಹೇಳುತ್ತಾರೆ. ವಾಸ್ತವವಾಗಿ ಇವೆಲ್ಲ ಮಾತುಗಳು ಅಜ್ಞಾನದ ಕಾರಣದಿಂದಲೇ ಇವೆ. ನೀನು ಜ್ಞಾನಸ್ವರೂಪನಾಗಿ ರುವಂತಯೇ ಜೀವನೂ ವಾಸ್ತವವಾಗಿ ಜ್ಞಾನಸ್ವರೂಪನೇ ಆಗಿರುವನು. ಆದರೆ ಅವನು ತನ್ನ ಆತ್ಮಸ್ವರೂಪವನ್ನು ಮರೆತು ಮಾಯೆಯ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವನು. ಇದರಿಂದ ನಾನಾ ಬಗೆಯ ಭ್ರಮೆಗಳು ಉಪಸ್ಥಿತವಾದುವು. ಜ್ಞಾನಸ್ವರೂಪ ನಾದ ನಿನ್ನಲ್ಲಿ ಇವೆಲ್ಲ ಭ್ರಮೆಗಳು ಕಿಂಚಿತ್ತಾದರೂ ಇಲ್ಲ. ॥ ೨೫ ॥

ಈ ತ್ರಿಗುಣಾತ್ಮಕ ಜಗತ್ತು ಮನಸ್ಸಿನ ಕಲ್ಪನೆಯೇ ಆಗಿದೆ. ಪ್ರಕೃತಿಯ ಕಾರ್ಯವಾದ್ದರಿಂದ ಅಸತ್ತಾಗಿಯೇ ಇದೆ. ಆದರೆ ಇದರ ಆಧಾರವಾದ ನೀನೇ ಇದರಲ್ಲಿ ಪರಿಪೂರ್ಣನಾಗಿರುವೆ. ಅದಕ್ಕಾಗಿ ಇದು ಅಸತ್ತಾಗಿದ್ದರೂ ಸತ್ಯದಂತೆ ಕಂಡುಬರುತ್ತದೆ. ಆತ್ಮಜ್ಞಾನಿಗೆ ಬ್ರಹ್ಮದೃಷ್ಟಿ ಇರುವುದರಿಂದ ಅವನಿಗೆ ಈ ಇಡೀ ವಿಶ್ವವು ಬ್ರಹ್ಮಮಯವೇ ಆಗಿದೆ. ಅವನು ಇವರಲ್ಲಿ ನಿನ್ನದೇ ಸ್ವರೂಪವನ್ನು ನೋಡುತ್ತಾನೆ. ಅವನು ಮಾಯೆಯನ್ನು ಸ್ವೀಕರಿಸುವುದಿಲ್ಲ. ಚಿನ್ನದಿಂದ ಮಾಡಿದ ಒಡವೆಗಳಲ್ಲಿ ಸುವರ್ಣತತ್ತ್ವವನ್ನು ತಿಳಿದ ವನು ಒಡವೆಗಳ ಆಕೃತಿಯನ್ನು ಮಿಥ್ಯೆಯೆಂದೇ ತಿಳಿದು, ಚಿನ್ನದ ಬೆಲೆಯನ್ನು ಮಾತ್ರ ಅರಿಯುತ್ತಾನೆ. ಹಾಗೆಯೇ ತತ್ತ್ವಜ್ಞಾನಿ ಯಾದವನು ಮಾಯಾನಿರ್ಮಿತ ಆಕೃತಿಗಳನ್ನು ಮಿಥ್ಯೆಯೆಂದು ತಿಳಿದು, ಅಧಿಷ್ಠಾನ ರೂಪದಲ್ಲಿರುವ ನಿನ್ನನ್ನೇ ನೋಡುತ್ತಾನೆ. ಏಕೆಂದರೆ, ಈ ವಿಶ್ವವನ್ನು ನಿರ್ಮಿಸಿ ನೀನೇ ಇದರಲ್ಲಿ ಪ್ರವಿಷ್ಟ ನಾಗಿರುವೆ. ॥ ೨೬ ॥

ತವ ಪರಿ ಯೇ ಚರಂತ್ಯಖಿಲಸತ್ತ್ವನಿಕೇತತಯಾ
ತ ಉತ ಪದಾಽಽಕ್ರಮಂತ್ಯವಿಗಣಯ್ಯ ಶಿರೋ ನಿರ್ಋತೇಃ ।
ಪರಿವಯಸೇ ಪಶೂನಿವ ಗಿರಾ ವಿಬುಧಾನಪಿ ತಾಂ-
ಸ್ತ್ವಯಿ ಕೃತಸೌಹೃದಾಃ ಖಲು ಪುನಂತಿ ನ ಯೇ ವಿಮುಖಾಃ
॥ ೨೭ ॥

ಈ ಪ್ರಕಾರ ಸಮಸ್ತ ಪ್ರಾಣಿಗಳಲ್ಲಿ ನೀನೇ ಪ್ರಕಾಶಿಸುತ್ತಿರುವೆ ಎಂದು ತಿಳಿದು ನಿನ್ನ ಅನನ್ಯ ಭಕ್ತರಾದವರು ಎಲ್ಲರ ಕುರಿತು ಏಕಾತ್ಮಭಾವವನ್ನಿರಿಸಿಕೊಂಡು ಸಮಸ್ತ ಪ್ರಾಣಿಗಳ ಸೇವೆಯು ನಿನ್ನದೇ ಸೇವೆ ಎಂದು ಭಾವಿಸುತ್ತಾರೆ. ಅಂತಹ ಮಹಾಪುರುಷರ ಎಲ್ಲ ಕ್ರಿಯಾ-ಕಲಾಪಗಳು ನಿನ್ನೊಡನೆಯೇ ಆಗುತ್ತಾ ಇರುತ್ತವೆ. ಅವರು ಮೃತ್ಯುವಿನಿಂದ ಭಯ ಪಡದೆ ಅದರ ತಲೆಯನ್ನು ಮೆಟ್ಟಿಬಿಡುತ್ತಾರೆ. ಅಂತಹ ಭಕ್ತರ ಮನಸ್ಸು ನಿನ್ನಲ್ಲೇ ನೆಲಸಿದ್ದರಿಂದ ಅವರು ಅತ್ಯಂತ ಪವಿತ್ರರಾಗಿರುತ್ತಾರೆ. ಆದ್ದರಿಂದ ಅವರು ಹುಟ್ಟು-ಸಾವಿನ ಕಟ್ಟಳೆಯಲ್ಲಿ ಸಿಲುಕುವುದಿಲ್ಲ. ಆದರೆ ನಿನ್ನ ಭಕ್ತಿಯಿಂದ ವಿಮುಖರಾದವರು ವಿದ್ವಾಂಸರಾಗಿದ್ದರೂ ಕರ್ಮಫಲವನ್ನು ವರ್ಣಿಸುವ ವೇದವಾಣಿಗಳಲ್ಲೇ ತೊಡಗಿರುತ್ತಾರೆ. ಆ ವಾಣಿಗಳಲ್ಲಿರುವ ಕರ್ಮಫಲದ ಆಸೆಯೇ ಅವರನ್ನು ಕರ್ಮಗಳನ್ನು ಆಚರಿಸಲು ಬಂಧಿಸುತ್ತದೆ. ಪಶುವನ್ನು ಬಂಧಿಸಿ ಅದರಿಂದ ಕೆಲಸ ಮಾಡಿಸಿಕೊಳ್ಳುವಂತೆಯೇ ಅವರು ಆ ವಾಣಿಗಳಲ್ಲಿ ಮೋಸ ಹೋಗಿ ಕರ್ಮಗಳನ್ನು ಮಾಡುತ್ತಲೇ ಇರುತ್ತಾರೆ. ತಮ್ಮ ಪುಣ್ಯ-ಪಾಪಗಳ ಫಲವಾಗಿ ಅವರಿಗೆ ಹುಟ್ಟು-ಸಾವುಗಳ ಚಕ್ರ ಅಂಟಿಕೊಂಡೇ ಇರುತ್ತದೆ. ಆದರೆ ನಿನ್ನ ಭಕ್ತರಾದರೋ ನಿನ್ನನ್ನೇ ಹೊಂದುತ್ತಾರೆ. ಅವರು ಪುನಃ ಜಗತ್ತಿಗೆ ಬರುವುದಿಲ್ಲ. ಆದುದರಿಂದ ನಿನ್ನ ಭಕ್ತಿಯೇ ಜೀವಿಗಳಿಗೆ ಸರ್ವೋತ್ಕೃಷ್ಟ ಸಾಧನವಾಗಿದೆ. ॥ ೨೭ ॥

ತ್ವಮಕರಣಃ ಸ್ವರಾಡಖಿಲಕಾರಕಶಕ್ತಿಧರ-
ಸ್ತವ ಬಲಿಮುದ್ವಹಂತಿ ಸಮದಂತ್ಯಜಯಾನಿಮಿಷಾಃ ।
ವರ್ಷಭುಜೋಽಖಿಲಕ್ಷಿತಿಪತೇರಿವ ವಿಶ್ವಸೃಜೋ
ವಿದಧತಿ ಯತ್ರ ಯೇ ತ್ವಧಿಕೃತಾ ಭವತಶ್ಚಕಿತಾಃ
॥ ೨೮ ॥

ಪ್ರಭುವೇ ! ನೀನು ಮನ, ಬುದ್ಧಿ ಇಂದ್ರಿಯಾದಿಗಳಿಂದ ರಹಿತನಾಗಿದ್ದರೂ ಸಮಸ್ತ ಇಂದ್ರಿಯಗಳ ಶಕ್ತಿಗಳನ್ನು ಧರಿಸಿರುವ ಸ್ವಯಂ ಪ್ರಕಾಶ ಸ್ವರೂಪನಾಗಿರುವೆ. ನೀನೇ ಎಲ್ಲರಿಗೆ ಎಲ್ಲ ವಿಧದ ಶಕ್ತಿಯನ್ನು ಕರುಣಿಸುತ್ತಿರುವೆ. ಅದಕ್ಕಾಗಿ ಸಮಸ್ತ ದೇವತೆಗಳು ತಮ್ಮ-ತಮ್ಮ ಉಪಹಾರವನ್ನು ನಿನಗೆ ಸಮರ್ಪಿಸುತ್ತಾರೆ. ಮತ್ತೆ ನಿನ್ನಿಂದಲೇ ಆ ವಸ್ತುಗಳನ್ನು ಪ್ರಸಾದವಾಗಿ ಪಡೆದುಕೊಂಡು ಇಂದ್ರಿಯಗಳ ದೇವತೆಗಳರೂಪದಲ್ಲಿ ಆಯಾಯ ವಿಷಯಗಳನ್ನು ಅನುಭವಿಸುತ್ತಾರೆ. ಭಗವಂತಾ! ಇದೆಲ್ಲವೂ ನಿನ್ನ ಪೂಜೆಯೇ ಆಗಿದೆ. ದೊಡ್ಡ ಸಾಮ್ರಾಟನ ಅಧೀನದಲ್ಲಿರುವ ಮಾಂಡಲಿಕ ರಾಜರು ಪ್ರಜೆಗಳಿಂದ ಕಂದಾಯವನ್ನು ಪಡೆದು ಸಾಮ್ರಾಟನಿಗೆ ಒಪ್ಪಿಸಿ ಅವನಿಂದ ದೊರೆತುದನ್ನು ಅನುಭವಿಸುತ್ತಾರೆ. ಹಾಗೆಯೇ ಈ ದೇವತೆಗಳೂ ನಿನ್ನಿಂದ ಸಮಸ್ತ ಭೋಗಗಳನ್ನು ಪಡೆದುಕೊಂಡು ಅವನ್ನು ಅನುಭವಿಸುತ್ತಾರೆ ಹಾಗೂ ನಿನ್ನಿಂದ ನಿಯಮಿಸಲ್ಪಟ್ಟ ತಮ್ಮ-ತಮ್ಮ ಕಾರ್ಯಗಳನ್ನು ನಿನಗೆ ಹೆದರಿಕೊಂಡೇ ಎಚ್ಚರಿಕೆಯಿಂದ ಮಾಡುತ್ತಾ ಇರುತ್ತಾರೆ. ॥ ೨೮ ॥

ಸ್ಥಿರಚರಜಾತಯಃ ಸ್ಯುರಜಯೋತ್ಥನಿಮಿತ್ತಯುಜೋ
ವಿಹರ ಉದೀಕ್ಷಯಾ ಯದಿ ಪರಸ್ಯ ವಿಮುಕ್ತ ತತಃ ।
ನ ಹಿ ಪರಮಸ್ಯ ಕಶ್ಚಿದಪರೋ ನ ಪರಶ್ಚ ಭವೇ-
ದ್ವಿಯತ ಇವಾಪದಸ್ಯ ತವ ಶೂನ್ಯತುಲಾಂ ದಧತಃ
॥ ೨೯ ॥

ನಿತ್ಯಮುಕ್ತನಾದ ಪರಮೇಶ್ವರನೇ ! ನಿನಗೆ ಲೀಲೆಯನ್ನು ನಡೆಸಬೇಕೆಂಬ ಇಚ್ಛೆಯುಂಟಾದಾಗ ನಿನ್ನ ಸಂಕಲ್ಪ ಮಾತ್ರದಿಂದ ಸ್ಥಾವರ ಜಂಗಮ ಪ್ರಾಣಿಗಳು ಮತ್ತು ಇತರ ಪದಾರ್ಥಗಳು ಇವೆಲ್ಲದರ ನಾಮ-ರೂಪಾತ್ಮಕವಾದ ಸೃಷ್ಟಿಯಾಗುತ್ತದೆ. ಆ ಸಮಯದಲ್ಲಿ ಹಿಂದಿನ ಸಂಸ್ಕಾರಗಳಿಂದ ಕೂಡಿಕೊಂಡು ಎಲ್ಲ ಪ್ರಾಣಿಗಳು ಉತ್ಪನ್ನವಾಗುತ್ತವೆ. ನೀನಾದರೋ ಆಕಾಶದಂತೆ ಎಲ್ಲದರಲ್ಲಿ ಅಸಂಗನಾಗಿಯೇ ಇರುತ್ತೀಯೆ. ಸರ್ವವ್ಯಾಪಿಯೂ, ಸರ್ವಶ್ರೇಷ್ಠನೂ, ಪರಮನೂ ಆದ ನಿನಗೆ ತನ್ನವರು-ಪರರು ಎಂದು ಯಾರೂ ಇಲ್ಲ. ಹೀಗಿದ್ದರೂ ನಿನ್ನನ್ನು ಭಜಿಸುವವರು ಈ ಜನ್ಮ-ಮೃತ್ಯುರೂಪವಾದ ಸಂಸಾರದಿಂದ ಪಾರಾಗಿ ಪರಮಪದವನ್ನು ಪಡೆದುಕೊಳ್ಳುವರು. ॥೨೯॥

ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವಗತಾ-

ಸ್ತರ್ಹಿ ನ ಶಾಸ್ಯತೇತಿ ನಿಯಮೋ ಧ್ರುವ ನೇತರಥಾ ।

ಅಜನಿ ಚ ಯನ್ಮಯಂ ತದವಿಮುಚ್ಯ ನಿಯಂತೃ ಭವೇತ್

ಸಮಮನುಜಾನತಾಂ ಯದಮತಂ ಮತದುಷ್ಟತಯಾ

॥ ೩೦ ॥

ಸತ್ಯಸ್ವರೂಪನಾದ ಪರಮಾತ್ಮನೇ! ಅಸಂಖ್ಯರಾದ ಪ್ರಾಣಿಗಳನ್ನು ಸತ್ಯರೂ-ಸರ್ವವ್ಯಾಪಿಗಳೂ ಎಂದು ತಿಳಿದುಕೊಂಡರೆ ಇವೆಲ್ಲ ಜೀವರು ನಿನಗೆ ಸಮಾನರೇ ಆಗುವರು. ಮತ್ತೆ ಅಂತಹ ಸ್ಥಿತಿಯಲ್ಲಿ ಅವನ್ನು ನಿಯಂತ್ರಿಸುವುದು ನಿನಗೆ ಅಸಂಭವವಾಗುತ್ತಿತ್ತು. ಏಕೆಂದರೆ, ಶಾಸಿತನಾಗುವವನು ಸರ್ವವ್ಯಾಪಕನಾಗಲಾರನು. ಆದರಿಂದಲೇ ಯಾವ ಕಾರಣದಿಂದ ಇದು ಯುಕ್ತವಾಗಿದೆಯೋ ಮತ್ತು ಯಾವುದರಿಂದ ಉತ್ಪನ್ನವಾಗಿದೆಯೋ ಅವನೇ ಇದರ ಶಾಸಕನಾಗಬಲ್ಲನು. ಈ ವಿಶ್ವವು ನಿನ್ನಿಂದಲೇ ಉತ್ಪನ್ನವಾಗಿದೆ. ಇದರ ಉಪಾದಾನ ಕಾರಣವೂ ಆಗಿರುವೆ. ನೀನೇ ಇದರ ನಿಯಾಮಕನಾಗಿದ್ದೀಯೆ. ಈ ವಿಶ್ವದಲ್ಲಿ ಇದ್ದುಕೊಂಡು ನೀನೇ ಎಲ್ಲರನ್ನು ಸಮಭಾವದಿಂದ ಶಾಸನ ಮಾಡುತ್ತಿರುವೆ. ಈ ವಿಶ್ವವು ನಿನ್ನದೇ ಸ್ವರೂಪವಾಗಿದೆ. ಆದ್ದರಿಂದ ನಿನ್ನನ್ನು ಬಿಟ್ಟು ಬೇರೆ ಯಾರೂ ಇದರ ನಿಯಾಮಕನಾಗಲಾರನು. ಯಾರಾದರೂ ನಾನು ನಿನ್ನನ್ನು ತಿಳಿದಿದ್ದೇನೆ ಎಂದು ಹೇಳಿದರೆ, ಅವನು ಹೇಳುವುದರಲ್ಲಿ ಮತಿಯ ದೋಷವಿರುವುದರಿಂದ ಸರಿಯಾಗಲಾರದು. ಪರಮಪಿತಾ ಪರಮೇಶ್ವರನಾದ ನಿನ್ನ ಚರಣಗಳಲ್ಲಿ ಶರಣಾಗುವುದೇ ಅಭಯ ಪದವನ್ನು ಪಡೆಯುವ ಸಾಧನವೆಂಬುದಾಗಿ ನಮ್ಮ ಮತವಾಗಿದೆ. ॥ ೩೦ ॥

ನ ಘಟತ ಉದ್ಭವಃ ಪ್ರಕೃತಿಪೂರುಷಯೋರಜಯೋ-

ರುಭಯಯುಜಾ ಭವಂತ್ಯಸುಭೃತೋ ಜಲಬುದ್ಬುದವತ್ ।

ತ್ವಯಿ ತ ಇಮೇ ತತೋ ವಿವಿಧನಾಮಗುಣೈಃ ಪರಮೇ

ಸರಿತ ಇವಾರ್ಣವೇ ಮಧುನಿ ಲಿಲ್ಯುರಶೇಷರಸಾಃ

॥ ೩೧ ॥

ಸ್ವಾಮಿಯೇ! ಪ್ರಕೃತಿ ಮತ್ತು ಪುರುಷ ಎರಡೂ ಅಜನ್ಮಾ ಅನಾದಿಯಾಗಿದೆ. ಆದರೆ ಇವುಗಳಿಂದ ಈ ವಿಶ್ವದ ಉತ್ಪತ್ತಿಯು ಘಟಿಸುವುದಿಲ್ಲ. (ನೀನಾದರೋ ನಿನ್ನ ಸಂಕಲ್ಪ ಮಾತ್ರದಿಂದಲೇ ಅನಂತ ಕೋಟಿ ಬ್ರಹ್ಮಾಂಡಗಳನ್ನು ನಿರ್ಮಾಣ ಮಾಡುತ್ತೀಯೆ.) ನೀರು ಮತ್ತು ಗಾಳಿಯ ಸಂಯೋಗದಿಂದ ನೀರಗುಳ್ಳೆಗಳು ಉಂಟಾಗುತ್ತವೆ ಹಾಗೂ ವಿಲೀನವಾಗುತ್ತವೆ. ಹಾಗೆಯೇ ಪ್ರಾಣಿಗಳೂ ಕೂಡ ಪ್ರಕೃತಿ ಮತ್ತು ಪುರುಷರ ಸಂಯೋಗದಿಂದ ಉತ್ಪನ್ನರಾಗುತ್ತಾರೆ. ಮತ್ತೆ ನದಿಗಳು ತಮ್ಮ ನಾಮ-ರೂಪಗಳನ್ನು ಕಳೆದುಕೊಂಡು ಸಮುದ್ರದಲ್ಲಿ ಒಂದಾಗುವಂತೆ ಕೊನೆಯಲ್ಲಿ ಅನೇಕ ನಾಮ-ಗುಣಗಳೊಂದಿಗೆ ಸರ್ವಶ್ರೇಷ್ಠನಾದ ನಿನ್ನಲ್ಲೇ ಸೇರಿ ಹೋಗುತ್ತಾರೆ. ಜೇನಿನಲ್ಲಿ ಎಲ್ಲ ಹೂವುಗಳ ರಸವು ಸೇರಿಹೋಗುವಂತೆಯೇ ಎಲ್ಲ ಜೀವರು ನಿನ್ನಲ್ಲೇ ಲೀನವಾಗುತ್ತಾರೆ. ॥ ೩೧ ॥

ನೃಷು ತವ ಮಾಯಯಾ ಭ್ರಮಮಮೀಷ್ವವಗತ್ಯ ಭೃಶಂ

ತ್ವಯಿ ಸುಧಿಯೋಽಭವೇ ದಧತಿ ಭಾವಮನುಪ್ರಭವಮ್ ।

ಕಥಮನುವರ್ತತಾಂ ಭವಭಯಂ ತವ ಯದ್ಭ್ರುಕುಟಿಃ

ಸೃಜತಿ ಮುಹುಸ್ತ್ರಿಣೇಮಿರಭವಚ್ಛರಣೇಷು ಭಯಮ್

॥ ೩೨ ॥

ಪ್ರಭೋ! ನೀನು ಅಜನಾಗಿರುವೆ. ಜ್ಞಾನಿಗಳು ನಿನ್ನ ಚರಣ ಕಮಲಗಳನ್ನು ದೃಢವಾಗಿ ಆಶ್ರಯಿಸಿ ಅಭಯ ಪದವನ್ನು ಪಡೆಯುವರು. ನಿನ್ನ ಮಾಯೆಯ ಹಿಡಿತಕ್ಕೆ ಸಿಕ್ಕಿಬಿದ್ದು ಜೀವನು ಅಲೆಯುತ್ತಾ ಇದ್ದಾನೆ. ನಿನ್ನ ಚರಣಗಳಲ್ಲಿ ಶರಣಾಗದೆ ಇರುವುದರಿಂದ ಅವನಿಗೆ ನಿನ್ನ ಕಾಲಚಕ್ರವು ಪದೇ-ಪದೇ ಭಯವನ್ನುಂಟು ಮಾಡುತ್ತದೆ. ಮಳೆ, ಸೆಕೆ, ಛಳಿ ಎಂಬ ಮೂರು ಭಾಗವುಳ್ಳ ಸಂವತ್ಸರರೂಪವಾದ ಕಾಲಚಕ್ರವು ನಿನ್ನ ಭ್ರೂವಿಲಾಸವಾಗಿದೆ ಎಂಬುದನ್ನು ಚೆನ್ನಾಗಿ ತಿಳಿದು ಜ್ಞಾನಿಗಳು ಪೂರ್ಣರೂಪದಿಂದ ನಿನ್ನಲ್ಲಿಯೇ ಭಕ್ತಿಭಾವವನ್ನಿರಿಸುತ್ತಾರೆ. ನಿನ್ನನ್ನು ಅನುಸರಿಸುವವರಿಗೆ ಸಂಸಾರದ ಭಯವು ಉಂಟಾಗಲಾರದು. ಆದ್ದರಿಂದ ಭಗವಂತನೇ! ನಿನಗೆ ಶರಣು ಬಂದಿರುವ ಈ ಜೀವರನ್ನು ನೀನೇ ಉದ್ಧರಿಸು ॥ ೩೨ ॥

ವಿಜಿತಹೃಷೀಕವಾಯುಭಿರದಾಂತಮನಸ್ತುರಗಂ
ಯ ಇಹ ಯತಂತಿ ಯಂತುಮತಿಲೋಲಮುಪಾಯಖಿದಃ ।
ವ್ಯಸನಶತಾನ್ವಿತಾಃ ಸಮವಹಾಯ ಗುರೋಶ್ಚರಣಂ
ವಣಿಜ ಇವಾಜ ಸಂತ್ಯಕೃತಕರ್ಣಧರಾ ಜಲಧೌ
॥ ೩೩ ॥

ಜನ್ಮಾದಿಗಳಿಲ್ಲದ ಪ್ರಭುವೇ! ಪ್ರಾಣಾಯಾಮಾದಿ ಸಾಧನೆಗಳ ಮೂಲಕ ಇಂದ್ರಿಯಗಳ ಮೇಲೆ ಹತೋಟಿ ಪಡೆದಿದ್ದರೂ, ಸದ್ಗುರುವಿನ ಚರಣಗಳನ್ನು ಆಶ್ರಯಿಸದ ಕಾರಣ ಅತ್ಯಂತ ಚಂಚಲವಾದ ಅವನ ಮನೋರೂಪೀ ಕುದುರೆಯು ವಶವಾಗುವುದಿಲ್ಲ. ಅದು ಅವರ ಇಂದ್ರಿಯಗಳನ್ನು ಪದೇ-ಪದೇ ಕ್ಷುಬ್ಧಗೊಳಿಸುತ್ತಾ ಇರುತ್ತದೆ ಮತ್ತು ಅನೇಕ ವಿಪತ್ತುಗಳನ್ನು ಅವರ ಮುಂದೆ ಒಡ್ಡುತ್ತದೆ. ನಾವಿಕನಿಲ್ಲದ ಸಮುದ್ರದ ಹಡಗಿನಲ್ಲಿ ಪ್ರಯಾಣಿಸುವ ವ್ಯಾಪಾರಿಯಂತೆಯೇ ಅವರ ಸ್ಥಿತಿಗತಿಯಾಗುತ್ತದೆ. ಆದ್ದರಿಂದ ಮನೋರೂಪಿ ಕುದುರೆಯನ್ನು ವಶದಲ್ಲಿಟ್ಟುಕೊಳ್ಳಲು, ಪರಮಾನಂದದ ಪ್ರಾಪ್ತಿಗಾಗಿ ಸದ್ಗುರುವಿನ ಚರಣಗಳಲ್ಲಿ ಶರಣಾಗಬೇಕು. ಸದ್ಗುರುವಿನ ರೂಪದಲ್ಲಿ ಸಾಕ್ಷಾತ್ ನೀನೇ ಇರುವೆ. ॥ ೩೩ ॥

ಸ್ವಜನಸುತಾತ್ಮದಾರಧನಧಾಮಧರಾಸುರಥೈ-
ಸ್ತ್ವಯಿ ಸತಿ ಕಿಂ ನೃಣಾಂ ಶ್ರಯತ ಆತ್ಮನಿ ಸರ್ವರಸೇ ।
ಇತಿ ಸದಜಾನತಾಂ ಮಿಥುನತೋ ರತಯೇ ಚರತಾಂ
ಸುಖಯತಿ ಕೋ ನ್ವಿಹ ಸ್ವವಿಹತೇ ಸ್ವನಿರಸ್ತಭಗೇ
॥ ೩೪ ॥

ಭಗವಂತಾ! ನೀನು ಅಖಂಡ ಆನಂದಸ್ವರೂಪನೂ, ಶರಣಾಗತ ಭಕ್ತರಿಗೆ ಆತ್ಮಸ್ವರೂಪನೂ ಆಗಿರುವೆ. ನೀನಿರುವಾಗ ಸ್ವಜನರೆಂದು ಹೇಳಿಕೊಳ್ಳುವ ಪತ್ನೀ-ಪುತ್ರರು, ದೇಹ-ಗೇಹ, ಧನ ಸಂಪತ್ತು, ಭೂಮಿ, ರಥ-ವಾಹನಾದಿಗಳಿಂದ ಏನು ಪ್ರಯೋಜನ? ಈ ಸತ್ಯವನ್ನು ಅರಿಯದ ಜನರು ಆನಂದವನ್ನು ಪಡೆಯಲು ಸಂಸಾರದಲ್ಲಿ ರಮಮಾಣರಾಗುತ್ತಾರೆ ಹಾಗೂ ವಿಷಯಗಳ ಕಡೆಗೆ ಓಡುತ್ತಾ ಇರುತ್ತಾರೆ. ಆ ವಿಷಯಗಳಾದರೋ ಸ್ವರೂಪತಃ ವಿನಾಶವುಳ್ಳದ್ದೂ, ಸಾರಹೀನವೂ ಆಗಿವೆ. ಅವು ಜೀವನಿಗೆ ಯಾವ ಸುಖವನ್ನು ತಾನೇ ಕೊಡಬಲ್ಲವು? ಆದ್ದರಿಂದ ಜೀವಿಯು ಪರಮಾನಂದ ಸ್ವರೂಪನಾದ ನಿನ್ನನ್ನೇ ಭಜಿಸಬೇಕು. ॥ ೩೪ ॥

ಭುವಿ ಪುರುಪುಣ್ಯತೀರ್ಥಸದನಾನ್ಯೃಷಯೋ ವಿಮದಾ
ಸ್ತ ಉತ ಭವತ್ಪದಾಂಬುಜಹೃದೋಽಘಭಿದಂಘ್ರಿಜಲಾಃ ।
ದಧತಿ ಸಕೃನ್ಮನಸ್ತ್ವಯಿ ಯ ಆತ್ಮನಿ ನಿತ್ಯಸುಖೇ
ನ ಪುನರುಪಾಸತೇ ಪುರುಷಸಾರಹರಾವಸಥಾನ್
॥ ೩೫ ॥

ಭಗವಂತನೇ! ನಿನ್ನ ಚರಣಗಳನ್ನು ಹೃದಯದಲ್ಲಿ ಧರಿಸಿರುವಂತಹ ಮಹಾಪುರುಷರು ಮದ-ಮತ್ಸರಾದಿ ದೋಷಗಳಿಂದ ರಹಿತರಾಗಿರುತ್ತಾರೆ. ಇಂತಹವರು ಈ ಭೂಮಂಡಲದಲ್ಲಿ ಅತ್ಯಂತ ಪವಿತ್ರರಾಗಿದ್ದು ಸಾಕ್ಷಾತ್ ತೀರ್ಥಸ್ವರೂಪಿಗಳೇ ಆಗಿದ್ದಾರೆ. ಆ ಮಹಾಪುರುಷರ ಚರಣೋದಕವು ಸಮಸ್ತ ಪಾಪ-ತಾಪಗಳನ್ನು ಎಂದೆಂದಿಗೂ ನಾಶಮಾಡುವಂತಹುದು. ನೀನು ನಿತ್ಯಾನಂದ ಸ್ವರೂಪನೂ, ಎಲ್ಲರ ಆತ್ಮರೂಪನೂ ಆಗಿರುವೆ. ನಿನ್ನ ಲೀಲಾ-ಕಥೆಗಳು ನಿರಂತರವಾಗಿಯೂ ಕೇಳಲು ಸಿಗುವಂತಹ ಆ ಮಹಾಪುರುಷರ ಸತ್ಸಂಗದಲ್ಲಿ ಒಮ್ಮೆಯಾದರೂ ತನ್ನ ಮನಸ್ಸನ್ನು ತೊಡಗಿಸಿದರೆ ಮತ್ತೆ ಮನುಷ್ಯರ ಗುಣಗಳನ್ನು ಹರಣಮಾಡುವ ಸಂಸಾರದ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುವುದಿಲ್ಲ. ॥ ೩೫ ॥

ಈ ಜಗತ್ತು ಸತ್‌ವಸ್ತುವಿನಿಂದ ಉತ್ಪನ್ನವಾಗಿದೆ. ಆದ್ದರಿಂದ ಇದನ್ನೂ ಸತ್ಯವೆಂದೇ ತಿಳಿದುಕೊಂಡರೆ ಆಪತ್ತೇನಿದೆ? ಎಂದು ಪ್ರಶ್ನಿಸಿದರೆ, ಇದರ ಉತ್ತರ – ಈ ಮಾತು ತರ್ಕದಿಂದ ಸಿದ್ಧವಾಗುವುದಿಲ್ಲ. ಏಕೆಂದರೆ, ಇದರಲ್ಲಿ ಅನೇಕತೆಯ ಜೊತೆಗೆ ಅಸತ್ಯವೂ ಕಂಡುಬರುತ್ತದೆ. ಆದ್ದರಿಂದ ಇದನ್ನು ಸತ್ಯವೆಂದು ತಿಳಿಯಲಾಗುವುದಿಲ್ಲ. ವಾಸ್ತವವಾಗಿ ಇದು ವಿದ್ಯೆ ಮತ್ತು ಅವಿದ್ಯೆ ಅರ್ಥಾತ್-ಚೇತನ ಮತ್ತು ಜಡ ಎರಡರಿಂದಲೂ ಸೇರಿಕೊಂಡೇ ಇದೆ. ಪ್ರಭೋ! ಇದರ ಅಧಿಷ್ಠಾನದಲ್ಲಿ ಸತ್ತ್ವರೂಪ ಪರಮಾತ್ಮನಾದ ನೀನೇ ಇರುವೆ. ಜೊತೆಗೆ ಮಾಯೆಯ ಕಾರ್ಯರೂಪೀ ಪ್ರಪಂಚವೂ ಇದೆ. ಅದು ವಿಕಲ್ಪದಿಂದ ಇದೆ, ಆದರೂ

ಸತ ಇದಮುತ್ಥಿತಂ ಸದಿತಿ ಚೇನ್ನನು ತರ್ಕಹತಂ
ವ್ಯಭಿಚರತಿ ಕ್ವ ಚ ಕ್ವ ಚ ಮೃಷಾ ನ ತಥೋಭಯಯುಕ್ ।
ವ್ಯವಹೃತಯೇ ವಿಕಲ್ಪ ಇಷಿತೋಽಂಧಪರಂಪರಯಾ
ಭ್ರಮಯತಿ ಭಾರತೀ ತ ಉರುವೃತ್ತಿಭಿರುಕ್ಥಜಡಾನ್
॥ ೩೬ ॥

ವ್ಯವಹಾರಕ್ಕಾಗಿ ಒಪ್ಪಿಕೊಂಡದ್ದಾಗಿದೆ; ಎನ್ನುವ ಮಾನ್ಯತೆಯೂ ಅಂಧಪರಂಪರೆಯಿಂದ ನಡೆದುಬಂದಿದೆ. ನಿನ್ನ ವಾಣಿಯಾದ ವೇದದ ವಾಸ್ತವಿಕ ತಾತ್ಪರ್ಯ ಜಗತ್ತಿನ ಸತ್ಯತೆಯಲ್ಲಿಲ್ಲ. ಹೀಗಿದ್ದರೂ ಕರ್ಮಕಾಂಡದಲ್ಲಿ ಸಿಕ್ಕಿಹಾಕಿಕೊಂಡ ಜನರು ದೊಡ್ಡ-ದೊಡ್ಡ ಕರ್ಮಫಲಗಳ ಪ್ರಲೋಭನೆಯಿಂದ ಸ್ವರ್ಗಾದಿಭೋಗಗಳನ್ನೇ ಹಾಗೂ ಭೌತಿಕ ಸುಖವನ್ನೇ ಸುಖವೆಂದು ತಿಳಿಯುತ್ತಾರೆ. ಅವರ ಈ ಮಾನ್ಯತೆಯು ಭ್ರಮೆಯಿಂದ ಹಗ್ಗವನ್ನು ಸರ್ಪವೆಂದು ತಿಳಿಯುವಂತೆಯೇ ಆಗಿದೆ. ಆ ಭ್ರಾಂತಿಯಿಂದ ಹಗ್ಗವೂ ಹಾವಾಗಿ ಕಂಡುಬರುತ್ತದೆ. ಹಾಗೆಯೇ ಈ ಜಗತ್ತಿನ ರೂಪದಲ್ಲಿ ಸಗುಣ ನಿರಾಕಾರ ರೂಪದಿಂದ ಪರಮಾತ್ಮನ ಸತ್ತೆಯೇ ಇದೆ. ಆದರೆ ಮಾಯೆಯ ಪರದೆಯ ಕಾರಣ ಪ್ರಪಂಚವೇ ಸತ್ಯವಾಗಿ ತೋರುವುದು, ಪರಮಾತ್ಮನು ಕಾಣುವುದಿಲ್ಲ. ॥ ೩೬ ॥

ನ ಯದಿದಮಗ್ರ ಆಸ ನ ಭವಿಷ್ಯದತೋ ನಿಧನಾ-
ದನುಮಿತಮಂತರಾ ತ್ವಯಿ ವಿಭಾತಿ ಮೃಷೈಕರಸೇ ।
ಅತ ಉಪಮೀಯತೇ ದ್ರವಿಣಜಾತಿವಿಕಲ್ಪಪಥೈ-
ರ್ವಿತಥಮನೋವಿಲಾಸಮೃತಮಿತ್ಯವಯಂತ್ಯಬುಧಾಃ
॥ ೩೭ ॥

ಇದರ ಇನ್ನೊಂದು ಮುಖ್ಯ ಪ್ರಮಾಣ - ಈ ಜಗತ್ತು ಉತ್ಪತ್ತಿಗೆ ಮೊದಲು ಇರಲಿಲ್ಲ, ಪ್ರಳಯದ ನಂತರವೂ ಇರಲಾರದು. ಆದುದರಿಂದ ನಡುವೆಯೂ ಮಿಥ್ಯೆಯೇ ಆಗಿದೆ ಎಂಬುದು ಸಿದ್ಧವಾಗುತ್ತದೆ. ಕೆಲವು ಸಮಯದವರೆಗೆ ಇದು ನಿನ್ನಲ್ಲಿ ಕಂಡುಬರುತ್ತದೆ. ದ್ರವ್ಯ, ಜಾತಿ, ಆಕಾರ ಮುಂತಾದವುಗಳ ಮೂಲಕ ಇವೆಲ್ಲದರ ವ್ಯವಹಾರಕ್ಕಾಗಿ ಅವೆಲ್ಲವುಗಳಿಗೆ ನಾಮ-ರೂಪಗಳನ್ನು ಇರಿಸಲಾಗುತ್ತದೆ. ವಾಸ್ತವವಾಗಿ ಇದೂ ಕೂಡ ವಾಣಿಯ ವಿಲಾಸವೇ ಆಗಿದೆ. ಅವುಗಳ ಹೆಸರನ್ನಿಟ್ಟಿ ವ್ಯವಹಾರದಲ್ಲಿ ಬಳಸುವುದೂ ಒಂದು ರೀತಿಯಿಂದ ನಮ್ಮ ಕಲ್ಪನೆಯೇ ಆಗಿದೆ. ಜ್ಞಾನಿಗಳು ಅವೆಲ್ಲವನ್ನು ಮತ್ತು ಅವುಗಳ ವ್ಯವಹಾರವನ್ನು ಮಿಥ್ಯೆಯೆಂದೇ ತಿಳಿಯುತ್ತಾರೆ. ಅವರ ದೃಷ್ಟಿಯಲ್ಲಿ ಎಲ್ಲದರಲ್ಲಿಯೂ ಏಕರಸನಾದ ನೀನೇ ಇರುವೆ. ಅವರು ನಿನ್ನ ಸಾಕ್ಷಾತ್ಕಾರವನ್ನೇ ಪಡೆಯುತ್ತಾರೆ. ಆದರೆ ಅಜ್ಞಾನಿಗಳಿಗೆ ನೀನು ಕಾಣುವುದಿಲ್ಲ; ಪ್ರಾಪಂಚಿಕ ವಸ್ತುಗಳನ್ನೇ ನೋಡುತ್ತಾರೆ ಹಾಗೂ ಅವನ್ನೇ ಸತ್ಯವೆಂದು ತಿಳಿಯುತ್ತಾರೆ. ॥ ೩೭ ॥

ಸ ಯದಜಯಾ ತ್ವಜಾಮನುಶಯೀತ ಗುಣಾಂಶ್ಚ ಜುಷನ್
ಭಜತಿ ಸರೂಪತಾಂ ತದನು ಮೃತ್ಯುಮಪೇತಭಗಃ ।
ತ್ವಮುತ ಜಹಾಸಿ ತಾಮಹಿರಿವ ತ್ವಚಮಾತ್ತಭಗೋ
ಮಹಸಿ ಮಹೀಯಸೇಽಷ್ಟಗುಣಿತೇಽಪರಿಮೇಯಭಗಃ
॥ ೩೮ ॥

ಹೀಗೆ ಈ ಜೀವನು ಮಾಯೆಯ ಕಾರಣ ಮಾಯೆಯನ್ನು ಸ್ವೀಕರಿಸಿ ಮತ್ತೆ ಗುಣಗಳನ್ನು ಸ್ವೀಕರಿಸಿ ತಾನು ಮಾಯಾಮಯನೇ ಆಗಿ ಹೋಗುತ್ತಾನೆ. ತನ್ನ ಸ್ವರೂಪವಾದ ಸಚ್ಚಿದಾನಂದ ಸ್ವರೂಪವನ್ನು ಪೂರ್ಣವಾಗಿ ಮರೆತುಬಿಡುತ್ತಾನೆ. ಹೀಗೆ ತನ್ನ ಐಶ್ವರ್ಯವನ್ನು ನಾಶಪಡಿಸಿಕೊಂಡು ಮೃತ್ಯುಮುಖಿನಾಗುತ್ತಾನೆ ಹಾಗೂ ಜನ್ಮ-ಮರಣ ಚಕ್ರದಲ್ಲಿ ಅಲೆಯುತ್ತಾ ಇರುತ್ತಾನೆ. ಆದರೆ ನೀನು ನಿನ್ನ ಐಶ್ವರ್ಯವನ್ನು ನಿನ್ನ ಬಳಿಯೇ ಇಟ್ಟುಕೊಂಡು ಹಾವು ಪೊರೆಯನ್ನು ಕಳಚುವಂತೆ ಮಾಯೆಯನ್ನು ಬಿಟ್ಟುಬಿಡುವೆ. ನೀನು ನಿನ್ನದೇ ಆದ ಅಪರಿಮಿತ ಅಣಿಮಾದಿ ಅಷ್ಟಸಿದ್ಧಿಗಳಿಂದ ಕೂಡಿಕೊಂಡು ನಿನ್ನ ಐಶ್ವರ್ಯದಲ್ಲೇ ಸ್ಥಿತನಾಗಿರುವೆ. ಜೀವನು ನಿನ್ನ ಅಂಶನಾದ್ದರಿಂದ ಸಚ್ಚಿದಾನಂದ ಸ್ವರೂಪನೇ ಆಗಿದ್ದಾನೆ. ಆದರೆ ಅಲ್ಪವಾದ ಜೀವನು ತನ್ನ ಐಶ್ವರ್ಯವನ್ನು ಕಳೆದುಕೊಳ್ಳುವನು. ಮಹಾನ್ ಆದ ನೀನು ನಿನ್ನ ಮಹಿಮೆಯಲ್ಲೇ ಸ್ಥಿತನಾಗಿರುವೆ. ॥ ೩೮ ॥

ಯದಿ ನ ಸಮುದ್ಧರಂತಿ ಯತಯೋ ಹೃದಿ ಕಾಮಜಟಾ
ದುರಧಿಗಮೋಽಸತಾಂ ಹೃದಿ ಗತೋಽಸ್ಮೃತಕಂಠಮಣಿಃ ।
ಅಸುತೃಪಯೋಗಿನಾಮುಭಯತೋಽಪ್ಯಸುಖಂ ಭಗವನ್
ನನಪಗತಾಂತಕಾದನಧಿರೂಢಪದಾದ್ಭವತಃ
॥ ೩೯ ॥

ಪ್ರಭುವೇ ! ಹೃದಯದಲ್ಲಿರುವ ಕಾಮವಾಸನೆಯ ಜಾಲವನ್ನು ಸಂಯಮದ ಮೂಲಕ ಸಮೂಲವಾಗಿ ಕಿತ್ತೊಗೆಯದಿದ್ದರೆ ವಿಷಯಗಳಲ್ಲಿ ಮುಳುಗಿದ ಸಾಧಕರ ಹೃದಯದಲ್ಲಿ ನೀನಿದ್ದರೂ ಕೊರಳ ಕಂಠೀಹಾರವನ್ನು ಮರೆತಂತೆ ನಿನ್ನ ದರ್ಶನ ಪಡೆಯುವುದು ಅವರಿಗೆ ಕಷ್ಟವೇ ಇದೆ. ಈ ಕಾರಣದಿಂದಲೇ ವಿಷಯೀ ಮನುಷ್ಯರು ನಿನ್ನಿಂದ ವಿಮುಖರಾಗಿದ್ದು ಇಂದ್ರಿಯಗಳನ್ನು ಮತ್ತು ಪ್ರಾಣಗಳನ್ನು ತೃಪ್ತಿಪಡಿಸುವುದರಲ್ಲೇ ತೊಡಗಿರುತ್ತಾರೆ. ಅವರು ಮೃತ್ಯುವಿನಿಂದ ಬಿಡುಗಡೆ ಹೊಂದುವುದೇ ಇಲ್ಲ, ನಿನ್ನ ಸ್ವರೂಪವನ್ನು ತಿಳಿಯದ ಕಾರಣ ಮರಣಾನಂತರ ನರಕವನ್ನೂ ಅನುಭವಿಸಬೇಕಾಗುತ್ತದೆ. ಹೀಗೆ ಇಹಲೋಕ ಮತ್ತು ಪರಲೋಕ ಎರಡರಿಂದಲೂ ಅವನಿಗೆ ದುಃಖವೇ ದುಃಖವಿದೆ. ॥ ೩೯ ॥

ತ್ವದವಗಮೀ ನ ವೇತ್ತಿ ಭವದುತ್ಥಶುಭಾಶುಭಯೋ-
ರ್ಗುಣವಿಗುಣಾನ್ವಯಾಂಸ್ತರ್ಹಿ ದೇಹಭೃತಾಂ ಚ ಗಿರಃ ।
ಅನುಯುಗಮನ್ವಹಂ ಸಗುಣ ಗೀತಪರಂಪರಯಾ
ಶ್ರವಣಭೃತೋ ಯತಸ್ತ್ವಮಪವರ್ಗಗತಿರ್ಮನುಜೈಃ
॥ ೪೦ ॥

ಸಗುಣನಾದ ಪರಮಾತ್ಮನೇ! ನಿನ್ನನ್ನು ತಿಳಿದ ಭಕ್ತನು ಪುಣ್ಯ ಪಾಪಗಳ ಫಲಗಳನ್ನು ಇಲ್ಲೇ ತ್ಯಜಿಸಿ ಬಿಡುತ್ತಾನೆ. ಇವೆರಡೂ ಅವನಿಗೆ ಸಂಬಂಧಿಸಿದ್ದಲ್ಲ, ಅವನು ಇತರ ದೇಹಧಾರಿಗಳಿಗೆ ಇರುವ ವಿಧಿ-ನಿಷೇಧಗಳೆಂಬ ವೇದವಾಣಿಯನ್ನು ಸ್ವೀಕರಿಸುವುದಿಲ್ಲ, ಏಕೆಂದರೆ, ಅವನು ತನ್ನ ವಾಸ್ತವಿಕ ಸ್ವರೂಪವನ್ನು ಅರ್ಥಾತ್ ನಿನ್ನನ್ನು ಪಡೆದುಕೊಂಡುಬಿಟ್ಟಿರುವನು. ನಿನ್ನನ್ನು ಪಡೆಯುವುದೇ ಶಾಸ್ತ್ರಗಳ ಚರಮ ಸಿದ್ಧಾಂತವಾಗಿದೆ. ಭಕ್ತರು ಪ್ರತಿಯುಗದಲ್ಲಿಯೂ ಗೀತ ಪರಂಪರೆಯಿಂದ ನಿನ್ನ ಗುಣಗಳನ್ನು ಹಾಡುತ್ತಾ ಬಂದಿದ್ದಾರೆ. ಅವನ್ನು ಅವನು ಶ್ರವಣಿಸುತ್ತಾನೆ. ಶ್ರವಣ ಮಾಡುತ್ತಾ-ಮಾಡುತ್ತಾ ಅವನ ವೃತ್ತಿಯು ತದಾಕಾರವಾಗಿ ಹೋಗುತ್ತದೆ. ಅವನಿಗೆ ನೀನು ಮೋಕ್ಷ ಸ್ವರೂಪ ಸದ್ಗತಿಯನ್ನು ಕರುಣಿಸುತ್ತೀಯೆ. ॥ ೪೦ ॥

ದ್ಯುಪತಯ ಏವ ತೇ ನ ಯಯುರಂತಮನಂತತಯಾ
ತ್ವಮಪಿ ಯದಂತರಾಂಡನಿಚಯಾ ನನು ಸಾವರಣಾಃ ।
ಖ ಇವ ರಜಾಂಸಿ ವಾಂತಿ ವಯಸಾ ಸಹ ಯಚ್ಛ್ರುತಯ-
ಸ್ತ್ವಯಿ ಹಿ ಫಲಂತ್ಯತನ್ನಿರಸನೇನ ಭವನ್ನಿಧನಾಃ
॥ ೪೧ ॥

ಭಗವಂತನೇ ! ನಿನ್ನೊಳಗೆ ಏಳೇಳು ಆವರಣಗಳ ಸಹಿತ ಅನೇಕ ಬ್ರಹ್ಮಾಂಡಗಳ ಸಮುದಾಯವೇ ಇದೆ. ಅನಂತಕೋಟಿ ಬ್ರಹ್ಮಾಂಡ ನಾಯಕನಾದ ನಿನ್ನಲ್ಲಿ ಅವು ಆಕಾಶದಲ್ಲಿ ಹಾರಾಡುತ್ತಿರುವ ಧೂಳಿನ ಕಣಗಳಂತೆ ಸುತ್ತುತ್ತಾ ಇವೆ. ನೀನು ಅನಂತನೂ, ಅಸೀಮನೂ ಆಗಿರುವೆ. ನಿನ್ನ ಆದಿ-ಅಂತ್ಯವನ್ನು ನಿನ್ನಿಂದಲೇ ವರ್ಣಿಸಲಾಗದಿದ್ದಾಗ ಸಾಧಾರಣ ಬೇರೆ ಪ್ರಾಣಿ ಅದನ್ನು ಹೇಗೆ ತಿಳಿಯಬಲ್ಲನು? ಇದೆಂತಹ ಆಶ್ಚರ್ಯವಾಗಿದೆ. ಅವೆಲ್ಲ ಬ್ರಹ್ಮಾಂಡಗಳು ಕಾಲನ ವೇಗದಿಂದ ಸುತ್ತುತ್ತಾ ಇರುತ್ತವೆ. ಶ್ರುತಿಗಳಾದ ನಾವೂ ಕೂಡ 'ನೇತಿ-ನೇತಿ' ಎಂಬ ವಾಕ್ಯಗಳ ಮೂಲಕ ಇತರ ಎಲ್ಲವನ್ನು ನಿರಾಕರಣ ಮಾಡಿ ಕೊನೆಗೆ ಶೇಷವಾಗಿ ಉಳಿಯುವ ನಿನ್ನಲ್ಲೇ ಸಫಲರಾಗುತ್ತೇವೆ. ॥ ೪೧ ॥

ಶ್ರೀಭಗವಾನುವಾಚ

ಇತ್ಯೇತದ್ ಬ್ರಹ್ಮಣಃ ಪುತ್ರಾ ಆಶ್ರುತ್ಯಾತ್ಮಾನುಶಾಸನಮ್ ।
ಸನಂದನಮಥಾನರ್ಚುಃ ಸಿದ್ಧಾ ಜ್ಞಾತ್ವಾಽಽತ್ಮನೋ ಗತಿಮ್
॥ ೪೨ ॥

**ಭಗವಾನ್ ನಾರಾಯಣನು ಹೇಳಿದನು** – ದೇವರ್ಷಿಗಳೇ ! ಈ ಪ್ರಕಾರ ಸನಕಾದಿ ಋಷಿಗಳು ಜೀವ (ಆತ್ಮಾ) ಮತ್ತು ಬ್ರಹ್ಮನ ಏಕತೆಯನ್ನು ಹೇಳುವ ಉಪದೇಶವನ್ನು ಕೇಳಿ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡರು. ನಿತ್ಯಸಿದ್ಧರಾಗಿದ್ದರೂ ಅವರ ಉಪದೇಶವನ್ನು ಶ್ರವಣಿಸಿ ಅವರು ಕೃತಕೃತ್ಯರಾಗಿ ಸನಂದನರನ್ನು ಪೂಜಿಸಿದರು. ॥ ೪೨ ॥

ಇತ್ಯಶೇಷಸಮಾಮ್ನಾಯಪುರಾಣೋಪನಿಷದ್ರಸಃ ।
ಸಮುದ್ಧೃತಃ ಪೂರ್ವಜಾತೈರ್ವ್ಯೋಮಯಾನೈರ್ಮಹಾತ್ಮಭಿಃ ॥ ೪೩ ॥

ತ್ವಂ ಚೈತದ್ಬ್ರಹ್ಮದಾಯಾದ ಶ್ರದ್ಧಯಾಽಽತ್ಮಾನುಶಾಸನಮ್ ।
ಧಾರಯಂಶ್ಚರ ಗಾಂ ಕಾಮಂ ಕಾಮಾನಾಂ ಭರ್ಜನಂ ನೃಣಾಮ್ ॥ ೪೪ ॥

*ಶ್ರೀಶುಕ ಉವಾಚ*

ಏವಂ ಸ ಋಷಿಣಾಽಽದಿಷ್ಟಂ ಗೃಹೀತ್ವಾ ಶ್ರದ್ಧಯಾಽಽತ್ಮವಾನ್ ।
ಪೂರ್ಣಃ ಶ್ರುತಧರೋ ರಾಜನ್ನಾಹ ವೀರವ್ರತೋ ಮುನಿಃ ॥ ೪೫ ॥

*ನಾರದ ಉವಾಚ*

ನಮಸ್ತಸ್ಮೈ ಭಗವತೇ ಕೃಷ್ಣಾಯಾಮಲಕೀರ್ತಯೇ ।
ಯೋ ಧತ್ತೇ ಸರ್ವಭೂತಾನಾಮಭವಾಯೋಶತೀಃ ಕಲಾಃ ॥ ೪೬ ॥

ಇತ್ಯಾದ್ಯಮೃಷಿಮಾನಮ್ಯ ತಚ್ಛಿಷ್ಯಾಂಶ್ಚ ಮಹಾತ್ಮನಃ ।
ತತೋಽಗಾದಾಶ್ರಮಂ ಸಾಕ್ಷಾತ್ ಪಿತುರ್ದ್ವೈಪಾಯನಸ್ಯ ಮೇ ॥ ೪೭ ॥

ಸಭಾಜಿತೋ ಭಗವತಾ ಕೃತಾಸನಪರಿಗ್ರಹಃ ।
ತಸ್ಮೈ ತದ್ವರ್ಣಯಾಮಾಸ ನಾರಾಯಣಮುಖಾಚ್ಛ್ರುತಮ್ ॥ ೪೮ ॥

ಇತ್ಯೇತದ್ವರ್ಣಿತಂ ರಾಜನ್ ಯನ್ನಃ ಪ್ರಶ್ನಃ ಕೃತಸ್ತ್ವಯಾ ।
ಯಥಾ ಬ್ರಹ್ಮಣ್ಯನಿರ್ದೇಶ್ಯೇ ನಿರ್ಗುಣೇಽಪಿ ಮನಶ್ಚರೇತ್ ॥ ೪೯ ॥

ನಾರದನೇ! ಸನಕಾದಿ ಋಷಿಗಳು ಸೃಷ್ಟಿಯ ಮೊದಲಿಗೆ ಉತ್ಪನ್ನರಾಗಿದ್ದರು. ಆದ್ದರಿಂದ ಅವರು ಎಲ್ಲರ ಪೂರ್ವಜರಾಗಿದ್ದಾರೆ. ಆಕಾಶಗಾಮಿಗಳಾದ ಆ ಮಹಾತ್ಮರು ಈ ಪ್ರಕಾರ ಸಮಸ್ತ ವೇದ, ಪುರಾಣ ಮತ್ತು ಉಪನಿಷತ್ತುಗಳು ಸಾರವನ್ನು ತೆಗೆದು ಹೇಳಿದುದು ಸಮಸ್ತ ಶಾಸ್ತ್ರಗಳ ಸಾರವಾಗಿದೆ. ॥ ೪೩ ॥ ದೇವರ್ಷಿಯೇ! ನೀನೂ ಕೂಡ ಅವರಂತೆಯೇ ಬ್ರಹ್ಮಮಾನಸ ಪುತ್ರನಾಗಿರುವೆ. ಅವರ ಜ್ಞಾನಸಂಪತ್ತಿಗೆ ಅಧಿಕಾರಿಯಾಗಿರುವೆ. ಆದ್ದರಿಂದ ನೀನೂ ಈ ಬ್ರಹ್ಮವಿದ್ಯೆಯನ್ನು ಧರಿಸಿಕೊಂಡು ಸ್ವಚ್ಛಂದ ಭಾವದಿಂದ ಭೂಮಂಡಲದಲ್ಲಿ ಸಂಚರಿಸು. ಈ ವಿದ್ಯೆಯು ಸಮಸ್ತ ವಾಸನೆಗಳನ್ನು ಭಸ್ಮಮಾಡುವಂತಹುದು. ॥ ೪೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪ್ರಿಯ ಪರೀಕ್ಷಿತನೇ! ದೇವಋಷಿನಾರದರು ದೊಡ್ಡ ಸಂಯಮಿಯೂ, ಜ್ಞಾನಿಗಳೂ, ಪೂರ್ಣಕಾಮರೂ, ನೈಷ್ಠಿಕ ಬ್ರಹ್ಮಚಾರಿಗಳೂ ಆಗಿದ್ದಾರೆ. ಭಗವಾನ್ ನಾರಾಯಣನಿಂದ ಕೊಡಲ್ಪಟ್ಟ ಉಪದೇಶವನ್ನು ಅವರು ಬಹಳ ಶ್ರದ್ಧೆಯಿಂದ ಶ್ರವಣಿಸಿ ಇಂತೆಂದರು – ॥ ೪೫ ॥

**ದೇವರ್ಷಿನಾರದರು ಹೇಳಿದರು** – ಭಗವಂತನೇ! ನೀನು ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ ಆಗಿರುವೆ. ನಿನ್ನ ಕೀರ್ತಿಯು ಪರಮ ಪವಿತ್ರವಾಗಿದೆ. ನೀನು ಸಮಸ್ತ ಪ್ರಾಣಿಗಳ ಪರಮ ಕಲ್ಯಾಣಕ್ಕಾಗಿ ಅವರ ಮೇಲೆ ಅನುಗ್ರಹವನ್ನು ತೋರಲು ಮನೋಹರವಾದ ಅವತಾರವನ್ನು ತಾಳುವ ಲೀಲೆಯನ್ನು ಮಾಡುತ್ತಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೪೬ ॥

ಪ್ರಿಯಪರೀಕ್ಷಿತನೇ! ಹೀಗೆ ಆದಿಋಷಿ ಭಗವಾನ್ ನಾರಾಯಣನಿಗೆ ಮತ್ತು ಅವನ ಶಿಷ್ಯರಿಗೆ ನಮಸ್ಕಾರ ಮಾಡಿ ದೇವರ್ಷಿನಾರದರು ನನ್ನ ತಂದೆಯವರಾದ ಶ್ರೀಕೃಷ್ಣದ್ವೈಪಾಯನರ ಆಶ್ರಮಕ್ಕೆ ಹೋದರು. ॥ ೪೭ ॥ ಅಲ್ಲಿ ನನ್ನ ತಂದೆಯವರಾದ ಶ್ರೀವೇದವ್ಯಾಸರು ಅವರನ್ನು ಯಥೋಚಿತವಾಗಿ ಸತ್ಕರಿಸಿದರು. ಅವರು ಸುಖಾಸೀನರಾಗಿ ಕುಳಿತು ಭಗವಾನ್ ನಾರಾಯಣನ ಶ್ರೀಮುಖದಿಂದ ಕೇಳಿದ ಬ್ರಹ್ಮವಿಷಯಕ ಚರ್ಚೆಯನ್ನು ಆದ್ಯಂತ ವಾಗಿ ತಿಳಿಸಿದರು. ॥ ೪೮ ॥ ರಾಜೇಂದ್ರನೇ! "ಶ್ರುತಿಗಳು ಬ್ರಹ್ಮ ವಸ್ತುವನ್ನು ಹೇಗೆ ಪ್ರತಿಪಾದಿಸಬಲ್ಲವು? ಏಕೆಂದರೆ, ನಿರ್ಗುಣ ತತ್ತ್ವವಾದರೋ ಮನಸ್ಸು ಮಾತಿಗಿಂತ ಅತೀತವಾಗಿದೆ ಮತ್ತು ಪ್ರಕೃತಿ ಗುಣಗಳಿಂದ ರಹಿತವಾಗಿದೆ" ಎಂದು ನೀನು ಕೇಳಿದ ಪ್ರಶ್ನೆಗೆ ನಾನು ಉತ್ತರ ಕೊಟ್ಟಂತಾತಯಿತಲ್ಲ! ॥ ೪೯ ॥ ಪ್ರಿಯಪರೀಕ್ಷಿತನೇ! ಭಗವಂತನು ತನ್ನ ಸಂಕಲ್ಪದಿಂದಲೇ ಈ ವಿಶ್ವವನ್ನು ನಿರ್ಮಿಸಿರುತ್ತಾನೆ. ಅವನೇ ಎಲ್ಲರ ಪ್ರೇರಕನೂ ಆಗಿದ್ದಾನೆ. ಆದಿ, ಮಧ್ಯ, ಅಂತ್ಯದಲ್ಲಿ ಅವನೇ ಇರುತ್ತಾನೆ. ಅವನೇ ಅವ್ಯಕ್ತ ಪ್ರಕೃತಿ ಮತ್ತು ಜೀವ ಎರಡರ ಈಶ್ವರನಾಗಿದ್ದಾನೆ. ಅವನೇ ಈ ವಿಶ್ವವನ್ನು ಸೃಷ್ಟಿಸಿ ಜೀವರೂಪದಿಂದ ಇದರಲ್ಲಿ ಪ್ರವೇಶಿಸಿದನು. ಜೀವನು ಸಾಕ್ಷಾತ್ ಪರಮಾತ್ಮನ ಅಂಶನಾದ್ದರಿಂದ ಇವನು ಋಷಿಸ್ವರೂಪನಾಗಿದ್ದಾನೆ. ಇವನಿಗೆ ನಿಲ್ಲಲೆಂದೇ ಪರಮಾತ್ಮನು

ಯೋಽಸ್ಯೋತ್ಪ್ರೇಕ್ಷಕ ಆದಿಮಧ್ಯನಿಧನೇ
ಯೋಽವ್ಯಕ್ತಜೀವೇಶ್ವರೋ
ಯಃ ಸೃಷ್ಟ್ವೇದಮನುಪ್ರವಿಶ್ಯ ಋಷಿಣಾ
ಚಕ್ರೇ ಪುರಃ ಶಾಸ್ತಿ . ತಾಃ ।
ಯಂ ಸಂಪದ್ಯ ಜಹಾತ್ಯಜಾಮನುಶಯೀ
ಸುಪ್ತಃ ಕುಲಾಯಂ ಯಥಾ
ತಂ ಕೈವಲ್ಯನಿರಸ್ತಯೋನಿಮಭಯಂ
ಧ್ಯಾಯೇದಜಸ್ರಂ ಹರಿಮ್ ॥ ೫೦ ॥

ದೇಹವನ್ನು ನಿರ್ಮಿಸಿ ಸಮಸ್ತ ಜೀವರ ನಿಯಂತ್ರಣವನ್ನು ಮಾಡುತ್ತಿರುವನು. ಆ ಪರಬ್ರಹ್ಮ ಪರಮಾತ್ಮನನ್ನು ಪ್ರಾಪ್ತಮಾಡಿ ಕೊಂಡು ಜೀವನು ಮಾಯೆಯನ್ನು ತ್ಯಜಿಸಿ ತನ್ನ ಸ್ವರೂಪವಾದ ಪರಬ್ರಹ್ಮನನ್ನು ಹೊಂದುತ್ತಾನೆ. ಗಾಢನಿದ್ದೆಯಲ್ಲಿ ಮನುಷ್ಯನಿಗೆ ಈ ಪಾಂಚಭೌತಿಕ ಶರೀರದ ಎಚ್ಚರವಿರುವುದಿಲ್ಲವೋ ಹಾಗೆಯೇ ಸತತ ಪರಮಾತ್ಮನನ್ನು ಚಿಂತಿಸುತ್ತಿರುವ ಭಕ್ತನಿಗೆ ಮಾಯಾಮಯ ಪದಾರ್ಥಗಳ ಚಿಂತನೆ ಯಾಗುವುದಿಲ್ಲ. ಆದ್ದರಿಂದ ಮುಕ್ತನಾಗಲು ಏಕಮಾತ್ರ ಸರಳ ಉಪಾಯವು ಸತತವಾಗಿ ಭಗವಂತನನ್ನು ಸ್ಮರಿಸು ವುದೇ ಆಗಿದೆ. ಭಗವಂತನು ಕೈವಲ್ಯ ಸ್ವರೂಪನಾಗಿದ್ದಾನೆ. ಅವನ ಭಜನೆ ಮಾಡುವುದರಿಂದ ಪ್ರಪಂಚದ ಆವಾಗಮನವು ನಾಶವಾಗಿ ಹೋಗುತ್ತದೆ. ಆದ್ದರಿಂದ ಯಾವಾಗಲೂ ಭಗವಂತನನ್ನೇ ಚಿಂತನೆ ಭಜನೆ ಮಾಡುತ್ತಾ ಇರಬೇಕು. ಅದರಲ್ಲೇ ಜೀವಿಯ ಮಂಗಳವಿದೆ, ಅದೇ ನಿರ್ಭಯ ಸ್ಥಾನವಾಗಿದೆ. ಆದ್ದರಿಂದ ಭಗವಂತನಲ್ಲಿ ಶರಣಾ ಗಬೇಕು. ॥ ೫೦ ॥

ಎಂಭತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೮೭ ॥
ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ
ನಾರದನಾರಾಯಣಸಂವಾದೇ ವೇದಸ್ತುತಿರ್ನಾಮ ಸಪ್ತಾಶೀತಿತಮೋಽಧ್ಯಾಯಃ ॥ ೮೭ ॥

# ಎಂಭತ್ತೆಂಟನೆಯ ಅಧ್ಯಾಯ

## ವೃಕಾಸುರನ ಕಥೆ

*ರಾಜೋವಾಚ*

ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಮ್ ।
ಪ್ರಾಯಸ್ತೇ ಧನಿನೋ ಭೋಜಾ ನ ತು ಲಕ್ಷ್ಮ್ಯಾಃ ಪತಿಂ ಹರಿಮ್ ॥ ೧ ॥

ಪರೀಕ್ಷಿದ್ರಾಜನು ಕೇಳುತ್ತಾನೆ – ಪೂಜ್ಯರೇ! ಭಗವಾನ್ ಶಂಕರನು ಸಕಲಭೋಗಪರಿತ್ಯಾಗಿಯು. ಆದರೆ ಅವನನ್ನು ಉಪಾಸಿ ಸುವ ದೇವಾಸುರ-ಮನುಷ್ಯರು ಪ್ರಾಯಶಃ ಶ್ರೀಮಂತರೂ, ಭೋಗಸಂಪನ್ನರೂ ಆಗುತ್ತಾರೆ. ಇದಕ್ಕೆ ಪ್ರತಿಯಾಗಿ ಭಗವಾನ್ ವಿಷ್ಣುವು ಲಕ್ಷ್ಮೀಪತಿಯು. ಅವನನ್ನು ಉಪಾಸಿಸುವವರು ಪ್ರಾಯಶಃ ಧನಹೀನರೂ, ವಿರಾಗಿಗಳೂ ಆಗಿರುತ್ತಾರೆ. ॥ ೧ ॥ ಇಬ್ಬರೂ ಪ್ರಭು ಗಳು ತ್ಯಾಗ ಮತ್ತು ಭೋಗಗಳ ದೃಷ್ಟಿಯಿಂದ ವಿರುದ್ಧ ಸ್ವಭಾವದವ ರಾಗಿದ್ದಾರೆ. ಆದರೆ ಅವರ ಉಪಾಸಕರಿಗೆ ಅವರ ಸ್ವರೂಪದ ವಿರುದ್ಧ ಫಲವೇ ಸಿಗುತ್ತದೆ. ತ್ಯಾಗಿಯ ಉಪಾಸನೆಯಿಂದ ಭೋಗ ಮತ್ತು ಲಕ್ಷ್ಮೀಪತಿಯ ಉಪಾಸನೆಯಿಂದ ತ್ಯಾಗ ಹೇಗೆ ದೊರೆ ಯುತ್ತದೆ? ಈ ವಿಷಯದಲ್ಲಿ ನನಗೆ ಸಂದೇಹ ಉಂಟಾಗಿದೆ ದಯವಿಟ್ಟು ಇದನ್ನು ತಿಳಿಸಿರಿ. ॥ ೨ ॥

ಏತದ್ವೇದಿತುಮಿಚ್ಛಾಮಃ ಸಂದೇಹೋಽತ್ರ ಮಹಾನ್ ಹಿ ನಃ ।
ವಿರುದ್ಧಶೀಲಯೋಃ ಪ್ರಭ್ವೋರ್ವಿರುದ್ಧಾ ಭಜತಾಂ ಗತಿಃ ॥ ೨ ॥

*ಶ್ರೀಶುಕ ಉವಾಚ*

ಶಿವಃ ಶಕ್ತಿಯುತಃ ಶಶ್ವತ್ತ್ರಿಲಿಂಗೋ ಗುಣಸಂವೃತಃ ।
ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಶಿವನು ಸದಾ ತನ್ನ ಶಕ್ತಿಯಿಂದ ಯುಕ್ತನಾಗಿರುವನು. ಅವನು ಸತ್ತ್ವಾದಿ ಗುಣಗಳಿಂದ ಕೂಡಿ ಅಹಂಕಾರಕ್ಕೆ ಅಧಿಷ್ಠಾನನೂ ಆಗಿರುವನು. ವೈಕಾರಿಕ, ತೈಜಸ ಮತ್ತು ತಾಮಸ – ಇವು ಅಹಂ ಕಾರದ ಮೂರು ಭೇದಗಳು. ॥ ೩ ॥

ತತೋ ವಿಕಾರಾ ಅಭವನ್ ಷೋಡಶಾಮೀಷು ಕಂಚನ ।
ಉಪಧಾವನ್ ವಿಭೂತೀನಾಂ ಸರ್ವಾಸಾಮಶ್ನುತೇ ಗತಿಮ್
॥ ೪ ॥

ಹರಿರ್ಹಿ ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ ।
ಸ ಸರ್ವದೃಗುಪದ್ರಷ್ಟಾ ತಂ ಭಜನ್ ನಿರ್ಗುಣೋ ಭವೇತ್
॥ ೫ ॥

ನಿವೃತ್ತೇಷ್ವಶ್ವಮೇಧೇಷು ರಾಜಾ ಯುಷ್ಮತ್ಪಿತಾಮಹಃ ।
ಶೃಣ್ವನ್ಭಗವತೋ ಧರ್ಮಾನಪೃಚ್ಛದಿದಮಚ್ಯುತಮ್
॥ ೬ ॥

ಸ ಆಹ ಭಗವಾನ್ಸ್ತಸ್ಮೈ ಪ್ರೀತಃ ಶುಶ್ರೂಷವೇ ಪ್ರಭುಃ ।
ನೃಣಾಂ ನಿಃಶ್ರೇಯಸಾರ್ಥಾಯ ಯೋಽವತೀರ್ಣೋ ಯದೋಃ ಕುಲೇ
॥ ೭ ॥

ಶ್ರೀಭಗವಾನುವಾಚ

ಯಸ್ಯಾಹಮನುಗೃಹ್ಣಾಮಿ ಹರಿಷ್ಯೇ ತದ್ಧನಂ ಶನೈಃ ।
ತತೋಽಧನಂ ತ್ಯಜಂತ್ಯಸ್ಯ ಸ್ವಜನಾ ದುಃಖದುಃಖಿತಮ್
॥ ೮ ॥

ಸ ಯದಾ ವಿತಥೋದ್ಯೋಗೋ ನಿರ್ವಿಣ್ಣಃ ಸ್ಯಾದ್ಧನೇಹಯಾ ।
ಮತ್ಪರೈಃ ಕೃತಮೈತ್ರಸ್ಯ ಕರಿಷ್ಯೇ ಮದನುಗ್ರಹಮ್
॥ ೯ ॥

ತದ್ಬ್ರಹ್ಮ ಪರಮಂ ಸೂಕ್ಷ್ಮಂ ಚಿನ್ಮಾತ್ರಂ ಸದನಂತಕಮ್ ।
ಅತೋ ಮಾಂ ಸುದುರಾರಾಧ್ಯಂ ಹಿತ್ವಾನ್ಯಾನ್ ಭಜತೇ ಜನಃ
॥ ೧೦ ॥

ತತಸ್ತ ಆಶುತೋಷೇಭ್ಯೋ ಲಬ್ಧರಾಜ್ಯಶ್ರಿಯೋದ್ಧತಾಃ ।
ಮತ್ತಾಃ ಪ್ರಮತ್ತಾ ವರದಾನ್ ವಿಸ್ಮರಂತ್ಯವಜಾನತೇ
॥ ೧೧ ॥

ಈ ತ್ರಿವಿಧ ಅಹಂಕಾರದಿಂದ ಹತ್ತು ಇಂದ್ರಿಯಗಳು, ಐದು ಮಹಾಭೂತಗಳು, ಒಂದು ಮನಸ್ಸು - ಹೀಗೆ ಹದಿನಾರು ವಿಕಾರಗಳಾದುವು. ಆದ್ದರಿಂದ ಇವೆಲ್ಲದರ ಅಧಿಷ್ಠಾತೃ ದೇವತೆಗಳಲ್ಲಿ ಯಾರನ್ನೇ ಉಪಾಸನೆ ಮಾಡಿದರೂ ಸಮಸ್ತ ಐಶ್ವರ್ಯಗಳು ದೊರೆಯುತ್ತವೆ. ॥ ೪ ॥ ಪರೀಕ್ಷಿತನೇ! ಆದರೆ ಶ್ರೀಹರಿಯಾದರೋ ಪ್ರಕೃತಿಗಿಂತ ಆಚೆಗಿರುವ ಪುರುಷೋತ್ತಮನು. ಪ್ರಾಕೃತಗುಣರಹಿತನು. ಅವನು ಸರ್ವಜ್ಞನೂ, ಎಲ್ಲರ ಅಂತಃಕರಣಗಳ ಸಾಕ್ಷಿಯೂ ಆಗಿದ್ದಾನೆ. ಅವನನ್ನು ಭಜಿಸುವವನೂ ಗುಣಾತೀತನಾಗಿ ಹೋಗುತ್ತಾನೆ. ॥ ೫ ॥ ಪರೀಕ್ಷಿತ! ಹಿಂದೆ ನಿನ್ನ ತಾತನಾದ ಯುಧಿಷ್ಠಿರನು ಅಶ್ವಮೇಧ ಯಜ್ಞವನ್ನು ಮಾಡಿದಾಗ ಭಗವಂತನಿಂದ ಭಾಗವತಧರ್ಮದ ವರ್ಣನೆಯನ್ನು ಕೇಳುತ್ತಿದ್ದಾಗಲೂ ಅವನು ಇದೇ ಪ್ರಶ್ನೆಯನ್ನು ಕೇಳಿದ್ದನು. ॥ ೬ ॥

ಮಹಾರಾಜ! ಮನುಷ್ಯರ ಕಲ್ಯಾಣಕ್ಕಾಗಿಯೇ ಯದುವಂಶದಲ್ಲಿ ಅವತರಿಸಿದ ಭಗವಾನ್ ಶ್ರೀಕೃಷ್ಣನು ಸರ್ವಶಕ್ತನಾದ ಪರಮೇಶ್ವರನೇ ಆಗಿದ್ದಾನೆ. ಧರ್ಮರಾಯನ ಪ್ರಶ್ನೆಯನ್ನು ಆಲಿಸಿ, ಅದನ್ನು ಕೇಳಬೇಕೆಂದು ತವಕಿಸುತ್ತಿರುವ ಅವನಲ್ಲಿ ಪರಮಪ್ರೀತಿಯಿಂದ ಹೀಗೆ ಉತ್ತರಿಸತೊಡಗಿದನು. ॥ ೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಯುಧಿಷ್ಠಿರನೇ! ನಾನು ಯಾರಿಗೆ ಅನುಗ್ರಹತೋರುವೆನೋ ಅವನ ಸಂಪತ್ತೆಲ್ಲವನ್ನೂ ನಿಧಾನವಾಗಿ ಕಸಿದುಕೊಳ್ಳುವೆನು. ಅವನು ನಿರ್ಧನನಾದಾಗ ಅವನ ನೆಂಟರಿಷ್ಟರೆಲ್ಲರೂ ಆತನು ದುಃಖಿತನಾಗಿದ್ದರೂ ಎಣಿಸದೆ ಬಿಟ್ಟುಬಿಡುತ್ತಾರೆ. ॥ ೮ ॥ ಮತ್ತೆ ಅವನು ಧನಸಂಗ್ರಹಣೆಗೆ ಉದ್ಯೋಗಶೀಲನಾದಾಗ ನಾನು ಅವನ ಆ ಪ್ರಯತ್ನವನ್ನು ನಿಷ್ಫಲ ಮಾಡಿಬಿಡುತ್ತೇನೆ. ಹೀಗೆ ಪದೇ-ಪದೇ ಅಸಫಲನಾಗಿ ಅವನ ಮನಸ್ಸು ಧನವನ್ನು ಗಳಿಸುವುದರಿಂದ ವಿರಕ್ತವಾಗುತ್ತದೆ. ಧನದ ಮೇಲಿನ ಆಸೆಯು ದುಃಖಕ್ಕೆ ಕಾರಣವೆಂದರಿತು ನನ್ನ ಭಕ್ತರೊಂದಿಗೆ ಮೈತ್ರಿಯನ್ನು ಬೆಳೆಸುತ್ತಾನೆ. ಆಗ ನಾನು ಅವನ ಮೇಲೆ ಅಹೈತುಕವಾದ ಕೃಪಾವರ್ಷವನ್ನು ಗರೆಯುತ್ತೇನೆ. ॥ ೯ ॥ ನನ್ನ ಕೃಪೆಯಿಂದ ಅವನಿಗೆ ಪರಮಸೂಕ್ಷ್ಮ ಅನಂತ ಸಚ್ಚಿದಾನಂದ ಸ್ವರೂಪ ಪರಬ್ರಹ್ಮನ ಪ್ರಾಪ್ತಿಯಾಗುತ್ತದೆ. ಹೀಗೆ ನನ್ನ ಅನುಗ್ರಹವೂ, ಆರಾಧನೆಯೂ ಬಹಳ ಕಠಿಣವಾಗಿದೆ. ಅದರಿಂದ ಸಾಮಾನ್ಯ ಜನರು ನನ್ನನ್ನು ಬಿಟ್ಟು ನನ್ನದೇ ರೂಪವಾದ ಬೇರೆ-ಬೇರೆ ದೇವತೆಗಳನ್ನು ಆರಾಧಿಸುತ್ತಾರೆ. ॥ ೧೦ ॥ ಇತರ ದೇವತೆಗಳು ಬೇಗನೇ ಪ್ರಸನ್ನರಾಗುತ್ತಾರೆ. ಇಂತಹ ಆಶು-ತೋಷ ದೇವತೆಗಳ ಭಕ್ತರಿಗೆ ಸಾಮ್ರಾಜ್ಯ ಲಕ್ಷ್ಮಿಯನ್ನು ಕೊಟ್ಟುಬಿಡುತ್ತಾರೆ. ಅದನ್ನು ಪಡೆದ ಅವರು ಉಚ್ಛೃಂಖಲರೂ, ಪ್ರಮಾದಿಗಳೂ, ಮದೋನ್ಮತ್ತರೂ ಆಗಿ, ತಮ್ಮ ಆರಾಧ್ಯ ದೇವತೆಗಳನ್ನೇ ಮರೆತುಬಿಡುತ್ತಾರೆ ಹಾಗೂ ಅವರನ್ನು ತಿರಸ್ಕರಿಸುತ್ತಾರೆ. ॥ ೧೧ ॥

ಶ್ರೀಶುಕ ಉವಾಚ

ಶಾಪಪ್ರಸಾದಯೋರೀಶಾ ಬ್ರಹ್ಮವಿಷ್ಣುಶಿವಾದಯಃ ।
ಸದ್ಯಃ ಶಾಪಪ್ರಸಾದೋಽಂಗ ಶಿವೋ ಬ್ರಹ್ಮಾ ನ ಚಾಚ್ಯುತಃ ॥ ೧೨ ॥

ಅತ್ರ ಚೋದಾಹರಂತೀಮಮಿತಿಹಾಸಂ ಪುರಾತನಮ್ ।
ವೃಕಾಸುರಾಯ ಗಿರಿಶೋ ವರಂ ದತ್ತ್ವಾಽಽಪ ಸಂಕಟಮ್ ॥ ೧೩ ॥

ವೃಕೋ ನಾಮಾಸುರಃ ಪುತ್ರಃ ಶಕುನೇಃ ಪಥಿ ನಾರದಮ್ ।
ದೃಷ್ಟ್ವಾಽಽಶುತೋಷಂ ಪಪ್ರಚ್ಛ ದೇವೇಷು ತ್ರಿಷು ದುರ್ಮತಿಃ ॥ ೧೪ ॥

ಸ ಆಹ ದೇವಂ ಗಿರಿಶಮುಪಾಧಾವಾಶು ಸಿದ್ಧ್ಯಸಿ ।
ಯೋಽಲ್ಪಾಭ್ಯಾಂ ಗುಣದೋಷಾಭ್ಯಾಮಾಶು ತುಷ್ಯತಿ ಕುಪ್ಯತಿ ॥ ೧೫ ॥

ದಶಾಸ್ಯಬಾಣಯೋಸ್ತುಷ್ಟಃ ಸ್ತುವತೋರ್ವಂದಿನೋರಿವ ।
ಐಶ್ವರ್ಯಮತುಲಂ ದತ್ತ್ವಾ ತತ ಆಪ ಸುಸಂಕಟಮ್ ॥ ೧೬ ॥

ಇತ್ಯಾದಿಷ್ಟಸ್ತಮಸುರ ಉಪಾಧಾವತ್ಸ್ವಗಾತ್ರತಃ ।
ಕೇದಾರ ಆತ್ಮಕ್ರವ್ಯೇಣ ಜುಹ್ವಾನೋಽಗ್ನಿಮುಖಂ ಹರಮ್ ॥ ೧೭ ॥

ದೇವೋಪಲಬ್ಧಿಮಪ್ರಾಪ್ಯ ನಿರ್ವೇದಾತ್ಸಪ್ತಮೇಽಹನಿ ।
ಶಿರೋಽವೃಶ್ಚತ್ ಸ್ವಧಿತಿನಾ ತತ್ತೀರ್ಥಕ್ಲಿನ್ನಮೂರ್ಧಜಮ್ ॥ ೧೮ ॥

ತದಾ ಮಹಾಕಾರುಣಿಕಃ ಸ ಧೂರ್ಜಟಿ-
ರ್ಯಥಾ ವಯಂ ಚಾಗ್ನಿರಿವೋತ್ಥಿತೋಽನಲಾತ್ ।
ನಿಗೃಹ್ಯ ದೋರ್ಭ್ಯಾಂ ಭುಜಯೋರ್ನ್ಯವಾರಯತ್-
ತತ್ ಸ್ಪರ್ಶನಾದ್ಭೂಯ ಉಪಸ್ಕೃತಾಕೃತಿಃ ॥ ೧೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಬ್ರಹ್ಮಾ-ವಿಷ್ಣು-ಮಹೇಶ್ವರ ಇವರು ಮೂವರೂ ಶಾಪಾನುಗ್ರಹ ಸಾಮರ್ಥ್ಯವುಳ್ಳವರೇ. ಆದರೆ ಇವರಲ್ಲಿ ಮಹಾದೇವ ಮತ್ತು ಬ್ರಹ್ಮದೇವರು ಬೇಗನೇ ಪ್ರಸನ್ನರಾಗಿ ವರವನ್ನು ಕೊಡುತ್ತಾರೆ. ಹಾಗೆಯೇ ಬಹಳ ಬೇಗ ಕೋಪಗೊಂಡು ಶಾಪವನ್ನೂ ಕೊಟ್ಟು ಬಿಡುತ್ತಾರೆ. ಆದರೆ ಭಗವಾನ್ ವಿಷ್ಣುವು ಹಾಗಲ್ಲ. ॥ ೧೨ ॥ ಈ ವಿಷಯದಲ್ಲಿ ಮಹಾತ್ಮರು ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತಾ ಇರುತ್ತಾರೆ. ಭಗವಾನ್ ಶಂಕರನು ಒಮ್ಮೆ ವೃಕಾಸುರ ನೆಂಬುವನಿಗೆ ವರವನ್ನು ಕೊಟ್ಟು ಸಂಕಟಕ್ಕೊಳಗಾಗಿದ್ದನು. ॥ ೧೩ ॥ ಪರೀಕ್ಷಿತನೇ! ಶಕುನಿಯ ಪುತ್ರನಾದ ವೃಕಾಸುರನ ಬುದ್ಧಿಯು ಬಹಳವಾಗಿ ಕೆಟ್ಟು ಹೋಗಿತ್ತು. ಒಂದು ದಿನ ಅವನು ಎಲ್ಲೋ ಹೋಗುವಾಗ ದೇವರ್ಷಿನಾರದರನ್ನು ನೋಡಿದನು. ಅವರಿಗೆ ವಂದಿಸಿ ಸ್ವಾಮಿ! ಮೂರು ದೇವತೆಗಳಲ್ಲಿ ಶೀಘ್ರವಾಗಿ ಪ್ರಸನ್ನ ರಾಗುವವರು ಯಾರು? ಎಂದು ಕೇಳಿದನು. ॥ ೧೪ ॥

ದೇವರ್ಷಿ ನಾರದರು ಹೇಳಿದರು – ನೀನು ಭಗವಾನ್ ಶಂಕರನನ್ನು ಆರಾಧಿಸು. ಇದರಿಂದ ನಿನ್ನ ಮನೋರಥವು ಬಹುಬೇಗನೇ ಈಡೇರುವುದು. ಅವನು ಅತ್ಯಲ್ಪ ಗುಣಗಳಿಂದ (ಪ್ರಾರ್ಥನೆಯಿಂದ) ಶೀಘ್ರಾತಿಶೀಘ್ರವಾಗಿ ಪ್ರಸನ್ನನಾಗುತ್ತಾನೆ ಮತ್ತು ಸಣ್ಣ ಅಪರಾಧದಿಂದಲೂ ಕೂಡಲೇ ಕ್ರೋಧಗೊಳ್ಳು ವನು. ॥ ೧೫ ॥ ರಾವಣ ಮತ್ತು ಬಾಣಾಸುರರು ಕೇವಲ ವಂದಿ ಮಾಗಧರಂತೆ ಶಂಕರನನ್ನು ಸ್ತೋತ್ರಮಾಡಿದ್ದರು. ಇದರಿಂದಲೆ ಶಿವನು ಅವರಿಗೆ ಅತುಳವಾದ ಐಶ್ವರ್ಯವನ್ನು ಕೊಟ್ಟಿದ್ದನು. ಬಳಿಕ ರಾವಣನು ಕೈಲಾಸವನ್ನೇ ಎತ್ತಿದುದರಿಂದ ಮತ್ತು ಬಾಣಾಸುರನ ನಗರ ರಕ್ಷಣೆಯ ಹೊಣೆಯನ್ನು ಹೊತ್ತಿದ್ದರಿಂದ ಶಂಕರನು ಸಂಕಟಕ್ಕೀಡಾದನು. ॥ ೧೬ ॥

ನಾರದರಿಂದ ಉಪದೇಶವನ್ನು ಪಡೆದು ವೃಕಾಸುರನು ಕೇದಾರ ಕ್ಷೇತ್ರಕ್ಕೆ ಹೋಗಿ, ಅಗ್ನಿಯನ್ನು ಶಂಕರನ ಮುಖವೆಂದು ಭಾವಿಸಿ ತನ್ನ ಶರೀರದ ಮಾಂಸಖಂಡಗಳನ್ನೇ ಕಡಿದು ಕಡಿದು ಹೋಮ ಮಾಡುತ್ತಾ ಆರಾಧಿಸತೊಡಗಿದನು. ॥ ೧೭ ॥ ಈ ಪ್ರಕಾರ ಆರು ದಿನಗಳವರೆಗೆ ಉಪಾಸನೆ ಮಾಡಿದರೂ ಭಗವಾನ್ ಶಂಕರನು ಪ್ರಸನ್ನನಾಗದಿದ್ದಾಗ ಅವನಿಗೆ ತುಂಬಾ ದುಃಖವಾಯಿತು. ಏಳ ನೆಯ ದಿನ ಕೇದಾರತೀರ್ಥದಲ್ಲಿ ಸ್ನಾನಮಾಡಿ ಅವನು ಒದ್ದೆಯಾದ ತನ್ನ ತಲೆಯನ್ನೇ ಕತ್ತಿಯಿಂದ ಕಡಿದು ಹೋಮ ಮಾಡಲು ಬಯಸಿದನು. ॥ ೧೮ ॥ ಪರೀಕ್ಷಿತನೇ! ಜಗತ್ತಿನಲ್ಲಿ ಯಾರಾದರೂ ದುಃಖದಿಂದ ಆತ್ಮಹತ್ಯೆ ಮಾಡಿಕೊಳ್ಳಲು ತೊಡಗಿದರೆ ನಾವು ಕರುಣೆಯಿಂದ ಅವನನ್ನು ತಡೆಯುವಂತೆಯೇ ಪರಮ ದಯಾಳು ವಾದ ಭಗವಾನ್ ಶಂಕರನು ವೃಕಾಸುರನ ಆತ್ಮಘಾತದ ಮೊದಲೇ ಅಗ್ನಿಕುಂಡದಿಂದ ಯಜ್ಞೇಶ್ವರನಂತೆ ಪ್ರಕಾಶಿಸುತ್ತಾ ಪ್ರಕಟನಾಗಿ ತನ್ನೆರಡೂ ಕೈಗಳಿಂದ ಅವನ ಎರಡೂ ಕೈಗಳನ್ನು ಹಿಡಿದುಕೊಂಡು ಕತ್ತನ್ನು ತುಂಡರಿಸುವುದನ್ನು ತಡೆದನು. ಶಿವನ ಸ್ಪರ್ಶವಾಗುತ್ತಲೇ ವೃಕಾಸುರನ ಅಂಗಾಂಗಗಳು ಮೊದಲಿದ್ದಂತೆ ಹೃಷ್ಟ-ಪುಷ್ಟಗಳಾ ದವು. ॥ ೧೯ ॥ ಭಗವಾನ್ ಶಂಕರನು ಪ್ರಸನ್ನನಾಗಿ ಹೇಳಿದನು

ತಮಾಹ ಚಾಂಗಾಲಮಲಂ ವೃಣೀಷ್ವ ಮೇ
ಯಥಾಭಿಕಾಮಂ ವಿತರಾಮಿ ತೇ ವರಮ್ ।
ಪ್ರೀಯೇಯ ತೋಯೇನ ನೃಣಾಂ ಪ್ರಪದ್ಯತಾ-
ಮಹೋ ತ್ವಯಾಽಽತ್ಮಾ ಭೃಶಮರ್ದ್ಯತೇ ವೃಥಾ ॥ ೨೦ ॥

ದೇವಂ ಸ ವವ್ರೇ ಪಾಪೀಯಾನ್
ವರಂ ಭೂತಭಯಾವಹಮ್ ।
ಯಸ್ಯ ಯಸ್ಯ ಕರಂ ಶೀರ್ಷ್ಣಿ
ಧಾಸ್ಯೇ ಸ ಮ್ರಿಯತಾಮಿತಿ ॥ ೨೧ ॥

ತಚ್ಛ್ರುತ್ವಾ ಭಗವಾನ್ ರುದ್ರೋ ದುರ್ಮನಾ ಇವ ಭಾರತ ।
ಓಮಿತಿ ಪ್ರಹಸಂಸ್ತಸ್ಮೈ ದದೇಽಹೇರಮೃತಂ ಯಥಾ ॥ ೨೨ ॥

ಇತ್ಯುಕ್ತಃ ಸೋಽಸುರೋ ನೂನಂ ಗೌರೀಹರಣಲಾಲಸಃ ।
ಸ ತದ್ವರಪರೀಕ್ಷಾರ್ಥಂ ಶಂಭೋರ್ಮೂರ್ಧ್ನಿ ಕಿಲಾಸುರಃ ।
ಸ್ವಹಸ್ತಂ ಧಾತುಮಾರೇಭೇ ಸೋಽಬಿಭ್ಯತ್ ಸ್ವಕೃತಾಚ್ಛಿವಃ ॥ ೨೩ ॥

ತೇನೋಪಸೃಷ್ಟಃ ಸಂತ್ರಸ್ತಃ ಪರಾಧಾವನ್ಸವೇಪಥುಃ ।
ಯಾವದಂತಂ ದಿವೋ ಭೂಮೇಃ ಕಾಷ್ಠಾನಾಮುದಗಾದುದಕ್ ॥ ೨೪ ॥

ಅಜಾನಂತಃ ಪ್ರತಿವಿಧಿಂ ತೂಷ್ಣೀಮಾಸನ್ಸುರೇಶ್ವರಾಃ ।
ತತೋ ವೈಕುಂಠ ಮಗಮದ್ಭಾಸ್ವರಂ ತಮಸಃ ಪರಮ್ ॥ ೨೫ ॥

ಯತ್ರ ನಾರಾಯಣಃ ಸಾಕ್ಷಾನ್ನ್ಯಾಸಿನಾಂ ಪರಮಾಗತಿಃ ।
ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತತೇ ಗತಃ ॥ ೨೬ ॥

ತಂ ತಥಾವ್ಯಸನಂ ದೃಷ್ಟ್ವಾ ಭಗವಾನ್ ವೃಜಿನಾರ್ದನಃ ।
ದೂರಾತ್ ಪ್ರತ್ಯುದಿಯಾದ್ಭೂತ್ವಾವಟುಕೋ ಯೋಗಮಾಯಯಾ ॥ ೨೭ ॥

ಮೇಖಲಾಜಿನದಂಡಾಕ್ಷೈಸ್ತೇಜಸಾಗ್ನಿರಿವ ಜ್ವಲನ್ ।
ಅಭಿವಾದಯಾಮಾಸ ಚ ತಂ ಕುಶಪಾಣಿರ್ವಿನೀತವತ್ ॥ ೨೮ ॥

ವೃಕಾಸುರನೇ ! ಸಾಕುಮಾಡು ನಿಲ್ಲಿಸು ! ನಿನಗೆ ಬೇಕಾದವರನ್ನು ಕೇಳು, ನಾನು ನಿನಗೆ ಕೊಡುತ್ತೇನೆ. ನಾನಾದರೋ ಶರಣಾಗತರಾದ ಭಕ್ತರು ಮಾಡಿದ ಕೇವಲ ನೀರಿನ ಅಭಿಷೇಕದಿಂದಲೇ ಸಂತುಷ್ಟ ನಾಗುವವನು. ನೀನು ನಿನ್ನ ಶರೀರವನ್ನೇ ವಿನಾಶಗೊಳಿಸಲು ವ್ಯರ್ಥ ವಾಗಿ ಪ್ರಯತ್ನಿಸುತ್ತಿರುವೆಯಲ್ಲ ! ॥ ೨೦ ॥ ಪರೀಕ್ಷಿತನೇ ! ಅತ್ಯಂತ ಪಾಪಿಯಾದ ವೃಕಾಸುರನು ಸಮಸ್ತ ಪ್ರಾಣಿಗಳನ್ನು ಭಯಭೀತ ಗೊಳಿಸುವಂತಹ ವರವನ್ನು ಕೇಳಿದನು – ಸ್ವಾಮಿ ! ನಾನು ಯಾರ ತಲೆಯ ಮೇಲೆ ಕೈಯನ್ನಿಡುವೆನೋ ಅವನು ಮರಣಹೊಂದ ಬೇಕು. ॥ ೨೧ ॥ ರಾಜೇಂದ್ರ ! ಅವನ ಈ ಬೇಡಿಕೆಯನ್ನು ಕೇಳಿದ ಭಗವಾನ್ ರುದ್ರನು ಮನಗುಂದಿದವನಂತಾಗಿ ಕೊಡಲು ಮನಸ್ಸಿಲ್ಲದಿದ್ದರೂ ನಸುನಗುತ್ತಾ ವರವನ್ನು ಕೊಟ್ಟು ಸರ್ಪಕ್ಕೆ ಅಮೃತ ವನ್ನುಣಿಸಿದಂತೆ – 'ಸರಿ ! ಹಾಗೆಯೇ ಆಗಲಿ' ಎಂದು ಹೇಳಿದನು. ॥ ೨೨ ॥

ಭಗವಾನ್ ಶಂಕರನಿಂದ ಇಂತಹ ಸರ್ವನಾಶಕವಾದ ವರವನ್ನು ಪಡೆದ ವೃಕಾಸುರನ ಮನಸ್ಸಿನಲ್ಲಿ ಮೊದಲಿಗೆ ಪಾರ್ವತಿಯನ್ನು ಅಪಹರಿಸಬೇಕೆಂಬ ಲಾಲಸೆ ಉಂಟಾಯಿತು. ಅದಕ್ಕಾಗಿ ಆ ಅಸುರನು ಶಂಕರನ ವರವನ್ನು ಪರೀಕ್ಷಿಸಲಿಕ್ಕಾಗಿ ಅವನ ತಲೆಯ ಮೇಲೆಯೇ ಕೈಯನ್ನಿಡಲು ಹೊರಟನು. ಇದರಿಂದ ಶಿವನು ತಾನು ಕೊಟ್ಟ ವರದಿಂದಲೇ ಭಯಗೊಂಡನು. ॥ ೨೩ ॥ ದೈತ್ಯನು ಬೆನ್ನಟ್ಟಿಕೊಂಡು ಬರುವುದನ್ನು ಕಂಡು ಶಂಕರನು ಭಯದಿಂದ ನಡುಗುತ್ತ ಓಡತೊಡಗಿದನು. ಅವನು ಪೃಥಿವಿ, ಸ್ವರ್ಗ, ದಿಗಂತ ವರೆಗೂ ಓಡಿದನು. ಆದರೂ ಬೆನ್ನಬಿದ್ದ ಅಸುರನನ್ನು ನೋಡಿ ಉತ್ತರದ ಕಡೆಗೆ ಓಡಿದನು. ॥ ೨೪ ॥ ಶಿವನ ಈ ಸಂಕಟದಿಂದ ಪಾರಾಗಿಸಲು ಕೈಲಾಗದೆ ದೊಡ್ಡ-ದೊಡ್ಡ ದೇವತೆಗಳು ಸುಮ್ಮನಾದರು. ಕೊನೆಗೆ ಅವನು ಪ್ರಾಕೃತಿಕ ಅಂಧಕಾರದಿಂದ ಆಚೆಗೆ ಇರುವ ಪ್ರಕಾಶಮಯ ವೈಕುಂಠಕ್ಕೆ ಹೋದನು. ॥ ೨೫ ॥ ಸಾಕ್ಷಾತ್ ಭಗವಾನ್ ಶ್ರೀಮನ್ನಾರಾಯಣನು ಆ ವೈಕುಂಠದಲ್ಲಿ ವಾಸವಾಗಿದ್ದನು. ಸಂನ್ಯಾಸಿಗಳಿಗೆ ಏಕಮಾತ್ರ ಪರಮಗತಿಸ್ವರೂಪ ನಾದ ಅವನು ಸಮಸ್ತ ಜಗತ್ತಿಗೆ ಅಭಯವನ್ನಿತ್ತು ಶಾಂತಭಾವದಿಂದ ವಿರಾಜಿಸುತ್ತಿದ್ದನು. ವೈಕುಂಠದಲ್ಲಿ ಅವನನ್ನು ನೋಡಿದ ಬಳಿಕ ಮರ್ತ್ಯಲೋಕಕ್ಕೆ ಮರಳಬೇಕಾಗುವುದಿಲ್ಲ. ॥ ೨೬ ॥ ಶಂಕರನು ಬಹುದೊಡ್ಡ ಸಂಕಟಕ್ಕೆ ಸಿಕ್ಕಿಕೊಂಡಿದ್ದನ್ನು ಕಂಡು ಭಕ್ತಭಯಹಾರಿ ಯಾದ ಭಗವಂತನು ತನ್ನ ಯೋಗಮಾಯೆಯಿಂದ ಬ್ರಹ್ಮ ಚಾರಿಯ ರೂಪವನ್ನಾಂತು ನಿಧಾನವಾಗಿ ಬರುತ್ತಿದ್ದ ವೃಕಾಸುರನ ಕಡೆಗೆ ನಡೆಯತೊಡಗಿದನು. ॥ ೨೭ ॥ ಆಗ ಭಗವಂತನು ಮೌಂಜಿಯ ಮೇಖಲೆಯನ್ನೂ, ಕೃಷ್ಣಮೃಗ ಚರ್ಮವನ್ನೂ, ದಂಡ ವನ್ನೂ, ರುದ್ರಾಕ್ಷಮಾಲೆಯನ್ನು ಧರಿಸಿದ್ದನು. ಅವನು ಪ್ರತಿ ಯೊಂದು ಅಂಗದಿಂದಲೂ ಧಗಧಗಿಸುತ್ತಿರುವ ದಿವ್ಯಜ್ಯೋತಿ ಯಿಂದ ಪ್ರಕಾಶಿಸುತ್ತಿದ್ದನು. ಕೈಯಲ್ಲಿ ದರ್ಭೆಗಳನ್ನು ಹಿಡಿದಿದ್ದನು. ವೃಕಾಸುರನನ್ನು ನೋಡುತ್ತಲೇ ಅವನು ಬಹಳ ನಮ್ರತೆಯಿಂದ ಬಾಗಿ ವಂದಿಸಿದನು. ॥ ೨೮ ॥

*ಶ್ರೀಭಗವಾನುವಾಚ*

**ಶಾಕುನೇಯ ಭವಾನ್ ವ್ಯಕ್ತಂ ಶ್ರಾಂತಃ ಕಿಂ ದೂರಮಾಗತಃ ।**
**ಕ್ಷಣಂ ವಿಶ್ರಮ್ಯತಾಂ ಪುಂಸ ಆತ್ಮಾಯಂ ಸರ್ವಕಾಮಧುಕ್ ॥ ೨೯ ॥**

**ಯದಿ ನಃ ಶ್ರವಣಾಯಾಲಂ ಯುಷ್ಮದ್ವ್ಯವಸಿತಂ ವಿಭೋ ।**
**ಭಣ್ಯತಾಂ ಪ್ರಾಯಶಃ ಪುಂಭಿರ್ಧೃತೈಃ ಸ್ವಾರ್ಥಾನ್ಸಮೀಹತೇ ॥ ೩೦ ॥**

*ಶ್ರೀಶುಕ ಉವಾಚ*

**ಏವಂ ಭಗವತಾ ಪೃಷ್ಟೋ ವಚಸಾಮೃತವರ್ಷಿಣಾ ।**
**ಗತಕ್ಲಮೋಽಬ್ರವೀತ್ತಸ್ಮೈ ಯಥಾಪೂರ್ವಮನುಷ್ಠಿತಮ್ ॥ ೩೧ ॥**

*ಶ್ರೀಭಗವಾನುವಾಚ*

**ಏವಂ ಚೇತ್ತರ್ಹಿ ತದ್ವಾಕ್ಯಂ ನ ವಯಂ ಶ್ರದ್ದಧೀಮಹಿ ।**
**ಯೋ ದಕ್ಷಶಾಪಾತ್ ಪೈಶಾಚ್ಯಂ ಪ್ರಾಪ್ತಃ ಪ್ರೇತಪಿಶಾಚರಾಟ್ ॥ ೩೨ ॥**

**ಯದಿ ವಸ್ತತ್ರ ವಿಶ್ರಂಭೋ ದಾನವೇಂದ್ರ ಜಗದ್ಗುರೌ ।**
**ತರ್ಹ್ಯಂಗಾಶು ಸ್ವಶಿರಸಿ ಹಸ್ತಂ ನ್ಯಸ್ಯ ಪ್ರತೀಯತಾಮ್ ॥ ೩೩ ॥**

**ಯದ್ಯಸತ್ಯಂ ವಚಃ ಶಂಭೋಃ ಕಥಂಚಿದ್ದಾನವರ್ಷಭ ।**
**ತದೈನಂ ಜಹ್ಯಸದ್ವಾಚಂ ನ ಯದ್ವಕ್ತಾನೃತಂ ಪುನಃ ॥ ೩೪ ॥**

**ಇತ್ಥಂ ಭಗವತಶ್ಚಿತ್ರೈರ್ವಚೋಭಿಃ ಸ ಸುಪೇಶಲೈಃ ।**
**ಭಿನ್ನಧೀರ್ವಿಸ್ಮೃತಃ ಶೀರ್ಷ್ಣಿ ಸ್ವಹಸ್ತಂ ಕುಮತಿರ್ನ್ಯಧಾತ್ ॥ ೩೫ ॥**

**ಅಥಾಪತದ್ಭಿನ್ನಶಿರಾ ವಜ್ರಾಹತ ಇವ ಕ್ಷಣಾತ್ ।**
**ಜಯಶಬ್ದೋ ನಮಃಶಬ್ದಃ ಸಾಧುಶಬ್ದೋಽಭವದ್ದಿವಿ ॥ ೩೬ ॥**

**ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ ।**
**ದೇವರ್ಷಿಪಿತೃಗಂಧರ್ವಾ ಮೋಚಿತಃ ಸಂಕಟಾಚ್ಛಿವಃ ॥ ೩೭ ॥**

**ಬ್ರಹ್ಮಚಾರಿ ವೇಷಧಾರಿಯಾದ ಭಗವಂತನು ಹೇಳಿದನು** – ಶಕುನಿ ನಂದನ ವೃಕಾಸುರನೇ! ನೀನು ಬಹಳ ಬಳಲಿದವನಂತೆ ಕಂಡು ಬರುತ್ತೀಯೆ. ಇಂದು ನೀನು ಬಹಳ ದೂರದಿಂದ ಬಂದಿರುವೆಯೋ? ಸ್ವಲ್ಪ ವಿಶ್ರಾಂತಿಯನ್ನು ಪಡೆದುಕೊ. ನೋಡು, ಈ ಶರೀರವು ಎಲ್ಲ ಸುಖಗಳ ಮೂಲವಾಗಿದೆ. ಇದರಿಂದಲೇ ಸಮಸ್ತ ಕಾಮನೆಗಳೂ ಕೈಗೂಡುವವು. ಇದಕ್ಕೆ ಹೆಚ್ಚು ಕಷ್ಟಕೊಡಬಾರದು. ॥ ೨೯ ॥ ನೀನಾದರೋ ಸರ್ವಸಮರ್ಥನಾಗಿರುವೆ. ಈ ಸಮಯದಲ್ಲಿ ನೀನು ಏನು ಮಾಡಬೇಕೆಂದಿರುವೆ? ನಾನು ಕೇಳಲು ಯೋಗ್ಯವಾಗಿದ್ದರೆ ಹೇಳು. ಏಕೆಂದರೆ ಪ್ರಪಂಚದಲ್ಲಿ ಜನರು ಸಹಾಯಕರಿಂದ ಬಹಳಷ್ಟು ಕೆಲಸವನ್ನು ಸಾಧಿಸಿಕೊಳ್ಳುವುದನ್ನು ನೋಡುತ್ತೇವೆ. ॥ ೩೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನ ಪ್ರತಿಯೊಂದು ಶಬ್ದವು ಅಮೃತದಲ್ಲಿ ಅದ್ದಿತೆಗೆದಂತಿತ್ತು. ಅವನ್ನು ಕೇಳಿದಾಗ ಅವನು ಕೊಂಚ ಸುಧಾರಿಸಿಕೊಂಡು ಕ್ರಮವಾಗಿ ತಾನು ಮಾಡಿದ ತಪಸ್ಸು, ಪಡೆದ ವರ, ಶಂಕರನನ್ನು ಬೆನ್ನಟ್ಟಿ ಹೋದುದೆಲ್ಲವನ್ನು ಮೊದಲಿನಿಂದ ಹೇಳಿದನು. ॥ ೩೧ ॥

**ಶ್ರೀಭಗವಂತನು ಹೇಳಿದನು** – ಸರಿ, ಹೀಗೋ ಮಾತು! ಅಯ್ಯಾ! ನಾವು ಆ ಶಿವನ ಮಾತಿನಲ್ಲಿ ವಿಶ್ವಾಸವಿಡುವುದಿಲ್ಲ. ನಿನಗೆ ಇದು ಗೊತ್ತಿಲ್ಲವೇ? ಅವನಾದರೋ ದಕ್ಷಪ್ರಜಾಪತಿಯ ಶಾಪದಿಂದ ಪಿಶಾಚಭಾವವನ್ನು ತಳೆದಿರುವನು. ಇಂದು ಅವನೇ ಪ್ರೇತಗಳ, ಪಿಶಾಚಗಳ ಸಾಮ್ರಾಟನಾಗಿದ್ದಾನೆ. ॥ ೩೨ ॥ ದಾನವೇಂದ್ರಾ! ನೀನು ಇಷ್ಟು ದೊಡ್ಡವನಾದರೂ ಇಂತಹ ಸಣ್ಣ-ಪುಟ್ಟ ಮಾತುಗಳಲ್ಲಿ ವಿಶ್ವಾಸವಿಡುತ್ತೀಯಲ್ಲ? ನೀನು ಈಗಲೂ ಅವನನ್ನು ಜಗದ್ಗುರು ಎಂದು ಭಾವಿಸುವುದಾದರೆ, ಅವನ ಮಾತಿನಲ್ಲಿ ವಿಶ್ವಾಸವಿಡುವೆಯಾದರೆ ಕೂಡಲೇ ನಿನ್ನ ಕೈಯನ್ನು ನಿನ್ನ ತಲೆಯ ಮೇಲೆ ಇಟ್ಟುಕೊಂಡು ಪರೀಕ್ಷಿಸಬಾರದೇ! ॥ ೩೩ ॥ ದಾನವಶಿರೋಮಣಿ! ಯಾವುದೇ ರೀತಿಯಿಂದ ಶಂಕರನ ಮಾತು ಸುಳ್ಳಾದರೆ ಆ ಅಸತ್ಯವಾದಿಯನ್ನು ಕೊಂದುಬಿಡು. ಇದರಿಂದ ಮತ್ತೆ ಅವನು ಸುಳ್ಳುಹೇಳಲಾರನು. ॥ ೩೪ ॥ ಪರೀಕ್ಷಿತನೇ! ಭಗವಂತನು ಇಂತಹ ಮೋಹಗೊಳಿಸುವಂತಹ ಅದ್ಭುತವಾದ ಸಿಹಿಯಾದ ಮಾತುಗಳನ್ನು ಕೇಳುತ್ತಲೇ ಅವನ ಬುದ್ಧಿಯು ಮಂಕಾಯಿತು. ಆ ದುರ್ಬುದ್ಧಿಯು ವರದಾನವನ್ನು ಮರೆತು ತನ್ನ ಕೈಯನ್ನೇ ತನ್ನ ತಲೆಯ ಮೇಲಿರಿಸಿಕೊಂಡನು. ॥ ೩೫ ॥ ಸರಿ, ಆ ಕ್ಷಣವೇ ಅವನ ತಲೆ ಒಡೆದು, ಸಿಡಿಲು ಬಡಿದವನಂತೆ ನೆಲಕ್ಕುರುಳಿ ಸತ್ತು ಹೋದನು. ಆ ಸಮಯದಲ್ಲಿ ದೇವತೆಗಳು ಆಕಾಶದಲ್ಲಿ ಸಾಧು! ಸಾಧು! ಎಂದು ಹೇಳುತ್ತಾ ನಮೋ ನಮಃ ಎಂದು ವಂದಿಸುತ್ತಾ ಜಯ-ಜಯಕಾರ ಮಾಡಿದರು. ॥ ೩೬ ॥ ಪಾಪಿಯಾದ ವೃಕಾಸುರನ ಮೃತ್ಯುವಿನಿಂದ ದೇವತೆಗಳು, ಪಿತೃಗಳು, ಗಂಧರ್ವರು ಅತ್ಯಂತ ಸಂತೋಷಗೊಂಡು ಪುಷ್ಪವೃಷ್ಟಿಗರೆದರು. ಭಗವಾನ್ ಶಂಕರನು ಅಂತಹ ವಿಕಟ ಸಂಕಟದಿಂದ ಮುಕ್ತನಾದನು. ॥ ೩೭ ॥

ಮುಕ್ತಂ ಗಿರಿಶಮಭ್ಯಾಹ ಭಗವಾನ್ ಪುರುಷೋತ್ತಮಃ ।
ಅಹೋ ದೇವ ಮಹಾದೇವ ಪಾಪೋಽಯಂ ಸ್ವೇನ ಪಾಪ್ಮನಾ ॥ ೩೮ ॥

ಹತಃ ಕೋ ನು ಮಹತ್ಸ್ವೀಶ ಜಂತುರ್ವೈ ಕೃತಕಿಲ್ಬಿಷಃ ।
ಕ್ಷೇಮೀ ಸ್ಯಾತ್ ಕಿಮು ವಿಶ್ವೇಶೇ ಕೃತಾಗಸ್ಕೋ ಜಗದ್ಗುರೌ ॥ ೩೯ ॥

ಯ ಏವಮವ್ಯಾಕೃತಶಕ್ತ್ಯುದನ್ವತಃ
ಪರಸ್ಯ ಸಾಕ್ಷಾತ್ ಪರಮಾತ್ಮನೋ ಹರೇಃ ।
ಗಿರಿತ್ರಮೋಕ್ಷಂ ಕಥಯೇಚ್ಛೃಣೋತಿ ವಾ
ವಿಮುಚ್ಯತೇ ಸಂಸೃತಿಭಿಸ್ತಥಾರಿಭಿಃ ॥ ೪೦ ॥

ಆಗ ಭಯ ಗೊಂಡಿರುವ ಶಂಕರನ ಬಳಿ ಭಗವಾನ್ ಪುರುಷೋತ್ತಮನು ಹೇಳಿದನು - ದೇವಾಧಿದೇವಾ ! ಈ ದುಷ್ಟನನ್ನು ಅವನ ಪಾಪಗಳೇ ಕೊಂದು ಹಾಕಿದುದು ಸಂತೋಷದ ಮಾತೇ ಸರಿ. ಪರಮೇಶ್ವರನೇ ! ಮಹಾಪುರುಷರಿಗೆ ಅಪರಾಧವನ್ನು ಮಾಡಿದವರು ಯಾರು ತಾನೇ ಕ್ಷೇಮದಿಂದ ಇರಬಲ್ಲನು ? ಮತ್ತೆ ಸಾಕ್ಷಾತ್ ಜಗದ್ಗುರು ವಿಶ್ವೇಶ್ವರನಾದ ನಿನಗೆ ಅಪರಾಧವನ್ನು ಮಾಡಿದ ಯಾರಾದರೂ ಕುಶಲಿಯಾಗಿ ಹೇಗೆ ಇರಬಲ್ಲರು ? ॥ ೩೮-೩೯ ॥

ಅನಂತಶಕ್ತಿಗಳ ಸಮುದ್ರನಾದ ಭಗವಂತನ ಒಂದೊಂದು ಶಕ್ತಿಯೂ ಮಾತು-ಮನಸ್ಸಿನ ಸೀಮೆಯಿಂದ ಅತೀತವಾದುದು. ಅವನು ಪ್ರಕೃತಿಗಿಂತ ಪರನಾದ ಸಾಕ್ಷಾತ್ ಪರಮಾತ್ಮನಾಗಿದ್ದಾನೆ. ಶಂಕರನನ್ನು ಈ ಸಂಕಟದಿಂದ ಬಿಡಿಸಿದ ಅವನ ಈ ಲೀಲೆಯನ್ನು ಹೇಳುವವನು, ಕೇಳುವವನು ಸಂಸಾರ ಬಂಧನದಿಂದ ಮತ್ತು ಶತ್ರುಗಳ ಭಯದಿಂದ ಮುಕ್ತನಾಗಿ ಹೋಗುತ್ತಾನೆ. ॥ ೪೦ ॥

*ಎಂಭತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೮೮ ॥*
**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಉತ್ತರಾರ್ಧೇ ರುದ್ರಮೋಕ್ಷಣಂ ನಾಮ ಅಷ್ಟಾಶೀತಿತಮೋಽಧ್ಯಾಯಃ ॥ ೮೮ ॥**

# ಎಂಭತ್ತೊಂಭತ್ತನೆಯ ಅಧ್ಯಾಯ

## ಭೃಗು ಮಹರ್ಷಿಯು ತ್ರಿಮೂರ್ತಿಗಳನ್ನು ಪರೀಕ್ಷಿಸಿದುದು - ಭಗವಂತನು ಸತ್ತು ಹೋಗಿದ್ದ ಬ್ರಾಹ್ಮಣ ಬಾಲಕರನ್ನು ಮರಳಿ ತಂದು ಕೊಟ್ಟಿದ್ದು

ಶ್ರೀಶುಕ ಉವಾಚ

ಸರಸ್ವತ್ಯಾಸ್ತಟೇ ರಾಜನ್ನೃಷಯಃ ಸತ್ರಮಾಸತ ।
ವಿತರ್ಕಃ ಸಮಭೂತ್ತೇಷಾಂ ತ್ರಿಷ್ವಧೀಶೇಷು ಕೋ ಮಹಾನ್ ॥ ೧ ॥

ತಸ್ಯ ಜಿಜ್ಞಾಸಯಾ ತೇ ವೈ ಭೃಗುಂ ಬ್ರಹ್ಮಸುತಂ ನೃಪ ।
ತಜ್ಜ್ಞಪ್ತ್ಯೈ ಪ್ರೇಷಯಾಮಾಸುಃ ಸೋಽಭ್ಯಗಾದ್ಬ್ರಹ್ಮಣಃ ಸಭಾಮ್ ॥ ೨ ॥

ನ ತಸ್ಮೈ ಪ್ರಹ್ವಣಂ ಸ್ತೋತ್ರಂ ಚಕ್ರೇ ಸತ್ತ್ವಪರೀಕ್ಷಯಾ ।
ತಸ್ಮೈ ಚುಕ್ರೋಧ ಭಗವಾನ್ ಪ್ರಜ್ವಲನ್ ಸ್ವೇನ ತೇಜಸಾ ॥ ೩ ॥

ಸ ಆತ್ಮನ್ಯುತ್ಥಿತಂ ಮನ್ಯುಮಾತ್ಮಜಾಯಾತ್ಮನಾ ಪ್ರಭುಃ ।
ಅಶೀಶಮದ್ಯಥಾ ವಹ್ನಿಂ ಸ್ವಯೋನ್ಯಾ ವಾರಿಣಾಽಽತ್ಮಭೂಃ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ ! ಒಮ್ಮೆ ಪವಿತ್ರವಾದ ಸರಸ್ವತೀ ನದಿಯ ತೀರದಲ್ಲಿ ಮಹಾಯಜ್ಞವನ್ನು ಪ್ರಾರಂಭಿಸುವ ಸಲುವಾಗಿ ಮಹಾ-ಮಹಾ ಋಷಿಮುನಿಗಳು ಸೇರಿದರು. ಅವರಲ್ಲಿ ಬ್ರಹ್ಮ-ವಿಷ್ಣು-ಶಿವರಲ್ಲಿ ಎಲ್ಲಕ್ಕಿಂತ ದೊಡ್ಡವರು ಯಾರು ? ಎಂಬ ವಿಷಯದಲ್ಲಿ ವಿವಾದ ನಡೆಯುತ್ತಿತ್ತು. ॥ ೧ ॥ ಪರೀಕ್ಷಿತನೇ ! ಅವರೆಲ್ಲರೂ ಈ ವಿಷಯವನ್ನು ತಿಳಿಯಲಿಕ್ಕಾಗಿ ಹಾಗೂ ಬ್ರಹ್ಮ ವಿಷ್ಣು ಮಹೇಶ್ವರರನ್ನು ಪರೀಕ್ಷಿಸುವ ಉದ್ದೇಶದಿಂದ ಬ್ರಹ್ಮಮಾನಸ ಪುತ್ರರಾದ ಭೃಗುಮಹರ್ಷಿಗಳನ್ನು ಅವರ ಬಳಿಗೆ ಕಳಿಸಿದರು. ಭೃಗುಮಹರ್ಷಿಗಳು ಮೊಟ್ಟ ಮೊದಲಿಗೆ ಬ್ರಹ್ಮದೇವರ ಸಭೆಗೆ ಹೋದರು. ॥ ೨ ॥ ಅವರು ಬ್ರಹ್ಮನ ಸತ್ತ್ವವನ್ನು ಪರೀಕ್ಷಿಸುವುದಕ್ಕಾಗಿ ಅವನನ್ನು ಸ್ತುತಿಸಲೂ ಇಲ್ಲ, ನಮಸ್ಕರಿಸಲೂ ಇಲ್ಲ. ಇದರಿಂದ ಬ್ರಹ್ಮನು ತನ್ನ ತೇಜದಿಂದ ಉರಿಯುತ್ತಿದ್ದನು. ಅವನು ಕ್ರೋಧಗೊಂಡಿರುವನೆಂದು ತಿಳಿಯಿತು.॥೩॥ ಆದರೆ ಸಮರ್ಥನಾದ ಬ್ರಹ್ಮದೇವರು ಇವನಾದರೋ ನನ್ನ ಪುತ್ರನಾಗಿದ್ದಾನೆಂದು ನೋಡಿದಾಗ ತನ್ನ ಮನಸ್ಸಿನಲ್ಲಿ ಎದ್ದ ಕ್ರೋಧಾಗ್ನಿಯನ್ನು ಅರಣಿಮಂಥನದಿಂದ ಉತ್ಪನ್ನವಾದ ಅಗ್ನಿಯನ್ನು ನೀರನ್ನು ಹಾಕಿ ನಂದಿಸುವಂತೆ ವಿವೇಕ ಬುದ್ಧಿಯ ಮೂಲಕ ಮನಸ್ಸಿನಲ್ಲೇ ಅಡಗಿಸಿಕೊಂಡನು. ॥ ೪ ॥

ತತಃ ಕೈಲಾಸಮಗಮತ್ ಸ ತಂ ದೇವೋ ಮಹೇಶ್ವರಃ ।
ಪರಿರಬ್ಧುಂ ಸಮಾರೇಭೇ ಉತ್ಥಾಯ ಭ್ರಾತರಂ ಮುದಾ
॥ ೫ ॥

ನೈಚ್ಛತ್ತ್ವಮಸ್ಯುತ್ಪಥಗ ಇತಿ ದೇವಶ್ಚುಕೋಪ ಹ ।
ಶೂಲಮುದ್ಯಮ್ಯ ತಂ ಹಂತುಮಾರೇಭೇ ತಿಗ್ಮಲೋಚನಃ
॥ ೬ ॥

ಪತಿತ್ವಾ ಪಾದಯೋರ್ದೇವೀ ಸಾಂತ್ವಯಾಮಾಸ ತಂ ಗಿರಾ ।
ಅಥೋ ಜಗಾಮ ವೈಕುಂಠಂ ಯತ್ರ ದೇವೋ ಜನಾರ್ದನಃ
॥ ೭ ॥

ಶಯಾನಂ ಶ್ರಿಯ ಉತ್ಸಂಗೇ ಪದಾ ವಕ್ಷಸ್ಯತಾಡಯತ್ ।
ತತ ಉತ್ಥಾಯ ಭಗವಾನ್ ಸಹ ಲಕ್ಷ್ಮ್ಯಾ ಸತಾಂ ಗತಿಃ
॥ ೮ ॥

ಸ್ವತಲ್ಪಾದವರುಹ್ಯಾಥ ನನಾಮ ಶಿರಸಾ ಮುನಿಮ್ ।
ಆಹ ತೇ ಸ್ವಾಗತಂ ಬ್ರಹ್ಮನ್ ನಿಷೀದಾತ್ರಾಸನೇ ಕ್ಷಣಮ್ ।
ಅಜಾನತಾಮಾಗತಾನ್ವಃ ಕ್ಷಂತುಮರ್ಹಥ ನಃ ಪ್ರಭೋ
॥ ೯ ॥

ಅತೀವ ಕೋಮಲೌ ತಾತ ಚರಣೌ ತೇ ಮಹಾಮುನೇ ।
ಇತ್ಯುಕ್ತ್ವಾ ವಿಪ್ರಚರಣೌ ಮರ್ದಯನ್ಸ್ವೇನ ಪಾಣಿನಾ
॥ ೧೦ ॥

ಪುನೀಹಿ ಸಹಲೋಕಂ ಮಾಂ ಲೋಕಪಾಲಾಂಶ್ಚ ಮದ್ಗತಾನ್ ।
ಪಾದೋದಕೇನ ಭವತಸ್ತೀರ್ಥಾನಾಂ ತೀರ್ಥಕಾರಿಣಾ
॥ ೧೧ ॥

ಅದ್ಯಾಹಂ ಭಗವನ್ ಲಕ್ಷ್ಮ್ಯಾ ಆಸಮೇಕಾಂತಭಾಜನಮ್ ।
ವತ್ಸ್ಯತ್ಯುರಸಿ ಮೇ ಭೂತಿರ್ಭವತ್ಪಾದಹತಾಂಹಸಃ
॥ ೧೨ ॥

ಶ್ರೀಶುಕ ಉವಾಚ

ಏವಂ ಬ್ರುವಾಣೇ ವೈಕುಂಠೇ ಭೃಗುಸ್ತನ್ಮಂದ್ರಯಾ ಗಿರಾ ।
ನಿರ್ವೃತಸ್ತರ್ಪಿತಸ್ತೂಷ್ಣೀಂ ಭಕ್ತ್ಯುತ್ಕಂಠೋಽಶ್ರುಲೋಚನಃ
॥ ೧೩ ॥

ಪುನಶ್ಚ ಸತ್ರಮಾವ್ರಜ್ಯ ಮುನೀನಾಂ ಬ್ರಹ್ಮವಾದಿನಾಮ್ ।
ಸ್ವಾನುಭೂತಮಶೇಷೇಣ ರಾಜನ್ ಭೃಗುರವರ್ಣಯತ್
॥ ೧೪ ॥

ಅಲ್ಲಿಂದ ಭೃಗುಗಳು ಕೈಲಾಸಕ್ಕೆ ಹೋದರು. ದೇವಾಧಿದೇವನಾದ ಭಗವಾನ್ ಶಂಕರನು ತನ್ನ ತಮ್ಮನಾದ ಭೃಗುವು ಬಂದಿರುವನೆಂದು ನೋಡಿದಾಗ ಆನಂದದಿಂದ ಎದ್ದುನಿಂತು ಆಲಿಂಗಿಸಿಕೊಳ್ಳಲು ಬಾಹುಗಳನ್ನು ಚಾಚಿದನು. ॥ ೫ ॥ ಆದರೆ ಭೃಗು ಮಹರ್ಷಿಗಳು ಅವನ ಆಲಿಂಗನವನ್ನು ತಿರಸ್ಕರಿಸುತ್ತಾ ಹೇಳುತ್ತಾರೆ 'ನೀನು ಲೋಕ ಮತ್ತು ವೇದದ ಮರ್ಯಾದೆಯನ್ನು ಉಲ್ಲಂಘಿಸಿರುವೆ. ಇದರಿಂದ ನಾನು ನಿನ್ನನ್ನು ಆಲಿಂಗಿಸಿಕೊಳ್ಳುವುದಿಲ್ಲ.' ಭೃಗುಗಳ ಮಾತನ್ನು ಕೇಳಿದ ಭಗವಾನ್ ಶಂಕರನು ಕ್ರೋಧದಿಂದ ಉರಿದೆದ್ದು, ಹುಬ್ಬನ್ನು ಮೇಲೇರಿಸಿಕೊಂಡು ತ್ರಿಶೂಲವನ್ನೆತ್ತಿಕೊಂಡು ಭೃಗುವನ್ನು ಕೊಲ್ಲಲು ಬಯಸಿದನು. ॥ ೬ ॥ ಆದರೆ ಅದೇ ಸಮಯದಲ್ಲಿ ಸತೀದೇವಿಯು ಅವನ ಚರಣಗಳನ್ನು ಹಿಡಿದುಕೊಂಡು ಬಹಳ ಅನುನಯಗಳಿಂದ ಅವನ ಕ್ರೋಧವನ್ನು ಶಾಂತಗೊಳಿಸಿದಳು. ಮತ್ತೆ ಭೃಗುಮಹರ್ಷಿಗಳು ಭಗವಾನ್ ವಿಷ್ಣುವಿನ ನಿವಾಸಸ್ಥಾನವಾದ ವೈಕುಂಠಕ್ಕೆ ಹೋದರು. ॥ ೭ ॥ ಆ ಸಮಯದಲ್ಲಿ ಭಗವಾನ್ ವಿಷ್ಣುವು ಲಕ್ಷ್ಮೀದೇವಿಯ ತೊಡೆಯ ಮೇಲೆ ತಲೆಯನ್ನಿಟ್ಟು ಒರಗಿದ್ದನು. ಭೃಗುಗಳು ಹೋಗಿ ಅವನ ವಕ್ಷಃಸ್ಥಳಕ್ಕೆ, ಕಾಲಿನಿಂದ ಒದ್ದು ಬಿಟ್ಟನು. ಭಕ್ತವತ್ಸಲನಾದ ಭಗವಾನ್ ಮಹಾವಿಷ್ಣುವು ಲಕ್ಷ್ಮೀದೇವಿಯೊಂದಿಗೆ ಎದ್ದು ಲಗುಬಗೆಯಿಂದ ಹಾಸಿಗೆಯಿಂದ ಕೆಳಗಿಳಿದು ಮುನಿಗಳಿಗೆ ತಲೆಬಾಗಿ ವಂದಿಸಿದನು. ಭಗವಂತನೆಂದನು – ಬ್ರಾಹ್ಮಣಶ್ರೇಷ್ಠರೇ! ತಾವು ಬಂದುದು ಬಹಳ ಚೆನ್ನಾಯ್ತು, ತಮಗೆ ಸ್ವಾಗತ ಕೋರುತ್ತೇವೆ. ಈ ಸುಖಾಸನದಲ್ಲಿ ಕುಳಿತು ವಿಶ್ರಮಿಸಿಕೊಳ್ಳಿ. ಸ್ವಾಮಿ! ತಮ್ಮ ಶುಭಾಗಮನದ ವಿಚಾರತಿಳಿದಿರಲಿಲ್ಲ, ಇಲ್ಲದಿದ್ದರೆ ನಿಮ್ಮನ್ನು ಸ್ವಾಗತಿಸಲು ನಾನೇ ಮುಂದೆ ಬರುತ್ತಿದ್ದೆ ನನ್ನ ಅಪರಾಧವನ್ನು ಕ್ಷಮಿಸಿಬಿಡಿ. ॥ ೮-೯ ॥ ಮಹಾಮುನಿಗಳೇ! ತಮ್ಮ ಚರಣಗಳು ಅತ್ಯಂತ ಕೋಮಲವಾಗಿದೆ ಎಂದು ಹೇಳಿ ಭೃಗುಗಳ ಚರಣಗಳನ್ನು ಭಗವಂತನು ತನ್ನ ಕೈಗಳಿಂದ ಒತ್ತತೊಡಗಿದನು. ॥ ೧೦ ॥ ಮಹರ್ಷಿಯೇ! ತಮ್ಮ ಚರಣಗಳ ಜಲವು ತೀರ್ಥಗಳನ್ನು ತೀರ್ಥವಾಗಿಸುವಂತಹುದು. ನೀವು ಅದರಿಂದ ಈ ವೈಕುಂಠಲೋಕವನ್ನು, ನನ್ನನ್ನು ಮತ್ತು ಲೋಕಪಾಲಕರನ್ನು ಪವಿತ್ರಗೊಳಿಸಿದಿರಿ. ॥ ೧೧ ॥ ಪೂಜ್ಯರೇ! ತಮ್ಮ ಚರಣಕಮಲಗಳ ಸ್ಪರ್ಶದಿಂದ ನನ್ನ ಎಲ್ಲ ಪಾಪಗಳು ತೊಳೆದುಹೋದುವು. ಇಂದು ನಾನು ಲಕ್ಷ್ಮೀದೇವಿಯ ಏಕಮಾತ್ರ ಆಶ್ರಯನಾದೆ. ಈಗ ನಿಮ್ಮ ಚರಣಗಳಿಂದ ಅಂಕಿತಗೊಂಡ ನನ್ನ ವಕ್ಷಸ್ಥಳದಲ್ಲಿ ಲಕ್ಷ್ಮಿಯು ಸದಾ-ಸರ್ವದಾ ನಿವಾಸ ಮಾಡುವಳು. ॥ ೧೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಭಗವಂತನು ಅತ್ಯಂತ ಗಂಭೀರ ವಾಣಿಯಿಂದ ಹೀಗೆ ಹೇಳಿದಾಗ ಭೃಗುಮುನಿ ಪರಮಸುಖಿಗಳೂ, ತೃಪ್ತರೂ ಆದರು. ಭಕ್ತಿಯ ಉದ್ರೇಕದಿಂದ ಅವರ ಕಂಠವು ಬಿಗಿದುಕೊಂಡಿತು. ಕಣ್ಣುಗಳಲ್ಲಿ ನೀರು ತುಂಬಿಬಂದು, ಮೌನವಾಗಿಬಿಟ್ಟರು. ॥ ೧೩ ॥ ಪರೀಕ್ಷಿತನೇ! ಭೃಗಮುನಿಗಳು ಅಲ್ಲಿಂದ ಮರಳಿ ಯಜ್ಞಕಾರ್ಯ ನಡೆವಲ್ಲಿ ಬ್ರಹ್ಮವಾದಿಗಳಾದ ಮುನಿಗಳ ಸತ್ಸಂಗದಲ್ಲಿ ಬಂದು ಸೇರಿ ಬ್ರಹ್ಮಾ ಶಿವ ಮತ್ತು ವಿಷ್ಣು ಭಗವಂತರಲ್ಲಿ ನಡೆದುದೆಲ್ಲವನ್ನು ಹೇಳಿದರು. ॥ ೧೪ ॥

ತನ್ನಿಶಮ್ಯಾಥ ಮುನಯೋ ವಿಸ್ಮಿತಾ ಮುಕ್ತಸಂಶಯಾಃ ।
ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್
॥ ೧೫ ॥

ಧರ್ಮಃ ಸಾಕ್ಷಾದ್ಯತೋ ಜ್ಞಾನಂ ವೈರಾಗ್ಯಂ ಚ ತದನ್ವಿತಮ್ ।
ಐಶ್ವರ್ಯಂ ಚಾಷ್ಟಧಾ ಯಸ್ಮಾದ್ಯಶಶ್ಚಾತ್ಮಮಲಾಪಹಮ್
॥ ೧೬ ॥

ಮುನೀನಾಂ ನ್ಯಸ್ತದಂಡಾನಾಂ ಶಾಂತಾನಾಂ ಸಮಚೇತಸಾಮ್ ।
ಅಕಿಂಚನಾನಾಂ ಸಾಧೂನಾಂ ಯಮಾಹುಃ ಪರಮಾಂ ಗತಿಮ್
॥ ೧೭ ॥

ಸತ್ತ್ವಂ ಯಸ್ಯ ಪ್ರಿಯಾ ಮೂರ್ತಿರ್ಬ್ರಾಹ್ಮಣಾಸ್ತ್ವಿಷ್ಟದೇವತಾಃ ।
ಭಜಂತ್ಯನಾಶಿಷಃ ಶಾಂತಾ ಯಂ ವಾ ನಿಪುಣಬುದ್ಧಯಃ
॥ ೧೮ ॥

ತ್ರಿವಿಧಾಕೃತಯಸ್ತಸ್ಯ ರಾಕ್ಷಸಾ ಅಸುರಾಃ ಸುರಾಃ ।
ಗುಣಿನ್ಯಾ ಮಾಯಯಾ ಸೃಷ್ಟಾಃ ಸತ್ತ್ವಂ ತತ್ತೀರ್ಥಸಾಧನಮ್
॥ ೧೯ ॥

*ಶ್ರೀಶುಕ ಉವಾಚ*

ಏವಂ ಸಾರಸ್ವತಾ ವಿಪ್ರಾ ನೃಣಾಂ ಸಂಶಯನುತ್ತಯೇ ।
ಪುರುಷಸ್ಯ ಪದಾಂಭೋಜಸೇವಯಾ ತದ್ಗತಿಂ ಗತಾಃ
॥ ೨೦ ॥

*ಸೂತ ಉವಾಚ*

ಇತ್ಯೇತನ್ಮುನಿತನಯಾಸ್ಯಪದ್ಮಗಂಧ-
ಪೀಯೂಷಂ ಭವಭಯಭಿತ್ಪರಸ್ಯ ಪುಂಸಃ ।
ಸುಶ್ಲೋಕಂ ಶ್ರವಣಪುಟೈಃ ಪಿಬತ್ಯಭೀಕ್ಷ್ಣಂ
ಪಾಂಥೋಽಧ್ವಭ್ರಮಣಪರಿಶ್ರಮಂ ಜಹಾತಿ ॥ ೨೧ ॥

*ಶ್ರೀಶುಕ ಉವಾಚ*

ಏಕದಾ ದ್ವಾರವತ್ಯಾಂ ತು ವಿಪ್ರಪತ್ನ್ಯಾಃ ಕುಮಾರಕಃ ।
ಜಾತಮಾತ್ರೋ ಭುವಂ ಸ್ಪೃಷ್ಟ್ವಾ ಮಮಾರ ಕಿಲ ಭಾರತ
॥ ೨೨ ॥

ವಿಪ್ರೋ ಗೃಹೀತ್ವಾ ಮೃತಕಂ ರಾಜದ್ವಾರ್ಯುಪಧಾಯ ಸಃ ।
ಇದಂ ಪ್ರೋವಾಚ ವಿಲಪನ್ನಾತುರೋ ದೀನಮಾನಸಃ
॥ ೨೩ ॥

ಬ್ರಹ್ಮದ್ವಿಷಃ ಶಠಧಿಯೋ ಲುಬ್ಧಸ್ಯ ವಿಷಯಾತ್ಮನಃ ।
ಕ್ಷತ್ರಬಂಧೋಃ ಕರ್ಮದೋಷಾತ್ಪಂಚತ್ವಂ ಮೇ ಗತೋಽರ್ಭಕಃ
॥ ೨೪ ॥

ಭೃಗುಮುನಿಗಳ ಅನುಭವವನ್ನು ಕೇಳಿದ ಎಲ್ಲ ಋಷಿ-ಮುನಿಗಳಿಗೆ ಅತ್ಯಂತ ವಿಸ್ಮಯವಾಯಿತು. ಅವರಲ್ಲಿದ್ದ ಸಂದೇಹ ದೂರ ವಾಯಿತು. ಅಂದಿನಿಂದ ಅವರು ಶಾಂತಿ ಮತ್ತು ಅನುಭವಗಳ ಉದ್ಗಮಸ್ಥಾನವಾದ ಭಗವಾನ್ ವಿಷ್ಣುವನ್ನೇ ಸರ್ವೋತ್ತಮನೆಂದು ಭಾವಿಸತೊಡಗಿದರು. ॥ ೧೫ ॥ ಭಗವಾನ್ ವಿಷ್ಣುವಿನಿಂದಲೇ ಸಾಕ್ಷಾತ್ ಧರ್ಮ, ಜ್ಞಾನ, ವೈರಾಗ್ಯ, ಎಂಟು ಬಗೆಯ ಐಶ್ವರ್ಯ ಮತ್ತು ಚಿತ್ತವನ್ನು ಶುದ್ಧಗೊಳಿಸುವ ಯಶಸ್ಸು ಪ್ರಾಪ್ತವಾಗುತ್ತದೆ. ॥ ೧೬ ॥ ಶಾಂತರೂ, ಸಮಚಿತ್ತರೂ, ಅಕಿಂಚನರೂ, ಎಲ್ಲರಿಗೆ ಅಭಯವನ್ನು ಕೊಡುವವರೂ ಆದ ಸಾಧು-ಸಂತರಿಗೆ ಅವನೇ ಏಕಮಾತ್ರ ಪರಮಗತಿಯಾಗಿದ್ದಾನೆ ಎಂದು ಸಮಸ್ತ ಶಾಸ್ತ್ರಗಳು ಹೇಳುತ್ತವೆ. ॥ ೧೭ ॥ ಶುದ್ಧಸತ್ತ್ವವೇ ಅವನಿಗೆ ಪ್ರಿಯವಾದ ಶರೀರ. ಬ್ರಾಹ್ಮಣರೇ ಅವನ ಇಷ್ಟದೇವರು. ನಿಷ್ಕಾಮರೂ, ಶಾಂತಸ್ವಭಾವದವರೂ, ವಿವೇಕ ಸಂಪನ್ನರೂ ಅಂತಹ ಶ್ರೀಹರಿಯನ್ನೇ ಭಜಿಸುತ್ತಾರೆ. ॥ ೧೮ ॥ ಭಗವಂತನ ಗುಣಮಯಿಮಾಯೆಯು ರಾಕ್ಷಸ ಅಸುರ-ದೇವತೆಗಳೆಂಬ ಮೂರು ರೂಪಗಳನ್ನು ಅವನಲ್ಲಿ ಕಲ್ಪಿಸಿದೆ. ಇವುಗಳಲ್ಲಿ ಸತ್ವಗುಣವೇ ಅವನ ಪ್ರಾಪ್ತಿಯ ಸಾಧನೆಯಾಗಿದೆ. ಅವನು ಸಾಕ್ಷಾತ್ ಸಮಸ್ತ ಪುರುಷಾರ್ಥ ಸ್ವರೂಪನಾಗಿದ್ದಾನೆ. ॥ ೧೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ಸರಸ್ವತೀ ತಿರದಲ್ಲಿದ್ದ ಋಷಿಗಳು ತಮಗಾಗಿ ಅಲ್ಲ ; ಮನುಷ್ಯರ ಸಂಶಯವನ್ನು ದೂರಗೊಳಿಸಲೆಂದೇ ಈ ಯುಕ್ತಿಯನ್ನು ರಚಿಸಿದ್ದರು. ಪುರುಷೋತ್ತಮ ಭಗವಂತನ ಚರಣಕಮಲಗಳ ಸೇವೆ ಮಾಡಿ ಅವರೆಲ್ಲರೂ ಅವನ ಪರಮಪದವನ್ನು ಪಡೆದುಕೊಂಡರು. ॥ ೨೦ ॥

**ಸೂತಪುರಾಣಿಕರು ಹೇಳುತ್ತಾರೆ** - ಶೌನಕಾದಿ ಋಷಿಗಳೇ ! ಹೀಗೆ ವ್ಯಾಸಮುನಿಗಳ ಪುತ್ರರಾದ ಶ್ರೀಶುಕಮಹಾಮುನಿಗಳ ಮುಖಾರವಿಂದದಿಂದ ಹೊರಟ ಸುಗಂಧಯುಕ್ತವಾದ, ಸಂಸಾರ ಭಯವನ್ನು ಹೋಗಲಾಡಿಸುವ, ಪರಮಪುರುಷನ ಶ್ಲಾಘ್ಯವಾದ ಹರಿಕಥಾಮೃತವನ್ನು ಕಿವಿಗಳಿಂದ ಆಡಿಗಡಿಗೆ ಪಾನಮಾಡುವವರು ಸಂಸಾರದಲ್ಲಿ ಅಲೆದಾಡುವ ಆಯಾಸದಿಂದ ಮುಕ್ತರಾಗುತ್ತಾರೆ. ॥ ೨೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ಒಮ್ಮೆ ದ್ವಾರಕಾಪಟ್ಟಣದಲ್ಲಿ ಬ್ರಾಹ್ಮಣಿಯೊಬ್ಬಳ ಗರ್ಭದಿಂದ ಒಂದು ಮಗು ಹುಟ್ಟಿತು. ಆದರೆ ಅದು ಭೂಸ್ಪರ್ಶವಾಗುತ್ತಲೇ ತೀರಿಹೋಯಿತು. ॥ ೨೨ ॥ ಬ್ರಾಹ್ಮಣನು ತನ್ನ ಮೃತ ಬಾಲಕನನ್ನು ಎತ್ತಿಕೊಂಡು ದ್ವಾರಕೆಯ ಮಹಾದ್ವಾರಕ್ಕೆ ಹೋದನು, ಅಲ್ಲಿ ಅದನ್ನಿಟ್ಟು ಅತ್ಯಂತ ದೀನ ಮನಸ್ಸಿನಿಂದ ತವಕಗೊಂಡಿದ್ದ ಅವನು ಈ ರೀತಿ ಹೇಳತೊಡಗಿದನು. ॥ ೨೩ ॥ ಬ್ರಾಹ್ಮಣದ್ರೋಹಿಯಾದ, ಧೂರ್ತನಾದ, ಕೃಪಣನಾದ, ವಿಷಯಲಂಟಪನಾದ ರಾಜನ ಕರ್ಮದೋಷದಿಂದಲೇ ನನ್ನ ಮಗುವು ಸತ್ತುಹೋಯಿತು. ಇದರಲ್ಲಿ ಸಂದೇಹವೇ ಇಲ್ಲ. ॥ ೨೪ ॥ ಹಿಂಸಾಪರಾಯಣನಾದ,

ಹಿಂಸಾವಿಹಾರಂ ನೃಪತಿಂ ದುಃಶೀಲಮಜಿತೇಂದ್ರಿಯಮ್ ।
ಪ್ರಜಾ ಭಜಂತ್ಯಃ ಸೀದಂತಿ ದರಿದ್ರಾ ನಿತ್ಯದುಃಖಿತಾಃ
॥ ೨೫ ॥

ದುಃಶೀಲನಾದ, ವಿಷಯಲಂಪಟನಾದ ಮನುಷ್ಯನನ್ನು ರಾಜನೆಂದು ಭಾವಿಸಿ ಅವನ ಸೇವೆ ಮಾಡುವ ಪ್ರಜೆಗಳು ದರಿದ್ರರಾಗಿ ದುಃಖದ ಮೇಲೆ ದುಃಖವನ್ನು ಅನುಭವಿಸುತ್ತಾ ವಿನಾಶ ಹೊಂದುವರು. ॥ ೨೫ ॥

ಏವಂ ದ್ವಿತೀಯಂ ವಿಪ್ರರ್ಷಿಸ್ತೃತೀಯಂ ತ್ವೇವಮೇವ ಚ ।
ವಿಸೃಜ್ಯ ಸ ನೃಪದ್ವಾರಿ ತಾಂ ಗಾಥಾಂ ಸಮಗಾಯತ
॥ ೨೬ ॥

ಪರೀಕ್ಷಿತನೇ! ಹೀಗೆಯೇ ಎರಡನೇ ಮೂರನೇ ಮಕ್ಕಳು ಹುಟ್ಟುತ್ತಲೇ ಸತ್ತು ಹೋದಾಗ ಆ ಬ್ರಾಹ್ಮಣನು ಮಗುವಿನ ಶವವನ್ನು ಅರಮನೆಯ ಮಹಾದ್ವಾರದಲ್ಲಿಟ್ಟು ಹಿಂದಿನಂತೆಯೇ ಮಾತುಗಳನ್ನಾಡಿದನು. ॥ ೨೬ ॥

ತಾಮರ್ಜುನ ಉಪಶ್ರುತ್ಯ ಕರ್ಹಿಚಿತ್ ಕೇಶವಾಂತಿಕೇ ।
ಪರೇತೇ ನವಮೇ ಬಾಲೇ ಬ್ರಾಹ್ಮಣಂ ಸಮಭಾಷತ
॥ ೨೭ ॥

ಒಂಭತ್ತನೇ ಮಗುವೂ ಸತ್ತು ಅವನು ರಾಜದ್ವಾರಕ್ಕೆ ಬಂದಾಗ ಆ ಸಮಯದಲ್ಲಿ ಭಗವಾನ್ ಶ್ರೀಕೃಷ್ಣನ ಬಳಿಯಲ್ಲಿ ಅರ್ಜುನನೂ ಕುಳಿತಿದ್ದನು. ಅವನು ಬ್ರಾಹ್ಮಣನ ಮಾತನ್ನು ಕೇಳಿ ಅವನಲ್ಲಿ ಕೇಳಿದನು. ॥ ೨೭ ॥

ಕಿಂಸ್ವಿದ್ ಬ್ರಹ್ಮಂಸ್ತ್ವನ್ನಿವಾಸೇ ಇಹ ನಾಸ್ತಿ ಧನುರ್ಧರಃ ।
ರಾಜನ್ಯಬಂಧುರೇತೇ ವೈ ಬ್ರಾಹ್ಮಣಾಃ ಸತ್ರ ಆಸತೇ
॥ ೨೮ ॥

ಎಲೈ ಬ್ರಾಹ್ಮಣನೇ! ನೀನು ವಾಸಿಸುವ ದ್ವಾರಕೆಯಲ್ಲಿ ಯಾರೂ ಧನುರ್ಧಾರಿಯಾದ ಕ್ಷತ್ರಿಯನಿಲ್ಲವೇ ? ಈ ಯದುವಂಶೀಯರು ಬ್ರಾಹ್ಮಣರಂತೆ ಪ್ರಜಾಪಾಲನೆಯನ್ನು ಬಿಟ್ಟು ಯಾವುದೋ ಯಜ್ಞದಲ್ಲಿ ಕುಳಿತಂತಿದೆ. ॥ ೨೮ ॥

ಧನದಾರಾತ್ಮಜಾಪೃಕ್ತಾ ಯತ್ರ ಶೋಚಂತಿ ಬ್ರಾಹ್ಮಣಾಃ ।
ತೇ ವೈ ರಾಜನ್ಯವೇಷೇಣ ನಟಾ ಜೀವಂತ್ಯಸುಂಭರಾಃ
॥ ೨೯ ॥

ಯಾರ ರಾಜ್ಯದಲ್ಲಿ ಬ್ರಾಹ್ಮಣರು ಪತ್ನೀ-ಪುತ್ರರು-ಧನ ಇವುಗಳನ್ನು ಕಳೆದುಕೊಂಡು ದುಃಖಿಸುವರೋ ಅವರು ನಿಜವಾದ ಕ್ಷತ್ರಿಯರಾಗಿರದೆ ರಾಜರ ವೇಷದಲ್ಲಿರುವ ನಟರೇ ಸರಿ. ಅವರ ಜೀವನವು ವ್ಯರ್ಥವಾದುದು. ॥ ೨೯ ॥

ಅಹಂ ಪ್ರಜಾಃ ವಾಂ ಭಗವನ್ ರಕ್ಷಿಷ್ಯೇ ದೀನಯೋರಿಹ ।
ಅನಿಸ್ತೀರ್ಣಪ್ರತಿಜ್ಞೋಽಗ್ನಿಂ ಪ್ರವೇಕ್ಷ್ಯೇ ಹತಕಲ್ಮಷಃ
॥ ೩೦ ॥

ಬ್ರಾಹ್ಮಣೋತ್ತಮನೇ! ದಂಪತಿಗಳಾದ ನೀವು ಪುತ್ರರ ಮೃತ್ಯುವಿನಿಂದಾಗಿ ಅತ್ಯಂತ ದೀನರಾಗಿರುವಿರಿ ಎಂದು ನಾನು ತಿಳಿಯುತ್ತೇನೆ. ನಾನು ನಿನ್ನ ಸಂತಾನವನ್ನು ರಕ್ಷಿಸಿಕೊಡುತ್ತೇನೆ. ನಾನು ನನ್ನ ಪ್ರತಿಜ್ಞೆಯನ್ನು ಈಡೇರಿಸದಿದ್ದರೆ ಅಗ್ನಿಪ್ರವೇಶ ಮಾಡಿ ಪ್ರತಿಜ್ಞಾಭಂಗದ ಪಾಪವನ್ನು ಕಳೆದುಕೊಳ್ಳುವೆನು. ॥ ೩೦ ॥

ಬ್ರಾಹ್ಮಣ ಉವಾಚ

ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನೋ ಧನ್ವಿನಾಂ ವರಃ ।
ಅನಿರುದ್ಧೋಽಪ್ರತಿರಥೋ ನ ತ್ರಾತುಂ ಶಕ್ನುವಂತಿ ಯತ್
॥ ೩೧ ॥

ತತ್ ಕಥಂ ನು ಭವಾನ್ ಕರ್ಮ ದುಷ್ಕರಂ ಜಗದೀಶ್ವರೈಃ ।
ಚಿಕೀರ್ಷಸಿ ತ್ವಂ ಬಾಲಿಶ್ಯಾತ್ ತನ್ನ ಶ್ರದ್ದಧ್ಮಹೇ ವಯಮ್
॥ ೩೨ ॥

ಬ್ರಾಹ್ಮಣನೆಂದನು – ಅರ್ಜುನಾ! ಇಲ್ಲಿ ಬಲರಾಮ, ಭಗವಾನ್ ಶ್ರೀಕೃಷ್ಣ ಧನುಷ್ಮಂತರಲ್ಲಿ ಶ್ರೇಷ್ಠನಾದ ಪ್ರದ್ಯುಮ್ನ, ಅಪ್ರತಿರಥನಾದ ಅನಿರುದ್ಧ-ಇಂತಹ ಮಹಾ-ಮಹಾವೀರರೂ ನನ್ನ ಬಾಲಕರನ್ನು ರಕ್ಷಿಸಲು ಅಸಮರ್ಥರಾಗಿರುವಾಗ ಈ ಜಗದೀಶ್ವರರಿಗೆ ಕಠಿಣವೆನಿಸಿದ ಕಾರ್ಯವನ್ನು ಏಕಾಕಿಯಾದ ನೀನು ಹೇಗೆ ತಾನೇ ಮಾಡಬಲ್ಲೆ! ನಿಜವಾಗಿಯೂ ಇದು ನಿನ್ನ ಮೂರ್ಖತೆಯೇ ಆಗಿದೆ. ನಾನಂತೂ ನಿನ್ನ ಮಾತಿನಲ್ಲಿ ಖಂಡಿತವಾಗಿ ವಿಶ್ವಾಸವಿಡುವುದಿಲ್ಲ. ॥ ೩೧-೩೨ ॥

ಅರ್ಜುನ ಉವಾಚ

ನಾಹಂ ಸಂಕರ್ಷಣೋ ಬ್ರಹ್ಮನ್ ನ ಕೃಷ್ಣಃ ಕಾರ್ಷ್ಣಿರೇವ ಚ ।
ಅಹಂ ವಾ ಅರ್ಜುನೋ ನಾಮ ಗಾಂಡೀವಂ ಯಸ್ಯ ವೈ ಧನುಃ
॥ ೩೩ ॥

ಅರ್ಜುನನು ಹೇಳಿದನು – ಬ್ರಾಹ್ಮಣೋತ್ತಮನೇ! ನಾನು ಶ್ರೀಕೃಷ್ಣನಾಗಲೀ, ಬಲರಾಮನಾಗಲೀ, ಪ್ರದ್ಯುಮ್ನನಾಗಲೀ ಅಲ್ಲ. ನಾನು ಅರ್ಜುನನಾಗಿದ್ದೇನೆ. ನನ್ನ ಗಾಂಡೀವವೆಂಬ ಧನುಸ್ಸು ವಿಶ್ವವಿಖ್ಯಾತವಾಗಿದೆ. ॥ ೩೩ ॥

ಮಾವಮಂಸ್ಥಾ ಮಮ ಬ್ರಹ್ಮನ್-
ವೀರ್ಯಂ ತ್ರ್ಯಂಬಕತೋಷಣಮ್ ।
ಮೃತ್ಯುಂ ವಿಜಿತ್ಯ ಪ್ರಧನೇ
ಆನೇಷ್ಯೇ ತೇ ಪ್ರಜಾಂ ಪ್ರಭೋ ॥ ೩೪ ॥

ವಿಪ್ರೋತ್ತಮನೇ! ನೀನು ನನ್ನ ಬಲಪೌರುಷಗಳನ್ನು ತಿರಸ್ಕರಿಸಬೇಡ. ನಾನು ನನ್ನ ಪರಾಕ್ರಮದಿಂದ ಭಗವಾನ್ ಶಂಕರನನ್ನು ಸಂತೋಷಗೊಳಿಸಿದ್ದುದನ್ನು ನೀನು ತಿಳಿಯೆ. ಸ್ವಾಮಿ! ಹೆಚ್ಚೇನು ಹೇಳಲಿ. ನಾನು ಯುದ್ಧದಲ್ಲಿ ಸಾಕ್ಷಾತ್ ಮೃತ್ಯುವನ್ನು ಗೆದ್ದು ನಿನ್ನ ಸಂತಾನವನ್ನು ತಂದುಕೊಡುವೆ. ॥ ೩೪ ॥

ಏವಂ ವಿಶ್ರಂಭಿತೋ ವಿಪ್ರಃ ಫಾಲ್ಗುನೇನ ಪರಂತಪ।
ಜಗಾಮ ಸ್ವಗೃಹಂ ಪ್ರೀತಃ ಪಾರ್ಥವೀರ್ಯಂ ನಿಶಾಮಯನ್ ॥ ೩೫ ॥

ಪ್ರಸೂತಿಕಾಲ ಆಸನ್ನೇ ಭಾರ್ಯಾಯಾ ದ್ವಿಜಸತ್ತಮಃ।
ಪಾಹಿ ಪಾಹಿ ಪ್ರಜಾಂ ಮೃತ್ಯೋರಿತ್ಯಾಹಾರ್ಜುನಮಾತುರಃ ॥ ೩೬ ॥

ಸ ಉಪಸ್ಪೃಶ್ಯ ಶುಚ್ಯಂಭೋ ನಮಸ್ಕೃತ್ಯ ಮಹೇಶ್ವರಮ್।
ದಿವ್ಯಾನ್ಯಸ್ತ್ರಾಣಿ ಸಂಸ್ಮೃತ್ಯ ಸಜ್ಯಂ ಗಾಂಡೀವಮಾದದೇ ॥ ೩೭ ॥

ನ್ಯರುಣತ್ಸೂತಿಕಾಗಾರಂ ಶರೈರ್ನಾನಾಸ್ತ್ರ ಯೋಜಿತೈಃ।
ತಿರ್ಯಗೂರ್ಧ್ವಮಧಃ ಪಾರ್ಥಶ್ಚಕಾರ ಶರಪಂಜರಮ್ ॥ ೩೮ ॥

ತತಃ ಕುಮಾರಃ ಸಂಜಾತೋ ವಿಪ್ರಪತ್ನ್ಯಾರುದನ್ ಮುಹುಃ।
ಸದ್ಯೋಽದರ್ಶನಮಾಪೇದೇ ಸಶರೀರೋ ವಿಹಾಯಸಾ ॥ ೩೯ ॥

ತದಾಽಽಹ ವಿಪ್ರೋ ವಿಜಯಂ ವಿನಿಂದನ್ ಕೃಷ್ಣಸಂನಿಧೌ।
ಮೌಢ್ಯಂ ಪಶ್ಯತ ಮೇ ಯೋಽಹಂ ಶ್ರದ್ದಧೇ ಕ್ಲೀಬಕತ್ಥನಮ್ ॥ ೪೦ ॥

ನ ಪ್ರದ್ಯುಮ್ನೋ ನಾನಿರುದ್ಧೋ ನ ರಾಮೋ ನ ಚ ಕೇಶವಃ।
ಯಸ್ಯ ಶೇಕುಃ ಪರಿತ್ರಾತುಂ ಕೋಽನ್ಯಸ್ತದವಿತೇಶ್ವರಃ ॥ ೪೧ ॥

ಧಿಗರ್ಜುನಂ ಮೃಷಾವಾದಂ ಧಿಗಾತ್ಮಶ್ಲಾಘಿನೋ ಧನುಃ।
ದೈವೋಪಸೃಷ್ಟಂ ಯೋ ಮೌಢ್ಯಾದಾನಿನೀಷತಿ ದುರ್ಮತಿಃ ॥ ೪೨ ॥

ಏವಂ ಶಪತಿ ವಿಪ್ರರ್ಷೌ ವಿದ್ಯಾಮಾಸ್ಥಾಯ ಫಾಲ್ಗುನಃ।
ಯಯೌ ಸಂಯಮನೀಮಾಶು ಯತ್ರಾಸ್ತೇ ಭಗವಾನ್ ಯಮಃ ॥ ೪೩ ॥

ವಿಪ್ರಾಪತ್ಯಮಚಕ್ಷಾಣಸ್ತತ ಐಂದ್ರೀಮಗಾತ್ ಪುರೀಮ್।
ಆಗ್ನೇಯೀಂ ನೈರ್ಋತೀಂ ಸೌಮ್ಯಾಂ ವಾಯವ್ಯಾಂ ವಾರುಣೀಮಥ।
ರಸಾತಲಂ ನಾಕಪೃಷ್ಠಂ ಧಿಷ್ಣ್ಯಾನ್ಯನ್ಯಾನ್ಯುದಾಯುಧಃ ॥ ೪೪ ॥

ತತೋಽಲಬ್ಧದ್ವಿಜಸುತೋ ಹ್ಯನಿಸ್ತೀರ್ಣಪ್ರತಿಶ್ರುತಃ।
ಅಗ್ನಿಂ ವಿವಿಕ್ಷುಃ ಕೃಷ್ಣೇನ ಪ್ರತ್ಯುಕ್ತಃ ಪ್ರತಿಷೇಧತಾ ॥ ೪೫ ॥

ಪರೀಕ್ಷಿತನೇ! ಅರ್ಜುನನು ಬ್ರಾಹ್ಮಣನಿಗೆ ಈ ಪ್ರಕಾರವಾಗಿ ವಿಶ್ವಾಸವನ್ನುಂಟುಮಾಡಿದಾಗ ಅವನು ಅರ್ಜುನನ ಬಲ-ಪೌರುಷವನ್ನು ಜನರಲ್ಲಿ ಕೊಂಡಾಡುತ್ತಾ ಸಂತೋಷಗೊಂಡು ಮನೆಗೆ ಮರಳಿದನು. ॥ ೩೫ ॥ ಮತ್ತೊಂದು ಹೆರಿಗೆಯು ಸಮೀಪಿಸಿದಾಗ ಬ್ರಾಹ್ಮಣನು ಕಾತುರನಾಗಿ ಅರ್ಜುನನ ಬಳಿಗೆ ಬಂದು ಹೇಳಿದನು – 'ಈ ಬಾರಿಯಾದರೂ ನನ್ನ ಮಗುವನ್ನು ಮೃತ್ಯುವಿನಿಂದ ಬದುಕಿಸಿಕೊಡು.' ॥ ೩೬ ॥ ಇದನ್ನು ಕೇಳಿದ ಅರ್ಜುನನು ಶುದ್ಧ ಜಲದಿಂದ ಆಚಮನಮಾಡಿ ಮಹೇಶ್ವರನಿಗೆ ನಮಸ್ಕರಿಸಿ, ದಿವ್ಯಾಸ್ತ್ರಗಳನ್ನು ಸ್ಮರಿಸಿಕೊಂಡು ಗಾಂಡೀವ ಧನುಸ್ಸಿಗೆ ಹೆದೆಯೇರಿಸಿ ಕೈಗೆತ್ತಿಕೊಂಡನು. ॥ ೩೭ ॥ ಅರ್ಜುನನು ಬಾಣಗಳನ್ನು ಅನೇಕ-ವಿಧದಿಂದ ಅಸ್ತ್ರ-ಮಂತ್ರಗಳಿಂದ ಅಭಿಮಂತ್ರಿಸಿ ಪ್ರಸವಗೃಹಕ್ಕೆ ಸುತ್ತಲೂ ಬಾಣಗಳ ಪಂಜರವನ್ನೇ ನಿರ್ಮಿಸಿದನು. ॥ ೩೮ ॥ ಬಳಿಕ ಬ್ರಾಹ್ಮಣಿಯ ಗರ್ಭದಿಂದ ಒಂದು ಮಗು ಹುಟ್ಟಿತು. ಅದು ಪದೇ-ಪದೇ ಜೋರಾಗಿ ಅಳುತ್ತಿತ್ತು. ಆದರೆ ನೋಡು ನೋಡುತ್ತಾ ಅದು ಸಶರೀರವಾಗಿ ಆಕಾಶದಲ್ಲಿ ಅಂತರ್ಧಾನವಾಯಿತು. ॥ ೩೯ ॥ ಬ್ರಾಹ್ಮಣನು ಶ್ರೀಕೃಷ್ಣನ ಮುಂದೆಯೇ ಅರ್ಜುನನನ್ನು ನಿಂದಿಸತೊಡಗಿದನು. ಅವನೆಂದ – ಅಯ್ಯೋ! ನನ್ನ ಮೂರ್ಖತೆಯನ್ನು ನೋಡಿರಿ. ನಾನು ಈ ನಪುಂಸಕನ ಜಂಬದ ಮಾತುಗಳನ್ನು ನಂಬಿದೆನಲ್ಲ! ॥ ೪೦ ॥

ಪ್ರದ್ಯುಮ್ನ, ಅನಿರುದ್ಧ, ಬಲರಾಮ, ಶ್ರೀಕೃಷ್ಣನಿಂದಲೂ ರಕ್ಷಿಸಲೂ ಸಾಧ್ಯವಾಗದಿದ್ದಾಗ ಯಾರು ತಾನೇ ಸಮರ್ಥನಾಗುವನು? ॥ ೪೧ ॥ ಮಿಥ್ಯಾವಾದಿಯಾದ ಅರ್ಜುನನಿಗೆ ಧಿಕ್ಕಾರವಿರಲಿ! ಗಾಂಡೀವ ಧನುಸ್ಸು ತನ್ನಲ್ಲಿದೆ ಎಂದು ಜಂಬಕೊಚ್ಚಿಕೊಳ್ಳುವ ಆತನಿಗೂ, ಆತನ ಧನುಸ್ಸಿಗೂ ಧಿಕ್ಕಾರವಿರಲಿ! ಇವನ ದುರ್ಬುದ್ಧಿಯನ್ನಾದರೂ ನೋಡಿರಲ್ಲ, ಈ ದುರ್ಮತಿಯಾದವನು ಪ್ರಾರಬ್ಧವಶದಿಂದ ನಮ್ಮಿಂದ ಅಗಲಿ ಹೋದ ಆ ಬಾಲಕನನ್ನು ಮರಳಿ ತರಲು ಬಯಸುತ್ತಾನೆ. ॥ ೪೨ ॥

ಆ ಬ್ರಾಹ್ಮಣನು ಹೀಗೆ ಅರ್ಜುನನನ್ನು ಹೀನಾಯವಾಗಿ ನಿಂದಿಸಿದಾಗ ಅವನು ಯೋಗಬಲದಿಂದ ಒಡನೆಯೇ ಯಮಧರ್ಮನ ನಿವಾಸವಾದ ಸಂಯಮಿನೀ ಪುರಿಗೆ ಹೋದನು. ॥ ೪೩ ॥ ಅಲ್ಲಿ ಬ್ರಾಹ್ಮಣಕುಮಾರನನ್ನು ಕಾಣದಿದ್ದಾಗ ಶಸ್ತ್ರಧಾರಿಯಾದ ಅವನು ಕ್ರಮವಾಗಿ ಇಂದ್ರ, ಅಗ್ನಿ, ನಿರ್ಋತಿ, ಸೋಮ, ವಾಯು, ವರುಣ ಮೊದಲಾದವರ ಲೋಕಗಳಿಗೆ ಹೋದನು. ಅತಲವೇ ಮೊದಲಾದ ಕೆಳಗಿನ ಲೋಕಗಳಿಗೆ, ಸ್ವರ್ಗದಿಂದ ಮೇಲಕ್ಕಿರುವ ಮಹರ್ಲೋಕಗಳಿಗೂ ಹಾಗು ಇತರ ಸ್ಥಾನಗಳಿಗೂ ಹೋದನು.॥ ೪೪ ॥ ಆದರೆ ಅವನಿಗೆ ಎಲ್ಲಿಯೂ ಬ್ರಾಹ್ಮಣ ಬಾಲಕನು ಸಿಗಲಿಲ್ಲ, ಅವನ ಪ್ರತಿಜ್ಞೆ ಈಡೇರಲಿಲ್ಲ, ಆಗ ಅವನು ಅಗ್ನಿಪ್ರವೇಶಮಾಡಲು ನಿಶ್ಚಯಿಸಿದನು. ಆದರೆ ಭಗವಾನ್ ಶ್ರೀಕೃಷ್ಣನು ಹೀಗೆ ಮಾಡಲು ತಡೆದು ಹೇಳಿದನು – ॥ ೪೫ ॥ ಅಯ್ಯಾ ಅರ್ಜುನ! ನಿನ್ನನ್ನೇ